ಶ್ರೀ

ಫಲ ಜ್ಯೋತಿಷ್ಯ ಜ್ಯೋತಿರ್ಮಾಲಾ — ನಕ್ಷತ್ರ : ೧೪

# ಉದ್ಯೋಗ ಜ್ಯೋತಿಷ್ಯ

ಭಾಗ ೨

## ವೃತ್ತಿ ಮಾರ್ಗದರ್ಶಿ

ಲೇಖಕರು :
ಶ್ರೀ. ಎನ್. ಕೆ. ಜೋಗಳೇಕರ
ಧಾರವಾಡ.



ಪ್ರಕಾಶಕರು
ಎನ್. ಕೆ. ಜೋಗಳೇಕರ
ಸಿ-೭೨ ತೇಜಸ್ವಿನಗರ
ಕಲಘಟಗಿ ರೋಡ
ಧಾರವಾಡ-೨ ೫೮೦೦೦೨
[ ಬೆಲೆ - ಇಪ್ಪತ್ತೈದು ರೂಪಾಯಿಗಳು ]

ಪ್ರಕಾಶಕರು :
ಶ್ರೀ ಎನ್. ಕೆ. ಜೋಗಳೇಕರ
೩-೭೨ ತೇಜಸ್ವಿನಗರ,
ಕಲಘಟಗಿ ರೋಡ,
ಧಾರವಾಡ - ೨
೫೮೦ ೦೦೨

ಪ್ರಥಮ ಮುದ್ರಣ : ೧೯೮೭



ಬೆಲೆ : ೨೫ /– ರೂಪಾಯಿಗಳು.

ಮುದ್ರಕರು :
ಸೌ. ಜಗದೇವಿ ಅ. ಹೊನ್ನಾಪುರಮಠ
ಚಂದ್ರೋದಯ ಮುದ್ರಣಾಲಯ
ಧಾರವಾಡ-೧

# ಆ ತ್ಮ ನಿ ವೇ ದ ನೆ

——

" ಉದ್ಯೋಗಂ ಪುರುಷ ಲಕ್ಷಣಂ " ಎಂಬ ನಾಣ್ಣುಡಿಯನ್ನು ಈಗ
" ಉದ್ಯೋಗಂ ಮಾನವ ಲಕ್ಷಣಂ " ಎಂದು ಪರಿವರ್ತಿಸಿ ಪ್ರಚಲಿತ
ಸ್ಥಿತಿಗೆ ಅನ್ವಯಿಸಬೇಕಾಗಿದೆ. ಏಕೆಂದರೆ ಪುರುಷರು ಹಾಗೂ ಸ್ತ್ರೀಯರು
ಇಬ್ಬರೂ ಉದ್ಯೋಗಸ್ಥರಾಗುವುದು ಈ ಆಧುನಿಕ ಯುಗದಲ್ಲಿ ಅನಿ
ವಾರ್ಯ ಎಂಬಂತಾಗಿದೆ. ಆದರೆ ಉದ್ಯೋಗ ಎಂದಾಗ ಅದರಲ್ಲಿ ಎರಡು
ಪ್ರಕಾರಗಳಿರುವುದರಿಂದ ನೌಕರಿ ಹಾಗೂ ವೃತ್ತಿ ಎಂದು ವಿಭಜಿಸಬಹುದು.
ಫಲ ಜ್ಯೋತಿಷ್ಯದ ಪ್ರಕಾರ ನೌಕರಿಯ ಕಾರಕ ಗ್ರಹ ಲಗ್ನ ಸ್ಥಾನಾದಿಗಳು
ಒಂದು ತೆರನಾಗಿದ್ದರೆ ವೃತ್ತಿಯ ಕಾರಕ ಗ್ರಹ ಸ್ಥಾನ ಲಗ್ನಾದಿಗಳು
ಮತ್ತೊಂದು ತೆರನಾಗಿರುತ್ತವೆ. ಅಂತೆಯೇ ಜ್ಯೋತಿಷ್ಯ ಶಾಸ್ತ್ರದಲ್ಲಿ
ಇದೊಂದು ಅತ್ಯಂತ ಸಂಶೋಧನಾತ್ಮ ಕೃತಿಯಾಗಿದೆ. ನಾನು ೧೯೬೪ರಲ್ಲಿ
" ಉದ್ಯೋಗ ಜ್ಯೋತಿಷ್ಯ " ದ ಪ್ರಥಮ ಸಂಪುಟ ರಚಿಸಿದಾಗ ನೌಕರಿ
ಯನ್ನೇ ಮುಖ್ಯ ಗುರಿಯಾಗಿಟ್ಟುಕೊಂಡು ಆ ಕೃತಿಯನ್ನು ರಚಿಸಿದೆನು.
ಮೂರು ನೂರಾ ಅರವತ್ತು ಪುಟಗಳ ಗಾತ್ರದ ಆ ಕೃತಿಯು ಬೃಹತ್ ಕೃತಿ–
ಗಳಲ್ಲಿಯೇ ಒಂದಾಗಿದೆ. ಆದರೆ ಆ ಗ್ರಂಥದಲ್ಲಿ ನೌಕರಿಗೆ ಸಂಬಂಧಿಸಿದ
ವಿಷಯಗಳ ಕುರಿತು ೨೯೨ ಪುಟಗಳಿದ್ದು ಸ್ವತಂತ್ರ ಉದ್ಯೋಗಸ್ಥರಿಗಾಗಿ
ಕೇವಲ ೪೮ ಪುಟಗಳು ಮಾತ್ರ— ಅದೂ ಕೂಡ ಕೇವಲ ೧೦ ಸ್ವತಂತ್ರ
ಉದ್ಯೋಗಸ್ಥರ ವಿಷಯ ಮಾತ್ರ. ಮುಂದೆ ೧೯೮೨ರಲ್ಲಿ ಉದ್ಯೋಗ
ಜ್ಯೋತಿಷ್ಯದ ಎರಡನೇ ಆವೃತ್ತಿಯನ್ನು ಪ್ರಕಟಿಸಿದಾಗ ಉದ್ಯೋಗ
ಜ್ಯೋತಿಷ್ಯವನ್ನು ಎರಡು ಭಾಗವನ್ನಾಗಿ ವಿಂಗಡಿಸಿ"ಉದ್ಯೋಗ ಜ್ಯೋತಿಷ್ಯ
– ಭಾಗ ೧ ನೌಕರಿಯ ಮಾರ್ಗದರ್ಶಿ" ಎಂದು ಪ್ರಕಟಿಸಲಾಯಿತು.

ಅಲ್ಲಿಂದ ಮತ್ತೆ ಸಂಶೋಧನೆ ಪ್ರಾರಂಭಿಸಿ ಐದು ವರುಷಗಳ ನಂತರ " ಉದ್ಯೋಗ ಜ್ಯೋತಿಷ್ಯ-ಭಾಗ ೨ ವೃತ್ತಿ ಮಾರ್ಗದರ್ಶಿ" ಯೆಂಬ ಫಲಜ್ಯೋತಿಷ್ಯ ಜ್ಯೋತಿರ್ಮಾಲೆಯ ಹದಿನಾಲ್ಕನೆಯ ನಕ್ಷತ್ರವೆಂದು ಓದುಗರಿಗೆ ಅರ್ಪಿಸುವ ಮುನ್ನ ಒಂದು ಕ್ಷಮೆಯನ್ನು ಕೇಳಬೇಕಾಗಿದೆ. ಅದೇನೆಂದರೆ : ಒಂದನೇ ಸಂಪುಟದ ಎರಡನೇ ಆವೃತ್ತಿಯನ್ನು ಪ್ರಕಟಿಸು ವಾಗ ನನ್ನ ಆತ್ಮನಿವೇದನೆಯಲ್ಲಿ ಹೀಗೆ ಹೇಳಿದ್ದೆ— ೧೦೦ ರಿಂದ ೧೫೦ ಪುಟಗಳ ಕೃತಿಯನ್ನು ಮಾತ್ರ ಇನ್ನು ಮುಂದೆ ಪ್ರಕಟಿಸುವದಾಗಿ ಹೇಳಿದ್ದೆ. ಆದರೆ ಈ ಉದ್ಯೋಗ ಜ್ಯೋತಿಷ್ಯದ ಎರಡನೆಯ ಸಂಪುಟ " ವೃತ್ತಿ ಮಾರ್ಗ ದರ್ಶಿ " ಬರೆಯುವಾಗ ಇದರ ಗಾತ್ರ ಮೂರು ನೂರು ಪುಟಗಳಾಗ ಬಹುದೆಂದು ನಾನು ನಿರೀಕ್ಷಿಸಿರಲಿಲ್ಲ. ಆದರೆ ಅತ್ಯಂತ ಮಹತ್ವಪೂರ್ಣ ವಾದ ಸಂಶೋಧನಾತ್ಮಕ ಕೃತಿಯ ಕಾರ್ಯ ಕೈಕೊಂಡಾಗ ಕೇವಲ ಗಾತ್ರದ ಕಡೆಗೆ ಲಕ್ಷ್ಯಕೊಡುವುದು ಅಷ್ಟೊಂದು ಸೂಕ್ತವಾಗದೆಂದು ಬರೆಯುತ್ತಾ ಹೊರಟೆ. ಅದರ ಫಲವೇ ಈ ಬೃಹತ್ ಕೃತಿ. ಈ ಮಹಾನ್ ಕೃತಿಯ ಒಳಗೇನಿದೆ ಎಂಬುದನ್ನು ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಸ್ವತಂತ್ರ ವೃತ್ತಿಯ ನೂರಾರು ಉದ್ಯೋಗಿಗಳ ಬಗೆಗೆ ಜ್ಯೋತಿಷ್ಯ ಶಾಸ್ತ್ರದ ವಿಶ್ಲೇ-ಷಣೆಯನ್ನು ಇದರಲ್ಲಿ ಮಾಡಲಾಗಿದೆ. ಇದರ ಪರಿವಿಡಿಯನ್ನು ನೋಡಿದರೆ ಈ ವಿಷಯದ ವ್ಯಾಪ್ತಿಯ ಸ್ಥೂಲ ಕಲ್ಪನೆ ಬರುವದು.

ಆದಾಗ್ಯೂ ಈ ಸ್ವತಂತ್ರ ವೃತ್ತಿಯವರ ಬಗೆಗೆ ಬರೆಯಬೇಕಾದದ್ದು ಇನ್ನೂ ಬಹಳವಿದ್ದೇ ಇದೆ. ಈಗಾಗಲೇ ಬರೆದು ಪ್ರಕಟಿಸಬೇಕೆಂದು ಹಮ್ಮಿಕೊಂಡಿರುವ ಗ್ರಂಥಗಳು ಪ್ರಕಟವಾದ ಬಳಿಕ ಉದ್ಯೋಗ ಜ್ಯೋತಿಷ್ಯದ ಮೂರನೇ ಸಂಪುಟವನ್ನು ಹೊರ ತರುವೆ. ಅಂದಬಳಿಕ ಉದ್ಯೋಗ ಜ್ಯೋತಿಷ್ಯದ ಆಳವೆಷ್ಟು, ವಿಸ್ತಾರವೆಷ್ಟು ಎಂಬುದರ ಅರಿವು ಆಗದೆ ಇರದು.

ಉದ್ಯೋಗ ಜ್ಯೋತಿಷ್ಯದ ಎರಡನೇ ಸಂಪುಟವಾದ ವೃತ್ತಿ ಮಾರ್ಗ ದರ್ಶಿ ಬರೆಯಲು ಉಪಕ್ರಮಿಸಿದಾಗ ನನಗೆ ಅನೇಕರು ಅನೇಕ ರೀತಿಯಿಂದ ಸಹಾಯ ಮಾಡಿದ್ದಾರೆ. ವಿವಿಧ ವೃತ್ತಿಗಳ ಪೂರ್ಣ ಜ್ಞಾನ ಪಡೆಯಲು

ಸಹಕರಿಸಿದ್ದಾರೆ. ನನ್ನ ಹಿರಿಯ ಮಿತ್ರರಾದ ಸರ್ವಶ್ರೀ ಮಾರ್ತಾಂಡರಾವ ಮರಗಿರಿ, ಮಾರ್ತಾಂಡರಾವ ಐರಣಿ, ಕೆ. ಎಸ್. ಶರ್ಮಾ, ಡಾ॥ ಕೃಷ್ಣಮೂರ್ತಿ ಕಿದಿಯೂರ, ಮೇಸ್ತ್ರಿ ಕಲ್ಲಪ್ಪಾ-ಯಮನಪ್ಪಾ, ಪ್ರಕಾಶ ಹೊಟೇಲ ಮಾಲಕರಾದ ಹರಿದಾಸ ಭಟ್ಟ, ಹುಬ್ಬಳ್ಳಿ ಆನಂದ ಭವನದ ಮಾಲಕರಾದ ಬಾಬುರಾವ, ಶಹಾಜಿ ಸಿಂಧೆ, ಎನ್. ಕೆ. ಕುಲಕರ್ಣಿ, ಮಹಾವೀರ ಪಾಂಡೆ, ಜಿ. ಚಂದ್ರಶೇಖರ, ಮಾಜಿ ಶಾಸಕರಾದ S.V. ಅಗ್ನಿಹೋತ್ರಿ -S.R. ಮೋರೆ· ಕೆ.ಎ. ಕಾಮತ, ಜಿ. ಆರ್. ಹುಯಿಲ್‌ಗೋಳ, ವಾಚ ಡೀಲರ್ಸ ಆರ್.ರಡ್ಡಿ, ಹಾಗೂ ಶಿಲ್ಪಿಗಳಾದ ಆನಂದ ಹೊಸಕೇರಿ-ಶರದ ಹರಿಬಲ, ಸಾಯಿ ಪ್ರಕಾಶ ನಿಸ್‌ಪತ ದೇಸಾಯಿ, ಅಶೋಕ ದಾನಿ ವ್ಹಿ.ಬಿ. ಕನಕಾಪುರ, ಶ್ರೀಮತಿ ಗಂಗುಬಾಯಿ ಹಾನಗಲ್ಲ, ಇವರೆಲ್ಲರಿಗೂ ನಾನು ಚಿರ ಋಣಿ. ಇದರಂತೆ ಹಸ್ತಪ್ರತಿಯನ್ನು ತಯಾರಿಸಲು ನೆರವಾದ ನನ್ನ ಕಿರಿಯ ಮಿತ್ರರಾದ ನಾಗರಾಜಸಿಂಗ, ರಾಮಚಂದ್ರಸಿಂಗ ಠಾಕೂರ ಹಾಗೂ ನನ್ನ ಸೋದರ ಸೊಸೆ ಕುಮಾರಿ ಗೀತಾ ಯಶವಂತ ಆಪ್ಟೇ ಇವರೆಲ್ಲರನ್ನು ನೆನೆಯುವೆ.

ಈ ಪುಸ್ತಕದ ಮುದ್ರಣಕಾರ್ಯದಲ್ಲಿ ನನಗೆ ಹಲವು ವಿಧದಿಂದ ನೆರವಾದ ಶ್ರೀ ಸಿ.ಜಿ. ಹೊನ್ನಾಪುರಮಠ ವಕೀಲರಿಗೆ ನಾನು ಕೃತಜ್ಞನಾಗಿದ್ದೇನೆ. ಇವರು ಕೇವಲ ಮುದ್ರಣತಜ್ಞರಾಗಿರದೆ ನನ್ನ ಆತ್ಮೀಯ ಹಿರಿಯ ಸ್ನೇಹಿತರಿದ್ದು ಕರಡು ಪ್ರತಿ ತಯಾರಿಸಲು, ಕರಡು ಪ್ರತಿ ತಿದ್ದುವುದರಲ್ಲಿಯೂ ಸಹಕರಿಸಿ ನೆರವಾಗಿದ್ದಾರೆ; ಅನೇಕ ಉಪಯುಕ್ತ ಸಲಹೆ-ಸೂಚನೆಗಳನ್ನು ಕೊಟ್ಟಿದ್ದಾರೆ. ಅದಕ್ಕಾಗಿ ಅವರ ನೆರವನ್ನು ಮತ್ತೊಮ್ಮೆ ಸ್ಮರಿಸುವೆ. ಈ ಗ್ರಂಥದ ರಕ್ಷಾ ಕವಚವನ್ನು ಮುದ್ರಿಸಿ ಕೊಟ್ಟ ಕೃಪಾ ಮುದ್ರಣಾಲಯದ ಒಡೆಯರೂ ನನ್ನ ಆತ್ಮೀಯ ಮಿತ್ರರೂ ಆದ ಶ್ರೀ ಎನ್.ಕೆ. ಪೋತನೀಸರಿಗೂ ಕೃತಜ್ಞತೆಗಳು.

ನನ್ನ ಈ ಕೃತಿಯನ್ನು ಅರ್ಪಣೆ ಮಾಡಲು ಅನುಮತಿ ಕೊಟ್ಟ ನನ್ನ ಆತ್ಮೀಯ ಮಿತ್ರರಾದ ಶ್ರೀಯುತ ಕೃಷ್ಣ ಚಿಕ್ಕೋ ಪಾಟೀಲ ( ಕೇಸಿ ) ಇವರ ಅಭಿಮಾನ ಚಿರಸ್ಮರಣೀಯ.

ವಾಚಕರು ನನ್ನ ಉಳಿದ ಕೃತಿಗಳನ್ನು ಬರಮಾಡಿಕೊಂಡಂತೆ ಈ ಹೊತ್ತಗೆಯನ್ನು ಆದರದಿಂದ ಬರಮಾಡಿಕೊಳ್ಳುವರೆಂದು ನಂಬಿರುವೆ.

೧೯೮೭ ಪ್ರಭವ ಸಂವತ್ಸರದ
ಗಣೇಶ ಚತುರ್ಥಿ, ಶುಕ್ರವಾರ
ದಿನಾಂಕ ೨೮-೮-೧೯೮೭

ಎನ್. ಕೆ. ಜೋಗಳೇಕರ
ತೇಜಸ್ವಿನಗರ, ಧಾರವಾಡ,

೦-೦

# ಅ ರ್ಪ ಣೆ

ಅಭಿಜಾತ ಕಲಾವಿದ,

ತಾಂತ್ರಿಕ ತಜ್ಞ,

ಚತುರ ತಾಂತ್ರಿಕ ಶಿಕ್ಷಕ,

ಜನಸೇವಾ ಪ್ರೇಮಿ,

ಪರೋಪಕಾರಿ,

ಸ್ನೇಹಜೀವಿ,

ನನ್ನ ಆತ್ಮೀಯ ಮಿತ್ರ

ಶ್ರೀ ಕೃಷ್ಣ ಚಿಕ್ಕೋಡಿ ಪಾಟೀಲ

ಇವರಿಗೆ

# ಪರಿವಿಡಿ

---

ಅಧ್ಯಾಯ ಪುಟ

ಮೊದಲಾದ ವಾಹನ-ಯಂತ್ರ ರಿಪೇರರ್, ಫಿಟರ-ವೆಲ್ಡರ-ಟರ್ನರ-ಮಿಲ್ಲರ್ ಮೊದಲಾದವರು, ಗ್ರಾಯಿಂಡರ, ಇಸ್ತ್ರಿ, ಮಿಕ್ಸರ ರಿಫ್ರಿಜರೇಟರ (ಇಲೆಕ್ಟ್ರಿಶಿಯನ್ - ವಾಯರಮನ್ನ), ವಿದ್ಯುತ್ ಒಲೆ, ರೇಡಿಯೋ, ಟಿ. ವಿ., ಕ್ಯಾಲ್ಕ್ಯುಲೇಟರ ಮೊದಲಾದ ಇಲೆಕ್ಟ್ರಿಕಲ್ ರಿಪೇರರ್ಸ್, ನಳ, ಕಟ್ಟಡ, ಸೇತುವೆ, ಪಾಯಿಪ್ ಲಾಯಿನ್, ವಾಶಬೆಸಿನ್, ಒಳಚರಂಡಿ (ಪ್ಲಂಬರ) ಇವೇ ಮೊದಲಾದ ರಿಪೇರರ್ಸ ವೃತ್ತಿ.

೧೦ **ಮಾಲಿಕತ್ವ ವೃತ್ತಿ** .... ೨೫೮

ಮನೆ-ಚಾಳ-ಟಾಕೀಜ-ನಾಟ್ಯಮಂದಿರ - ಅಂಗಡಿ-ಕಲ್ಯಾಣ ಮಂಟಪ ಮೊದಲಾದ ಕಟ್ಟಡ ಮಾಲಕರು, ಟ್ರಕ್-ಕಾರು-ರಿಕ್ಷಾ-ಟೆಂಪೊ-ಸ್ಟೋನ್ ಕ್ರಶರ್ - ಕಾಂಕ್ರೀಟ ಮಿಕ್ಸರ, ಗಿರಣಿ-ಕಾರಖಾನೆ ಮೊದಲಾದ ವಾಹನಗಳ-ಯಂತ್ರಗಳ ಮಾಲಕರು, ತೋಟ-ಗದ್ದೆ ಮಾಲಕರು, ಸುಖಿ ವರ್ಗದವರು, ಸರಾಫಿ-ಸಾವಕಾರೀ ವೃತ್ತಿಯವರು.

೧೧ **ರಾಜಕೀಯ-ಸಾಮಾಜಿಕ ಕಾರ್ಯಕರ್ತರ ವೃತ್ತಿ** .... ೨೬೬

ವಿಧಾನ ಸಭೆ ಹಾಗೂ ಪರಿಷತ್ತಿನ ಸದಸ್ಯರು, ಲೋಕ ಸಭೆ ಹಾಗೂ ರಾಜ್ಯ ಸಭೆ ಸದಸ್ಯರು, ಕೇಂದ್ರ ಹಾಗೂ ರಾಜ್ಯಗಳ ಸಚಿವರು, ರಾಷ್ಟ್ರಾಧ್ಯಕ್ಷರು, ರಾಜ್ಯಪಾಲರು, ರಾಯಭಾರಿಗಳು, ವಿವಿಧ ನಿಗಮ-ಬೋರ್ಡ-ಕಾರ್ಪೋರೇಶನ್-ಮಂಡಳ ಅಧ್ಯಕ್ಷರು. ಸದಸ್ಯರು, ಜಿಲ್ಲಾ ಪರಿಷತ್ತು ಹಾಗೂ ಮಂಡಳ ಪಂಚಾಯತ ಸದಸ್ಯರು ಅಧ್ಯಕ್ಷರು ಪ್ರಧಾನರು, ನಗರಸಭೆಗಳ ಸದಸ್ಯರು ಕೌನ್ಸಿಲರರು ಅಧ್ಯಕ್ಷರು, ಸರಪಂಚರು, ಮಹಾನಗರ ಪಾಲಿಕೆಗಳ ಕಾರ್ಪೋರೇಟರ ಮೇಯರರು, ಸ್ಥಾಯಿ ಸಮಿತಿಯ ಅಧ್ಯಕ್ಷರು, ಸ್ಥಾನಿಕ-ಸಹಕಾರಿ, ಶಿಕ್ಷಣ-ಧಾರ್ಮಿಕ, ವೃತ್ತಿ

೦೦–೦೦

॥ ಶ್ರೀ ॥

# ಉದ್ಯೋಗ ಜ್ಯೋತಿಷ್ಯ- ಭಾಗ ೨

# (ವೃತ್ತಿ ಮಾರ್ಗದರ್ಶಿ)



## ವಿಷಯ ಪ್ರವೇಶ

ಆಧುನೀಕರಣ ಹಾಗು ನಾಗರೀಕರಣಗಳಿಂದಾಗಿ ಭಾರತದಲ್ಲಿ ಔದ್ಯೋಗಿಕ ವ್ಯವಸ್ಥೆಯೇ ಆಮೂಲಾಗ್ರ ಬದಲಾವಣೆಯನ್ನು ಹೊಂದುತ್ತಿದೆ, ಸಾಮ್ರಾಜ್ಯಶಾಹಿಗಳು ಭಾರತವನ್ನು ವಸಾಹತುವಾಗಿ ಮಾರ್ಪಡಿಸಿದ ನಂತರ ಭಾರತದಲ್ಲಿ ಆ ಹಿಂದೆ ಪ್ರಚಲಿತವಾಗಿದ್ದ ಉದ್ಯೋಗಗಳು ಶಿಥಿಲಗೊಂಡು ಹೊಸ ಬಗೆಯ ಉದ್ಯೋಗಗಳಿಗೆ ಹಾದಿಯಾಯಿತು. ಪರಂಪರಾನುಗತ ಉದ್ಯೋಗಗಳು ಮಣ್ಣುಪಾಲಾಗಿ ಭಾರತೀಯರು ತಮ್ಮ ಜೀವನೋಪಾಯಕ್ಕೆ ಹೊಸ ಹೊಸ ಮಾರ್ಗಗಳನ್ನು ಹುಡುಕುವುದು ಅನಿವಾರ್ಯವಾಯಿತು. ಬ್ರಿಟಿಶ ಆಳ್ವಿಕೆಯು ಭಾರತದಲ್ಲಿಯ ಉದ್ಯೋಗಗಳ ಇತಿಹಾಸದಲ್ಲಿಯೇ ಒಂದು ಹೊಸ ಅಧ್ಯಾಯವನ್ನು ತೆರೆಯಿತು. ಕಳೆದ ಮೂರು ಶತಮಾನಗಳ ವೈಜ್ಞಾನಿಕ ಹಾಗು ತಾಂತ್ರಿಕ ಅಭಿವೃದ್ಧಿಯು ಉದ್ಯೋಗಗಳ ಕ್ಷೇತ್ರಕ್ಕೆ ಒಂದು ಹೊಸ ಆಯಾಮವನ್ನೇ ತೆರೆಯಿತು. ಬ್ರಿಟಿಶರ ಆಳ್ವಿಕೆಯ ಕಾಲದಲ್ಲಿ ಭಾರತದಲ್ಲಿ ನಡೆದ ಔದ್ಯೋಗೀಕರಣ, ವೈಜ್ಞಾನೀಕರಣ, ತಾಂತ್ರೀಕರಣ ಹಾಗು ನಗರೀಕರಣಗಳ ಸಂಯುಕ್ತ ಫಲವಾಗಿ ಉದ್ಯೋಗಗಳ ಕ್ಷೇತ್ರದಲ್ಲಿ ಒಂದು ಕ್ರಾಂತಿಯೇ ಸಂಭವಿಸಿತು. ತದನಂತರ ಸ್ವಾತಂತ್ರ್ಯದ ಇತಿಹಾಸ ಭಾರತಕ್ಕೆ ಸ್ವಾತಂತ್ರ್ಯ ಲಭ್ಯವಾದ ನಂತರ ಭಾರತದ ಹೊಸ ರಾಜ್ಯ ವ್ಯವಸ್ಥೆಯು ಬ್ರಿಟಿಶರು ಪ್ರಾರಂಭಿಸಿದ ಪಥವನ್ನೇ ಮುಂದುವರಿಸಿತು. ಒಂದು ದೃಷ್ಟಿಯಲ್ಲಿ ಸ್ವಾತಂತ್ರ್ಯಾನಂತರ

ಭಾರತದಲ್ಲಿ ಬಂಡವಾಳದ ಶಕ್ತಿಗೆ ಹೊಸ ಚಾಲನೆ ದೊರೆತಂತಾಯಿತು. ಸ್ವಾತಂತ್ರ್ಯದ ಹೊಸ ಶಕ್ತಿಯು ಈ ಬಂಡವಾಳಗಳ ಚೈತನ್ಯಕ್ಕೆ ಹೆಚ್ಚಿನ ಉತ್ತೇಜನವನ್ನು ಕೊಟ್ಟಿತು. ಒಂದು ಅರ್ಥದಲ್ಲಿ ಅನೇಕ ಹೊಸ ಹೊಸ ಕ್ಷೇತ್ರಗಳಲ್ಲಿ ವೃತ್ತಿ ಅವಕಾಶಗಳು ಹೆಚ್ಚಿದಂತೆ ಪರಂಪರಾನುಗತ ವೃತ್ತಿಗಳಲ್ಲಿ ಹಿಂದು ರೀತಿಯ ಹೊಸ ತಿರುವು ಮೂಡಿಬಂತು. "ನೇಗಿಲಯೋಗಿ"ಯಾಗಿ "ಟ್ರ್ಯಾಕ್ಟರ್‌ರಾಜ"ನಾಗಿ ಪರಿವರ್ತನೆಗೊಂಡ. ಚಕ್ಕಡಿಯ ಮೂಲಕ ಸ್ವಯಂ ಚಾಲಿತ ದ್ವಿಚಕ್ರ, ತ್ರಿಚಕ್ರ, ಚತುಷ್‌ಚಕ್ರ ವಾಹನಗಳ ಮೂಲಕ ಸಾಗತೊಡಗಿದ. ಸಾದಾ ಬೀಜಗಳ ಬಳಕೆ ಹೋಗಿ "ಮಿಶ್ರತಳಿ" ಬೀಜಗಳು ಬಂದವು. ಹೈಬ್ರಿಡೈಜೇಶನ್ ಪ್ರಾರಂಭವಾಯಿತು. ಬೀಜೋತ್ಪಾದನೆ ಒಂದು ಹೊಸ ಉದ್ಯೋಗವಾಯಿತು. ಇದಕ್ಕೆ ಅನುಗಣವಾಗಿ ರಾಸಾಯನಿಕ ಗೊಬ್ಬರ ಉತ್ಪಾದನೆ, ಕ್ರಿಮಿನಾಶಕಗಳ ಉತ್ಪಾದನೆ ಮಾಡುವ ಬೃಹತ್ ಉದ್ಯಮಗಳೂ ಪ್ರಾರಂಭವಾದವು. ಆಹಾರಬೆಳೆಗಳ (ಫುಡ್‌ಕ್ರಾಪ್) ಉತ್ಪಾದನೆ ಕುಸಿಯತೊಡಗಿತು, ಇಲ್ಲವೆ ಆಹಾರ ಬೆಳೆಯುವ ಕ್ಷೇತ್ರ ಕಡಿಮೆಯಾಗಿ ಹಣದ ಬೆಳೆಗಳ (ಮನಿ ಕ್ರಾಪ್ಸ್) ಕ್ಷೇತ್ರ ಹೆಚ್ಚಾಗತೊಡಗಿತು. ಇದಕ್ಕೆ ಪೂರಕವಾಗಿ ಟ್ರ್ಯಾಕ್ಟರ್ ಉತ್ಪಾದನೆ, ಮೋಟಾರಗಳ ಉತ್ಪಾದನೆ, ಆಧುನಿಕ ಕೃಷಿ ಉಪಕರಣಗಳ ಉತ್ಪಾದನೆ ಪ್ರಾರಂಭವಾದವು. ಗ್ರಾಮಗಳಲ್ಲಿ ಬೇರೂರಿದ್ದ ಕಮ್ಮಾರ, ಬಡಿಗ ನಿರುದ್ಯೋಗಿಯಾಗತೊಡಗಿದ. ಗ್ರಾಮಗಳಲ್ಲಿಯ ವೃತ್ತಿ ವ್ಯವಸ್ಥೆಯೇ ಪರಿವರ್ತನೆಗೊಂಡಿತು.

ಇದೇ ರೀತಿಯಾಗಿ ಕೈಮಗ್ಗಗಳು ಮೂಲೆಗುಂಪಾಗಿ ಬೃಹತ್ ಟೆಕ್ಸಟಾಯಿಲ್ ಫ್ಯಾಕ್ಟರಿಗಳು ಏಳತೊಡಗಿದವು. ಬೃಹತ್ ಉದ್ಯಮಗಳಾದ ಉಕ್ಕಿನ ಕಾರಖಾನೆಗಳು, ಯಂತ್ರ ಉತ್ಪಾದನಾ ಕಾರಖಾನೆಗಳು ಪ್ರಾರಂಭವಾದವು. ಇದಕ್ಕೆ ಪೂರಕವಾಗಿ ಮಶಿನ ಟೂಲ್, ಇಲೆಕ್ಟ್ರಿಕ್, ಮೋಟಾರ್ಸ ಪೂರಕ ಭಾಗಗಳ ಉತ್ಪಾದನೆ ಮೊದಲಾದ ಔದ್ಯೋಗೀಕರಣ ಕ್ಷೇತ್ರ ದೈತ್ಯಾಕಾರವಾಗಿ ಬೆಳೆಯಿತು. ವೃತ್ತಿಗಳು ಸಹಸ್ರಾರು ರೂಪಗಳನ್ನು ತಾಳತೊಡಗಿದವು. ಈ ರೀತಿಯಾಗಿ ಭೂ-ಆಧಾರಿತ ಕೃಷಿ ಹಾಗು ಕೃಷಿ ಆಧಾರಿತ ಉದ್ಯಮಗಳು ಒಂದೆಡೆ ಆಧುನೀಕರಣಗೊಂಡು ಬೆಳೆಯ

ತೊಡಗಿದರೆ ಇನ್ನೊಂದೆಡೆಗೆ ಔದ್ಯೋಗೀಕರಣ ಬೃಹತ್ ಯಂತ್ರಗಳ ಉತ್ಪಾದನೆಯಿಂದ ವಿವಿಧ ರೂಪಗಳನ್ನು ಒಳಗೊಂಡು ಮಿತಿಮೀರಿ ಬೆಳೆಯ ತೊಡಗಿತು.

ವಿಜ್ಞಾನ ಬೆಳೆದಂತೆ ವೃತ್ತಿಯಲ್ಲಿ ವಿಶೇಷ ತಜ್ಞತೆ (ಸ್ಪೆಷಲೈಜೇಶನ್) ಜೀವನದ ಒಂದು ಗುರಿಯಾಗತೊಡಗಿತು. ಈ ರೀತಿಯಾಗಿ ವೃತ್ತಿ ಕ್ಷೇತ್ರ ಕ್ಲಿಷ್ಟತೆಯ ಪರಮಾವಧಿಯನ್ನು ಮುಟ್ಟಿದಾಗ ಪ್ರತಿಯೊಬ್ಬ ಭಾರತೀಯ ನಿಗೂ ಅವನ ವೃತ್ತಿಯು ಯಕ್ಷ ಪ್ರಶ್ನೆಯಾಗತೊಡಗಿತು. "ನಾನು ಯಾವ ವೃತ್ತಿಗೆ ಅರ್ಹ?" ಇದು ಅವನಿಗೊಂದು ಬಿಡಿಸಲಾಗದ ಒಗಟವಾಯಿತು. ವೃತ್ತಿ ನಾನಾ ರೂಪಗಳನ್ನು ತಾಳತೊಡಗಿತು. "ನನಗೆ ಯಾವ ವೃತ್ತಿಯಲ್ಲಿ ಶ್ರೇಯಸ್ಸಿದೆ? ನಾನು ಯಾವ ವೃತ್ತಿಯಲ್ಲಿ ಯಶಸ್ಸನ್ನೂ ಕೀರ್ತಿ ಯನ್ನೂ ಶ್ರೀಮಂತಿಕೆಯನ್ನೂ ಗಳಿಸಬಲ್ಲೆ? ನನ್ನ ಅರ್ಹತೆಗೆ, ಯೋಗ್ಯತೆಗೆ, ಸ್ವಭಾವಕ್ಕೆ, ಸಾಮರ್ಥ್ಯಕ್ಕೆ, ಶಿಕ್ಷಣಕ್ಕೆ ಯಾವ ವೃತ್ತಿ ಯೋಗ್ಯ ಹಾಗೂ ಅನುಕೂಲಕರ?" ಮುಂತಾದ ಪ್ರಶ್ನೆಗಳ ಮಾಲಿಕೆಯೇ ಪ್ರತಿಯೊಬ್ಬನನ್ನೂ ಕಾಡತೊಡಗಿತು. ಈ ಎಲ್ಲ ಪ್ರಶ್ನೆಗಳಿಗೆ ಪರಿಹಾರವಾದರೂ ಏನು ಎಂಬುದು ಗೋಚರವಾಗದಿದ್ದಾಗ ಜ್ಯೋತಿಷಿಗೆ,ಜ್ಯೋತಿಷ್ಯ ಶಾಸ್ತ್ರಕ್ಕೆ ಮನುಷ್ಯ ಶರಣು ಹೋಗುತ್ತಾನೆ. ಈ ವೃತ್ತಿ ಸಮಸ್ಯೆಗಳ ಚಕ್ರದಿಂದ ಮನುಷ್ಯನನ್ನು ಪಾರು ಮಾಡಬೇಕಾದರೆ ವಿಜ್ಞಾನದೊಡನೆ ತಂತ್ರಜ್ಞಾನದೊಡನೆ ಸಮಾಜದ ಕ್ಲಿಷ್ಟತೆಗಳೊಡನೆ ಜ್ಯೋತಿಷ್ಯಶಾಸ್ತ್ರವೂ ಬೆಳೆಯದೇ ಹೋಗಿದ್ದರೆ, ಇವುಗಳ ಪರಿಹಾರ ಜ್ಯೋತಿಷ್ಯ ಶಾಸ್ತ್ರಕ್ಕೂ ಒಂದು ಬಿಡಿಸಲಾರದ ಸಮಸ್ಯೆಯೇ ಆಗಬಹುದಾಗಿತ್ತು.

ಈ ಒಂದು ಆಹ್ವಾನವನ್ನು ಜ್ಯೋತಿಷ್ಯ ಶಾಸ್ತ್ರ ಸ್ವೀಕರಿಸಿ ತನ್ನ ಕ್ಷೇತ್ರ ದಲ್ಲಿ ಸಂಶೋಧನೆಗಳನ್ನು ನಡೆಸಲೇಬೇಕಾಯಿತು. ಇರುವ ೯ ಗ್ರಹಗಳನ್ನು ಸೂಕ್ಷ್ಮಾತಿಸೂಕ್ಷ್ಮತೆಯಿಂದ ಅಭ್ಯಸಿಸಿ ಇವುಗಳ ವಿವಿಧ ಹೊಂದಾಣಿಕೆಗಳ ಪ್ರಭಾವಗಳ ತೀಕ್ಷ್ಣತೆಗಳನ್ನು ಕೂಲಂಕಷವಾಗಿ ಅಧ್ಯಯನ ಮಾಡಿ ಈ ಸಹಸ್ರಾರು ಸಮಸ್ಯೆಗಳಾದಿ ಸಮರ್ಪಕ ಪರಿಹಾರಗಳನ್ನು ಕಂಡುಹಿಡಿಯುವ ಪ್ರಯತ್ನ ಇಲ್ಲಿ ಮಾಡಲಾಗಿದೆ. ಈ ನಿರಂತರ ಸಂಶೋಧನೆ ಹಾಗೂ ಸತತ ಪ್ರಯೋಗಗಳ ಫಲವೇ "ಉದ್ಯೋಗ ಜ್ಯೋತಿಷ್ಯದ ಎರಡನೇ ಭಾಗವಾದ

ವೃತ್ತಿಮಾರ್ಗದರ್ಶಿ" ಇದನ್ನು ೧೨ ಅಧ್ಯಾಯಗಳನ್ನಾಗಿ ವಿಂಗಡಿಸಲಾಗಿದೆ (ರೂಢಿಸಿಕೊಳ್ಳಲಾಗಿದೆ). ಅವಾವೆಂದರೆ (೧) ಸ್ವತಂತ್ರ ಉದ್ಯೋಗದ ಕಾರಕ ಗ್ರಹ, ಲಗ್ನ, ಸ್ಥಾನ, ರಾಶ್ಯಾದಿಗಳ ವಿಚಾರ (೨) ಕೃಷಿವೃತ್ತಿ (೩) ಬುದ್ಧಿ ಜೀವಿಗಳ ವೃತ್ತಿ (೪) ಸಾರಿಗೆವೃತ್ತಿ (೫) ಉದ್ಯಮ ವೃತ್ತಿ (೬) ವ್ಯಾಪಾರ ವೃತ್ತಿ (೭) ಏಜನ್ಸಿ ಹಾಗೂ ಗುತ್ತಿಗೆ ವ್ಯವಹಾರ (ಕಂಟ್ರ್ಯಾಕ್ಟರ) ವೃತ್ತಿ (೮) ಕಲಾಕಾರ ಹಾಗು ಕುಶಲ ಕರ್ಮಿಗಳ ವೃತ್ತಿ (೯) ಮಶಿನರಿ ಸಾಮುಗ್ರಿ ವೃತ್ತಿ (೧೦) ಮಾಲಕತ್ವ ವೃತ್ತಿ (೧೧) ರಾಜಕೀಯ, ಸಾಮಾಜಿಕ ಕಾರ್ಯ ಕರ್ತರ ವೃತ್ತಿ (೧೨) ವೃತ್ತಿಗೆ ಸಂಬಂಧಿಸಿದ ಇತರ ವಿಷಯಗಳು. ಜೀವನದ ವಿವಿಧ ವೃತ್ತಿಗಳಲ್ಲಿ ಉಪ ವಿಭಾಗಗಳನ್ನು ಮಾಡಿ ಈ ಪ್ರತಿಯೊಂದು ವಿಶಾಲ ಕ್ಷೇತ್ರದಲ್ಲಿ ಅಡಕವಾಗುವ ವಿವಿಧ ವೃತ್ತಿಗಳನ್ನು ವಿಂಗಡಿಸಿ ಯಾವ ಜಾತಕನಿಗೆ ಯಾವ ವೃತ್ತಿ ಯೋಗ್ಯ, ಯಾವ ವೃತ್ತಿಯಲ್ಲಿ ಯಾವ ಜಾತಕನಿಗೆ ಯಶಸ್ಸಿದೆ, ಯಾವ ವೃತ್ತಿಯಲ್ಲಿ ಯಾವ ಜಾತಕನಿಗೆ ಶ್ರೀಮಂತಿಕೆ ಲಭ್ಯವಿದೆ ಮುಂತಾದ ವಿವಿಧ ಅಂಶಗಳನ್ನು ವಿಶ್ಲೇಷಿಸಲಾಗಿದೆ. ಇದು ಫಲಜ್ಯೋತಿಷ್ಯ ಶಾಸ್ತ್ರಕ್ಕೊಂದು ಮಹತ್ವದ ಪ್ರಯೋಗವಿದ್ದಂತೆ ವೈಜ್ಞಾನಿಕವೂ ಪ್ರಯೋಗಶೀಲವೂ ನವೀನವೂ ಸಂಶೋಧನಾಪೂರಿತವೂ ಆಗಿದೆ ಎಂದು ಹೇಳಬಹುದು, ಈ ಎಲ್ಲ ದೃಷ್ಟಿಕೋನಗಳಿಂದ "ಉದ್ಯೋಗ ಜ್ಯೋತಿಷ್ಯದ ವೃತ್ತಿ ಮಾರ್ಗದರ್ಶನ" ಒಂದು ಮಹತ್ವದ ಕೃತಿಯಾಗಿದೆ. ಜಗತ್ತು ಇಪ್ಪತ್ತೊಂದನೆಯ ಶತಮಾನದೆಡೆಗೆ ಮುನ್ನಡೆಯುವ ಸಿದ್ಧತೆಯಲ್ಲಿ ತೊಡಗಿದಾಗ ಪ್ರತಿ ಭಾರತೀಯನ ವೃತ್ತಿ ಮಾರ್ಗದರ್ಶನಕ್ಕಾಗಿ ಉದ್ಯೋಗ ಜ್ಯೋತಿಷ್ಯ ಪ್ರಕಟವಾಗುತ್ತಿರುವುದು ಹೊಸ ಯುಗದ ಆಗಮನಕ್ಕೆ ಮಾನವ ನಡೆಸುತ್ತಿರುವ ಸಿದ್ಧತೆಗೆ ಒಂದು ಹೊಸ ಮೆರುಗನ್ನೇ ಕೊಡುತ್ತಿದೆಯೆಂದು ನಿಸ್ಸಂದೇಹವಾಗಿ ಹೇಳಬಹುದು.

—

# ೧

# ಸ್ವತಂತ್ರ ಉದ್ಯೋಗದ (ಉದ್ಯೋಗಸ್ಥರ) ಕಾರಕ ಗ್ರಹ-ಲಗ್ನ-ಸ್ಥಾನ-ರಾಶ್ಯಾದಿಗಳ ವಿಚಾರ

ಜೀವನ ನಡೆಸಲು ಉದ್ಯೋಗವನ್ನಂತೂ ಹಿಡಿಯಲೇಬೇಕು. ಉದ್ಯೋಗವನ್ನು ಎರಡು ರೀತಿಯಲ್ಲಿ ವಿಶ್ಲೇಷಿಸಬಹುದು— ಒಂದು ನೌಕರಿ, ಇನ್ನೊಂದು ವೃತ್ತಿ (ಸ್ವತಂತ್ರ ವೃತ್ತಿ). ಇಬ್ಬರೂ ಉದ್ಯೋಗಿಗಳೇ; ಆದರೆ ಒಬ್ಬ ಪರತಂತ್ರ, ಇನ್ನೊಬ್ಬ ಸ್ವತಂತ್ರ. ನೌಕರಿ ಎಂದರೆ ತನ್ನ ದುಡಿಮೆ, ಕುಶಲತೆ, ಬುದ್ಧಿಶಕ್ತಿಗಳನ್ನು ಮಾರಾಟಮಾಡಿ ನಿರ್ದಿಷ್ಟ ವೇತನ ಪಡೆದು ಜೀವನ ಸಾಗಿಸುವದು. ವೃತ್ತಿಯೆಂದರೆ ಬಂಡವಾಳ ಹೂಡಿ ಕುಶಲತೆ-ಜಾಣ್ಮೆ ತೊಡಗಿಸಿ, ಸಾಹಸ, ಅಪಾಯ (ರಿಸ್ಕ) ಕೈಕೊಂಡು ಸ್ವತಂತ್ರವಾಗಿ ಉದ್ಯೋಗ ಕೈಕೊಳ್ಳುವದು. "ಸ್ವತಂತ್ರ ಉದ್ಯೋಗ" ಇದು ವ್ಯಾಪಕಾರ್ಥವುಳ್ಳ ಶಬ್ದವಿರುತ್ತದೆ. ಈ ಶಬ್ದಕ್ಕೆ ಅನೇಕ ಅರ್ಥಗಳನ್ನು ಹಚ್ಚಬಹುದು. P.S.C.,I.A.S.,I.F.S.,I.C.S. ರಂಥ ಪ್ರತಿಭಾನ್ವಿತ ಅಧಿಕಾರಿಗಳು ಮತ್ತು ಖಾತೆಯು ಇಲ್ಲವೆ ಯಾವುದೊಂದು ಕಾರಖಾನೆಯ ಅತಿ ಉಚ್ಚ ಅಧಿಕಾರಿಗಳು ನೌಕರರಾಗಿದ್ದರೂ ಕೂಡ ಒಂದು ರೀತಿಯಿಂದ ಸ್ವತಂತ್ರ ಉದ್ಯೋಗಸ್ಥರಂತೆಯೇ ಇರುವರು. ಆದರೆ ಪ್ರಸ್ತುತ ಈ ಪ್ರಕರಣವಲ್ಲಿ ಜ್ಯೋತಿಷ್ಯ ದೃಷ್ಟಿಯಲ್ಲಿ ಸರ್ವತಂತ್ರ ಸ್ವತಂತ್ರ ಉದ್ಯೋಗಸ್ಥರ ವಿಷಯವಾಗಿ ಮಾತ್ರ ಇಲ್ಲಿ ವಿವೇಚಿಸಲಾಗಿದೆ.

ಇತ್ತೀಚಿಗೆ ಹೊಸ ಉದ್ದಿಮೆಗಳನ್ನು ಸ್ಥಾಪಿಸಲು, ಸ್ವತಂತ್ರ ವೃತ್ತಿಯನ್ನು ಕೈಕೊಳ್ಳಲು ಅನೇಕ ಅವಕಾಶಗಳು ಇರುವುದರಿಂದ ಮತ್ತು ಒಬ್ಬರ ಕೈಕೆಳಗೆ ಕೆಲಸ ಮಾಡುವ ಬದಲು ಸ್ವತಂತ್ರವಾಗಿರಬೇಕೆಂಬ ಸಹಜ ಅಪೇಕ್ಷೆಯಿಂದ ಒಂದಲ್ಲ ಒಂದು ಸ್ವತಂತ್ರ ವೃತ್ತಿ ಕೈಕೊಳ್ಳಲು ಅನೇಕರು ಬಯಸುತ್ತಾರೆ. ಒಂದೆಡೆ ಅಂಥ ಬಯಕೆ ಇದ್ದರೂ ಮತ್ತೊಂದೆಡೆ ಅದರಲ್ಲಿ ಯಶಸ್ಸನ್ನು ಸಂಪಾದಿಸುವ ಅನಿಶ್ಚಿತತಾ ಭಯ ಅವರನ್ನು ಆವರಿಸಿ ಅವರು ಅದರಿಂದ ಹಿಂಜರಿಯುವಂತೆ ಮಾಡುತ್ತದೆ. ಎಂತಹ ಕರ್ತೃತ್ವ ಶಕ್ತಿಯ

ಮಹಾ ಬುದ್ಧಿವಂತ ಉದ್ಯೋಗಿಯೇ ಇರಲಿ, ಸತತೋದ್ಯೋಗಿಯೇ ಇರಲಿ, ಈ ಡೋಲಾಯಮಾನ ಪರಿಸ್ಥಿತಿ ಅವನನ್ನು ಯಾವುದೊಂದು ನಿರ್ಧಾರಕ್ಕೆ ಬಾರದಂತೆ ಮಾಡುತ್ತದೆ. ಇನ್ನೊಂದು ಗಮನಾರ್ಹ ವಿಷಯ ವೆಂದರೆ ಇಂತಹ ಸಮಸ್ಯೆಯನ್ನು ಬಗೆಹರಿಸಲು ಪ್ರಯೋಗ ಮತ್ತು ನಿರೀಕ್ಷಣೆಯ ಮಾರ್ಗವನ್ನು ಅನುಸರಿಸುವುದು ಸರಿಯಾಗದು. ಅಂತಹ ಮಾರ್ಗವನ್ನು ಅನುಸರಿಸಲು ಯಾರೂ ಚಿರಂಜೀವಿಯಾಗಿರುವುದಿಲ್ಲ. ಅದಲ್ಲದೆ ಒಂದು ವೇಳೆ ಸ್ವತಂತ್ರ ಉದ್ಯೋಗ ನಡಿಸಿ ಅದರಲ್ಲಿ ವಿಫಲನಾಗಿ ನೌಕರಿಯನ್ನು ಹಿಡಿಯಬೇಕೆಂಬ ನಿರ್ಧಾರಕ್ಕೆ ಬರುವುದರಲ್ಲಿ ಅವನಿಗೆ ಅನೇಕ ಎಡರು ತೊಡರುಗಳು ಎದುರಾಗುತ್ತವೆ. ಉದಾಹರಣೆಗಾಗಿ— ಯಾವನೊಬ್ಬ ವ್ಯಕ್ತಿಯು ತನ್ನ ವಯಸ್ಸಿನ ೩೬ ವರುಷದವರೆಗೆ ಸ್ವತಂತ್ರ ಉದ್ಯೋಗ ಮಾಡಿ ಅದರಲ್ಲಿ ವಿಫಲನಾಗಿ ಮುಂದೆ ನೌಕರಿಗಾಗಿ ಪ್ರಯತ್ನಿಸುತ್ತಾನೆ ಎಂದು ತಿಳಿಯಿರಿ. ಇಲ್ಲಿ ಅವನಿಗೆ ನೌಕರಿ ದೊರೆಯುವುದು ಕಠಿಣವಾಗುತ್ತದೆ. ವಯಸ್ಸು ಮೀರಿರುವುದರಿಂದ ಸರಕಾರಿ ನೌಕರಿ ದೊರೆಯುವುದು ದುಸ್ತರ ವಾಗುತ್ತದೆ. ಹೀಗಾಗಿ ಅದೂ ಇಲ್ಲ, ಇದೂ ಇಲ್ಲ ಎಂಬ ತ್ರಿಶಂಕು ಶಿಕ್ಷೆಯನ್ನು ಅನುಭವಿಸಬೇಕಾಗುತ್ತದೆ. ಒಟ್ಟಿನಲ್ಲಿ ಸ್ವತಂತ್ರ ಉದ್ಯೋಗಿ ಯಾಗಬೇಕೋ ನೌಕರಿ ಸೇರಬೇಕೋ ಎಂಬ ಸಮಸ್ಯೆ ಪ್ರತಿಯೊಬ್ಬರಿಗೂ ಗಡುಚಾದ ಸಮಸ್ಯೆಯಾಗಿದೆ. ಅತ್ಯುನ್ನತ ಶಿಕ್ಷಣ ಪಡೆದವರು, ಉಚ್ಚ ಅಧಿಕಾರದಲ್ಲಿದ್ದವರು, ಅಧಿಕ ಪಗಾರ ಪಡೆಯುವವರು. ಸಮಾಜದಲ್ಲಿ ಹಾಗೂ ಉದ್ಯೋಗದಲ್ಲಿ ಪ್ರತಿಷ್ಠಿತ ಸ್ಥಾನ ಪಡೆದವರು. ಈ ಮೊದಲಾದವರು ಎಲ್ಲ ಅವಕಾಶ–ಸೌಲಭ್ಯ–ಸೌಕರ್ಯ ಪಡೆಯುತ್ತಿದ್ದರೂ ಕೂಡ ನೌಕರಿಯ ಜೀವನದಲ್ಲಿ ಬೇಸತ್ತು ಸ್ವತಂತ್ರ ಉದ್ಯೋಗ ಕೈಕೊಳ್ಳಬೇಕೆಂಬ ಅಭಿಪ್ರಾಯದವರು ಕೆಲವರು. ಉದಾಹರಣೆಗಾಗಿ— ನಮ್ಮೊರ್ವ ಮಿತ್ರರು M,Sc., M.E.T., I.A.S. ಹಾಗೂ ಅಮೇರಿಕೆಯ ವಿಶ್ವವಿದ್ಯಾಲಯದ Ph. D. ಹೀಗೆ ಹಲವು ಪದವಿಗಳನ್ನು ಪಡೆದವರಿದ್ದು ದೇಶದ ಅನೇಕ ಸ್ಥಳ ಗಳಲ್ಲಿ ಪ್ರಾಂತೀಯ ಹಾಗೂ ಕೇಂದ್ರ ಸರಕಾರದ ಅನೇಕ ಉಚ್ಚ ಅಧಿಕಾರ ಸ್ಥಾನಗಳಲ್ಲಿ ಇದ್ದರಲ್ಲದೆ ಅನೇಕ ಖಾಸಗಿ ಕಾರಖಾನೆಗಳಲ್ಲಿಯೂ ಸಂಸ್ಥೆ ಗಳಲ್ಲಿಯೂ ಜನರಲ್ ಮ್ಯಾನೇಜರ, ವರ್ಕ್ಸ ಮ್ಯಾನೇಜರ ಎಂಬ ಅತ್ಯುಚ್ಚ

ಹುದ್ದೆಯಲ್ಲಿ ಕೆಲಸ ಮಾಡಿ ತಿಂಗಳಿಗೆ ಬರುವ ೩,೦೦೦ ರೂ. ೪,೦೦೦ರೂ. ಗಳಷ್ಟು ಸಂಬಳವನ್ನು ಪಡೆಯುತ್ತಿದ್ದರಲ್ಲದೆ, ಅನೇಕ ಸೌಕರ್ಯ ಸೌಲಭ್ಯ ಗಳನ್ನೂ ಸಹ ಹೊಂದಿದ್ದರೂ ಕೂಡ ಆ ನೌಕರಿಗೆ, ವರಿಷ್ಠ ಹುದ್ದೆಗಳಿಗೆ ತಿಲಾಂಜಲಿಯನ್ನಿತ್ತು ಈಗ ತಮ್ಮದೇ ಆದ ಸ್ವತಂತ್ರ ವೃತ್ತಿಯನ್ನು ಆರಂಭಿಸಿ, ಅದರಲ್ಲಿ ಬರುವ ತಿಂಗಳಿಗೆ ೨,೦೦೦, ೩,೦೦೦ ರೂಪಾಯಿ ಗಳಲ್ಲಿಯೇ ತೃಪ್ತಿಯಿಂದ ಇದ್ದಾರೆ.

ಇನ್ನು ಕೆಲವರು ಸ್ವತಂತ್ರ ಉದ್ಯೋಗ ಮಾಡಲು ಎಲ್ಲ ರೀತಿಯಿಂದ ಸಮರ್ಥರಿದ್ದರೂ ನೌಕರಿಯ ಬೆನ್ನು ಹತ್ತಿದವರು ಅನೇಕರಿದ್ದಾರೆ. ಇದಕ್ಕೆ ಅವರವೇ ಆದ ಕಾರಣಗಳಿರುತ್ತವೆ. ಕಾರಣಗಳು ವಿಚಿತ್ರವಾದರೂ ಸಿಲ್ಲಿ(Silly)ಯಾದರೂ ನಿಜವಾದವಿವೆ.

ಅನೇಕ ಕನ್ಯಾ ಪಿತೃಗಳು, ಪಾಲಕರು ತಮ್ಮ ಮಗಳಿಗೆ ಸ್ವತಂತ್ರ ಉದ್ಯೋಗಸ್ಥರಿಗಿಂತ ಯಾವುದಾದರೊಂದು ಸುಭದ್ರ ನೌಕರಿಯಲ್ಲಿರುವ ವರನನ್ನು ಹುಡುಕುವುದರಲ್ಲಿಯೇ ತೊಡಗುತ್ತಾರೆ. ಈ ಕಾರಣದಿಂದಾಗಿ ಅನೇಕ ವೇಳೆ ಕೆಲವು ಯುವಕರಿಗೆ ಸರಿಯಾದ ಕಾಲದಲ್ಲಿ ಅನುರೂಪ ಕನ್ಯೆ ದೊರೆತು ವಿವಾಹವಾಗುವದು ಕಷ್ಟಕರವಾಗುವ ಸಂದರ್ಭಗಳು ಇವೆ. ಉದ್ಾಹರಣೆಗಾಗಿ— ಇದೇ ಕಾರಣದಿಂದಾಗಿ ನಮ್ಮೊಬ್ಬ ಮಿತ್ರರು ತಿಂಗಳಿಗೆ ಸುಮಾರು ೨,೦೦೦ ೩,೦೦೦ ರೂಪಾಯಿಗಳ ವರಮಾನವಿರುವ ಸ್ವತಂತ್ರ ಉದ್ಯೋಗವನ್ನು ಬಿಟ್ಟು ತಿಂಗಳಿಗೆ ಬರುವ ಕೇವಲ ೧,೨೦೦ ರೂ.ಗಳ ಕಾರಕೂನಿಕೆಯ ಬೆನ್ನು ಹತ್ತಿದ್ದಾರೆ. ವಿವಾಹದ ನಂತರ ಈ ನೌಕರಿಯನ್ನು ಬಿಟ್ಟು ಮತ್ತೆ ತಮ್ಮ ಸ್ವತಂತ್ರ ಉದ್ಯೋಗವನ್ನು ಮುಂದುವರಿಸಬೇಕೆಂಬ ಅಭಿಲಾಷೆಯುಳ್ಳವರಾಗಿದ್ದಾರೆ. ಆದರೆ ಜ್ಯೋತಿಷ್ಯ ದೃಷ್ಟಿಯಲ್ಲಿ ವಿವಾಹ ಯೋಗ, ಸುಖಕರ ವೈವಾಹಿಕ ಜೀವನದ ಯೋಗಗಳೇ ಬೇರೆ ಇರುತ್ತವೆ. ನೌಕರದಾರರಿಗಷ್ಟೇ ವಿವಾಹವಾಗುತ್ತದೆ, ಸ್ವತಂತ್ರ ಉದ್ಯೋಗಸ್ಥರಿಗೆ ವಿವಾಹವಾಗುವುದಿಲ್ಲ ಎಂದು ಯಾರ ಜಾತಕದಲ್ಲಿಯೂ ಕಂಡುಬರಲಾರದು, ಹಾಗೆ ಯಾವ ಫಲಜ್ಯೋತಿಷಿಯೂ ಹೇಳಲಾರ.

ಇನ್ನೊಂದು ಉದಾಹರಣೆ—ನಮ್ಮೋರ್ವ ರಿಕ್ಷಾ ಚಾಲಕ ಮಿತ್ರನಿದ್ದು ತನ್ನ ರಿಕ್ಷಾಚಾಲಕ ವೃತ್ತಿಯಲ್ಲಿ ತನ್ನ ಸಹೋದರಿಗೆ ಎಂ. ಬಿ. ಬಿ. ಬಿಸ್.ದ ವರೆಗೆ ಶಿಕ್ಷಣ ಕೊಡಿಸಿ ಡಾಕ್ಟರಳನ್ನಾಗಿ ಮಾಡಿದನು. ಹಾಗೂ ಆಕೆಯ ವಿವಾಹಕ್ಕಾಗಿ ವರಾನ್ವೇಷಣೆಯಲ್ಲಿ ತೊಡಗಿದಾಗ ರಿಕ್ಷಾಚಾಲಕ ವೃತ್ತಿಯ ಅಂತಸ್ತಿನಿಂದಾಗಿ ಉತ್ತಮ ವರ ದೊರೆಯದಿದ್ದಾಗ ಸಹೋದರಿಗಾಗಿ ತನ್ನ ರಿಕ್ಷಾಚಾಲಕ ವೃತ್ತಿಯನ್ನು ಕೆಲಕಾಲ ತ್ಯಜಿಸಿ ಕೆಲವರುಷ ಸರಕಾರಿ ನೌಕರಿ ಹಿಡಿದು ಉತ್ತಮ ವರನೊಂದಿಗೆ ಸಹೋದರಿಯ ವಿವಾಹ ಮಾಡುವದ ರಲ್ಲಿ ಸಫಲನಾದನು; ಹಾಗೂ ಸಹೋದರಿಯ ವಿವಾಹದ ನಂತರ ಮತ್ತೆ ತನ್ನ ರಿಕ್ಷಾ ವೃತ್ತಿಯನ್ನು ಮುಂದುವರಿಸಿದನು.

ಇನ್ನು ಕೆಲವರು ಕೆಲಕಾಲ ವಿದೇಶಗಳಲ್ಲಿ ನೌಕರಿಮಾಡಿ ಹಣಸಂಪಾದಿಸಿ ಸ್ವದೇಶಕ್ಕೆ ಹಿಂತಿರುಗಿ ಅಲ್ಲಿ ಸಂಪಾದಿಸಿದ ಹಣದಿಂದ ಯಾವುದೊಂದು ಸ್ವತಂತ್ರ ಉದ್ಯೋಗ ಕೈಕೊಳ್ಳಬೇಕೆಂಬ ಅಭಿಲಾಷೆಯುಳ್ಳವರೂ ಇದ್ದಾರೆ.

ಮತ್ತೆ ಹಲವರು ನೌಕರಿಯಲ್ಲಿಯ ಮೇಲಸಂಪಾದನ ಹಣದಿಂದ ಬೇರೆ ಉಪ ಉದ್ಯೋಗವನ್ನು ಬೇರೆಯವರ ಹೆಸರಿನಲ್ಲಿ ಕೈಕೊಳ್ಳುವವರೂ ಇದ್ದಾರೆ. ಒಟ್ಟಿನಲ್ಲಿ ೧೮ ರಿಂದ ೩೨ ರ ವಯಸ್ಸಿನ ಕರ್ತೃತ್ವಶಾಲಿ ಯುವಕ ರಿಗೆ ನೌಕರಿಯೋ ಸ್ವತಂತ್ರ ಉದ್ಯೋಗವೋ ಎಂಬುದು ಬಿಡಿಸಲಾಗದ ಸಮಸ್ಯೆಯಾಗುವದು ಕಂಡುಬರುತ್ತದೆ.

ಇಂತಹ ಗಡುಚಾದ ಸಮಸ್ಯೆಯನ್ನು ಬಿಡಿಸಲು ಉದ್ಯೋಗಾರ್ಥಿ ಗಳು ಅಸಮರ್ಥರಿರುವಾಗ ಅವರಿಗೆ ಸೂಕ್ತಮಾರ್ಗದರ್ಶನ ನೀಡಬಲ್ಲವ ನೆಂದರೆ ಜ್ಯೋತಿಷ್ಯ ಶಾಸ್ತ್ರಸಂಪನ್ನನಾದ ಫಲಜ್ಯೋತಿಷಿಯೇ. ಆತ ಇಂತಹ ಸಮಸ್ಯೆಗಳನ್ನು ಬಿಡಿಸಲು ಸಮರ್ಥನಿದ್ದು ಸಲಹೆ ನೀಡಬಲ್ಲ ಯೋಗ್ಯ ವ್ಯಕ್ತಿ. ಅಂಥವರ ಸಲಹೆ-ಮಾರ್ಗದರ್ಶನ ಅತ್ಯಾವಶ್ಯಕ ಎಂದೆನಿಸತೊಡಗಿ ದ್ದುದು ಆಶ್ಚರ್ಯದ ಮಾತೇನಲ್ಲ.

ಇನ್ನು ಫಲಜ್ಯೋತಿಷ್ಯದಲ್ಲಿ ಇಂತಹ ಸಮಸ್ಯೆಗಳನ್ನು ಹೇಗೆ ಬಿಡಿಸ ಬೇಕು, ಸ್ವತಂತ್ರ ಉದ್ಯೋಗದ ಹಾಗೂ ಉದ್ಯೋಗಸ್ಥರ ಕಾರಕ ಗ್ರಹ, ಸ್ಥಾನ,ಲಗ್ನ, ರಾಶ್ಯಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ :** ಸ್ವತಂತ್ರ ಉದ್ಯೋಗಸ್ಥರ ಕಾರಕಗ್ರಹ ಯಾವುದೆಂಬುದು ತೊಡಕಿನ ಹಾಗೂ ಕ್ಲಿಷ್ಟಕರ ಸಮಸ್ಯೆಯಾಗಿರುತ್ತದೆ. ಏಕೆಂದರೆ ರವಿ, ಮಂಗಳ, ಗುರು ಇವು ಅಧಿಕಾರಕಾರಕ ಗ್ರಹಗಳು. ಬುಧ, ಶುಕ್ರ, ಶನಿ ಇವು ಸೇವಾಪೋಷಕ, ಸೇವಾಕಾರಕ ಗ್ರಹಗಳು. ಪುರುಷ ರಾಶಿಯ ಚಂದ್ರನು ಅಧಿಕಾರ ಕಾರಕ, ಅಧಿಕಾರ ಪೋಷಕ ಗ್ರಹವಾಗಿದ್ದರೆ, ಸ್ತ್ರೀರಾಶಿಯ ಚಂದ್ರನು ಸೇವಾಕಾರಕ, ಸೇವಾ ಪೋಷಕ ಗ್ರಹ.

ಸ್ವತಂತ್ರ ಉದ್ಯೋಗಸ್ಥರು ಅಧಿಕಾರವನ್ನು ಚಲಾಯಿಸುವ ಅಧಿಕಾರಿಗಳೂ ಹೌದು, ಯಾರ ಹಂಗೂ ಇಲ್ಲದೆ ಸ್ವತಂತ್ರ ವೃತ್ತಿಯನ್ನು ಕೈಕೊಂಡ ಸ್ವತಂತ್ರ ಉದ್ಯೋಗಸ್ಥರೂ ಹೌದು. ಎಲ್ಲ ಗುಣಧರ್ಮದ ಕೆಲಸವನ್ನೂ ಕೈಕೊಳ್ಳುವ ಉದ್ಯೋಗಸ್ಥರ ಕಾರಕ ಗ್ರಹ ಯಾವುದೆಂಬುದನ್ನು ನಿರ್ಧರಿಸುವುದು ಸಮಸ್ಯೆಯಲ್ಲವೆ? ಇದೂ ಅಲ್ಲದೆ ಸ್ವತಂತ್ರ ಉದ್ಯೋಗಸ್ಥರಲ್ಲಿಯೂ ಕೂಡ ಅನೇಕ ಪ್ರಕಾರಗಳಿದ್ದು ಭಿನ್ನ ಭಿನ್ನ ಉದ್ಯೋಗಸ್ಥರಿಗೆ ಭಿನ್ನ ಭಿನ್ನ ಗ್ರಹಗಳು ಕಾರಕರಿರುತ್ತಾರೆ. ಉದಾಹರಣೆಗೆ- ನ್ಯಾಯವಾದಿಗಳ (ವಕೀಲರಿ)ಗೆ ಶನಿಯು ಕಾರಕನಿದ್ದರೆ ವ್ಯಾಪಾರಿಗಳಿಗೆ ಬುಧನು, ಕಲಾಕಾರರಿಗೆ ಶುಕ್ರನು, ರಾಜಕೀಯ-ಸಾಮಾಜಿಕ ಕಾರ್ಯಕರ್ತರಿಗೆ ರವಿಯು, ಮಶಿನರಿ ಕೆಲಸಗಾರರಿಗೆ ಮಂಗಳನೂ ಕಾರಕರು. ಹೀಗೆ ವಿಭಿನ್ನ ಸ್ವತಂತ್ರ ಉದ್ಯೋಗಸ್ಥರಿಗೆ ವಿಭಿನ್ನ ಗ್ರಹಗಳು ಕಾರಕ ಹಾಗು ಪೋಷಕ ಇರುತ್ತವೆ.

ಇನ್ನು ನೈಸರ್ಗಿಕವಾಗಿ ಚತುರ್ಥಾಧಿಪತ್ಯವನ್ನು ಹೊಂದಿದ ಚಂದ್ರನೂ ಷಷ್ಠಾಧಿಪತ್ಯವನ್ನು ಹೊಂದಿದ ಬುಧನೂ, ದ್ವಿತೀಯಾಧಿಪತ್ಯವನ್ನು ಹೊಂದಿದ ಶುಕ್ರನೂ ಈ ಮೂರೇ ಗ್ರಹಗಳು ಸ್ವತಂತ್ರ ಉದ್ಯೋಗಸ್ಥರ ಕಾರಕ ಗ್ರಹಗಳು ಇರುತ್ತವೆ ಎಂಬುದಾಗಿ ಕೆಲವು ಜ್ಯೋತಿಷಿಗಳ ಅಭಿಪ್ರಾಯವಿರುತ್ತದೆ.

ಇನ್ನು ಮತ್ತೆ ಕೆಲವು ಜ್ಯೋತಿಷಿಗಳ ಅಭಿಪ್ರಾಯದಲ್ಲಿ ಚಂದ್ರ, ಶುಕ್ರ ಈ ಎರಡೇ ಎರಡೂ ಗ್ರಹಗಳು ಸ್ವತಂತ್ರ ಉದ್ಯೋಗಸ್ಥರ ಕಾರಕ ಗ್ರಹ

ಗಳು. ಇದಕ್ಕೆ ಅವರು ಕೊಡುವ ಕಾರಣವೆಂದರೆ,ಚಂದ್ರಶುಕ್ರರು ಬಲಾಢ್ಯರೂ ಯೋಗಕಾರಕರೂ ಇದ್ದ ಜಾತಕನಿಗೆ ನೌಕರ-ಚಾಕರರ, ಆಳುಹೋಳುಗಳ ಸೌಖ್ಯಸಿಗುತ್ತದೆ. ಚಂದ್ರ-ಶುಕ್ರರು ಬಲಾಢ್ಯರಿದ್ದ ಜಾತಕನಿಗೆ ನೌಕರರ ಸ್ನೇಹ ಸಿಗುತ್ತದೇನೋ ನಿಜ, ಆದರೆ ನೌಕರ ಚಾಕರರ ಸೌಖ್ಯ ಸಿಗಲು ಕೇವಲ ಚಂದ್ರ-ಶುಕ್ರರು ಅಷ್ಟೇ ಕಾರಣರಲ್ಲ; (ರವಿ, ಗುರು ಇವರು ಬಲಾಢ್ಯರಿದ್ದ ಜಾತಕನಿಗೂ ನೌಕರ ಚಾಕರರ ಸೌಖ್ಯಸಿಗುತ್ತದೆ. ಅಷ್ಟೇ ಏಕೆ,ಬಲಾಢ್ಯ ಶುಭ ಗ್ರಹಗಳ ಜಾತಕನಿಗೂ ನೌಕರ ಚಾಕರರ ಸ್ನೇಹ ಸಿಗುತ್ತದೆ. ಇದೂ ಅಲ್ಲದೆ ಎಲ್ಲ ಬಗೆಯ ಸ್ವತಂತ್ರ ಉದ್ಯೋಗಸ್ಥರಿಗೆ ನೌಕರ-ಚಾಕರರ ಅವಶ್ಯ ಕತೆ ಇರುವದಿಲ್ಲ. ಕೆಲವು ವಿಶಿಷ್ಟ ಸ್ವತಂತ್ರ ಉದ್ಯೋಗಸ್ಥರಿಗೆ ಮಾತ್ರ ನೌಕರ-ಚಾಕರ ಸ್ನೇಹದ (ಸಹಾಯದ) ಅವಶ್ಯಕತೆ ಇದೆ. ಲಗ್ನ(ತನುಸ್ಥಾನ) ಹಾಗು ಲಗ್ನೇಶ ಬಲಾಢ್ಯರಿದ್ದ ಜಾತಕನಿಗೆ ಸ್ವತಂತ್ರ ಉದ್ಯೋಗದಲ್ಲಿ ಯಶಸ್ಸು ದೊರೆಯುತ್ತದೆ. ಆದ್ದರಿಂದ ನಮ್ಮ ಅಭಿಪ್ರಾಯದಲ್ಲಿ ಯಾವದೇ ಸ್ವತಂತ್ರ ಉದ್ಯೋಗಸ್ಥನಿಗೆ ಇಲ್ಲವೆ ಸ್ವತಂತ್ರ ಉದ್ಯೋಗಕ್ಕೆ ಕಾರಕ ಗ್ರಹ ಗಳಿಗಿಂತ ಭಾವೇಶನನ್ನೇ ಪರಿಶೀಲಿಸಬೇಕು. ವಿಭಿನ್ನ ಲಗ್ನಗಳ ಯೋಗಕಾರಕ ಗ್ರಹಗಳೇ ಆಯಾ ಸ್ವತಂತ್ರ ಉದ್ಯೋಗಕ್ಕೆ ಕಾರಕವಿರುತ್ತವೆ.

**ಕಾರಕ ಸ್ಥಾನ:** ಯಾವುದೇ ನೌಕರದಾರರಿಗೆ, ವಿಶೇಷವಾಗಿ ಕಾರ ಕೂನ ಹಾಗೂ ಕೆಳದರ್ಜೆಯ ನೌಕರದಾರರಿಗೆ, ದಶಮ,ತೃತೀಯ ಸ್ಥಾನಗಳು ಕಾರಕವಿರುತ್ತವೆ. ಇದರಂತೆ ಅಮಲದಾರರಿಗೆ (ಆಫೀಸರ್ಸರಿಗೆ) ಭಾಗ್ಯ, ಪಂಚಮ, ಲಗ್ನ ಸ್ಥಾನಗಳು ಕಾರಕವಿರುತ್ತವೆ. ಆದರೆ ಸ್ವತಂತ್ರ ಉದ್ಯೋಗ ಸ್ಥರ ಕಾರಕಸ್ಥಾನ ಯಾವುದೆಂಬುದನ್ನು ನಿರ್ಣಯಿಸುವುದು ಕಠಿಣವು. ಏಕೆಂದರೆ ಸ್ವತಂತ್ರ ಉದ್ಯೋಗಸ್ಥರಲ್ಲಿ ಅನೇಕ ಪ್ರಕಾರಗಳಿದ್ದು ಭಿನ್ನ ಭಿನ್ನ ಉದ್ಯೋಗಸ್ಥರಿಗೆ ಭಿನ್ನ ಭಿನ್ನ ಗ್ರಹಗಳು ಕಾರಕವಿರುತ್ತವೆ; ಉದಾಹರಣೆಗೆ — ನ್ಯಾಯವಾದಿಗಳಿಗೆ (ವಕೀಲರಿಗೆ) ಹಾಗೂ ಟ್ಯುಟೋರಿಯಲ್ ಕ್ಲಾಸುಗಳನ್ನು ನಡೆಸುತ್ತಿರುವ ಸ್ವತಂತ್ರ ವೃತ್ತಿಯ ಶಿಕ್ಷಕರಿಗೆ ಸಂಗೀತಗಾರ (ಹಾಡುಗಾರ)ರಿಗೆ ದ್ವಿತೀಯ ಪಂಚಮ ಸ್ಥಾನಗಳು ಕಾರಕವಿದ್ದರೆ, ಟಾಕೀಜ- ಕಾರಖಾನೆಗಳ ಮಾಲಕರಿಗೂ ಉದ್ಯಮದಾರರಿಗೂ ಚತುರ್ಥ,ಷಷ್ಠ,ಭಾಗ್ಯ,

ಲಗ್ನ ಸ್ಥಾನಗಳು ಕಾರಕವಿರುತ್ತವೆ. ಯಂತ್ರ ಸಾಮಗ್ರಿಗಳ ದುರಸ್ತಿದಾರ ವರ್ಗದವರಿಗೆ (ಮೆಶಿನರಿ ರಿಪೇರರ್ಸ) ತೃತೀಯ ಷಷ್ಠ ಸ್ಥಾನಗಳು ಕಾರಕ ವಿರುತ್ತವೆ. ಹೀಗೆ ವಿಭಿನ್ನ ಸ್ವತಂತ್ರ ಉದ್ಯೋಗಸ್ಥರಿಗೆ ವಿಭಿನ್ನ ಸ್ಥಾನ ಗಳು ಕಾರಕ ಇಲ್ಲವೆ ಪೋಷಕ ಇರುತ್ತವೆ.

ಇನ್ನು ನಮ್ಮ ಅಭಿಪ್ರಾಯವಲ್ಲಿ ಸ್ವತಂತ್ರ ಉದ್ಯೋಗಕ್ಕೆ ತನು ಸ್ಥಾನ (ಲಗ್ನ), ಚತುರ್ಥ ಸ್ಥಾನಗಳೇ ಕಾರಕವಿರುತ್ತವೆ. ಏಕೆಂದರೆ ಯಾರೊಬ್ಬರು ಯಾವುದೊಂದು ಸ್ವತಂತ್ರ ಉದ್ಯೋಗ ಕೈಕೊಳ್ಳಬೇಕೋ ಅಥವಾ ಎಲ್ಲಿಯಾದರೂ ನೌಕರಿ ಮಾಡಬೇಕೋ ಎಂಬುದು ಅವರವರ ಪ್ರಕೃತಿ, ಸ್ವಭಾವ, ಗುಣಧರ್ಮಗಳನ್ನು ಅವಲಂಬಿಸಿರುತ್ತದೆ.

ಜಾತಕದ ತನು ಸ್ಥಾನ (ಲಗ್ನ) ದಿಂದ ಸ್ವತಂತ್ರ ಉದ್ಯೋಗಕ್ಕೆ ಬೇಕಾಗುವ ಜಾತಕನ ಸ್ವಭಾವ, ಸಾಮರ್ಥ್ಯ, ವ್ಯಕ್ತಿಮತ್ವ (Personality,) ಗುಣಧರ್ಮ, ಮಹತ್ವಾಕಾಂಕ್ಷೆ, ಧೋರಣೆ, ನಿಲುವು, ಆರೋಗ್ಯ, ಶಾರೀರಿಕ ಸೌಖ್ಯ, ಸ್ವತಂತ್ರ ಉದ್ಯೋಗಕ್ಕೆ ಇರುವ ಅತನ ಒಲವು ಈ ಮೊದಲಾದ ಮಾನಸಿಕ ಸ್ಥಿತಿಗತಿಗಳು ತಿಳಿದುಬರುತ್ತವೆ.

ತನು ಸ್ಥಾನದ ನಂತರ ಚತುರ್ಥ ಸ್ಥಾನವನ್ನು ಪರಿಶೀಲಿಸಬೇಕು. ಏಕೆಂದರೆ ಚತುರ್ಥ ಸ್ಥಾನವು ಕೂಡ ತನು ಸ್ಥಾನದಂತೆ ಮಾನಸಿಕ ಸ್ಥಾನವು, ಸುಖ ಸ್ಥಾನವೂ ಕೂಡ. ಯಾರೊಬ್ಬರ ಸುಖ,ಶಾಂತಿ,ನೆಮ್ಮದಿ ಮೊದಲಾದ ಸಂಗತಿಗಳು ಚತುರ್ಥ ಸ್ಥಾನದಿಂದ ತಿಳಿಯುತ್ತವೆಯಲ್ಲದೆ ಆಳುಹೋಳು ನೌಕರ ಚಾಕರರು ಸ್ಥಾವರ ಇಸ್ಟೇಟ ಸೌಖ್ಯ ಮೊದಲಾದ ಸಂಗತಿಗಳೂ ಸಹ ತಿಳಿಯುತ್ತವೆ. ಇದೂ ಅಲ್ಲದೆ ಚಾಳ-ಲಾಜಿಂಗ-ಟಾಕೀಜ-ಗಿರಣಿ-ಕಾರಖಾನೆಗಳ ಮಾಲಿಕತ್ವ ಅಲ್ಲದೆ ಪಾಲುಗಾರಿಕೆಯು ಇಲ್ಲವೆ ಲಿಮಿಟೆಡ್ ಕಂಪನಿಗಳ ಮಾಲಿಕತ್ವ ಈ ಮೊದಲಾದ ಸಂಗತಿಗಳೂ ಕೂಡ ಚತುರ್ಥ ಸ್ಥಾನದಿಂದ ತಿಳಿಯುತ್ತವೆ.

ತನು, ಚತುರ್ಥ ಸ್ಥಾನಗಳ ನಂತರ ದಶಮ, ಸಪ್ತಮ ಸ್ಥಾನಗಳನ್ನು ಕೂಡ ಪರಿಶೀಲಿಸಬೇಕು. ಏಕೆಂದರೆ ಇವು ತನು (ಲಗ್ನ) ಚತುರ್ಥ ಸ್ಥಾನಗಳು

ಸಮಸಪ್ತಕದಲ್ಲಿ ಇರುವುದರಿಂದ ದಶಮ, ಸಪ್ತಮ ಸ್ಥಾನಗಳಲ್ಲಿರುವ ಗ್ರಹಗಳ ಪ್ರಭಾವದ ಮೇರೆಗೆ ಶುಭ-ಅಶುಭ ಪರಿಣಾಮವಾಗುತ್ತದೆ. ಒಟ್ಟಿನಲ್ಲಿ ಸ್ವತಂತ್ರ ಉದ್ಯೋಗಕ್ಕೆ ತನು(ಲಗ್ನ)ಸ್ಥಾನ, ಚತುರ್ಥ ಸ್ಥಾನಗಳೇ ಪ್ರಧಾನ ಕಾರಕವಿರುತ್ತವೆ.

ಕಾರಕ ಲಗ್ನ : ಸ್ವತಂತ್ರ ಉದ್ಯೋಗಸ್ಥರಿಗೆ ನಿರ್ದಿಷ್ಟವಾದ ಲಗ್ನಗಳೇ ಕಾರಕವಿರುತ್ತವೆ ಎಂಬ ನಿಯಮವಿಲ್ಲ. ಇಲ್ಲಿ ಕಾರಕ ಲಗ್ನಗಳಿಗಿಂತ ಭಿನ್ನ ಭಿನ್ನ ಲಗ್ನಗಳಲ್ಲಿರುವ ಯೋಗಕಾರಕ ಗ್ರಹಗಳೇ ಹೆಚ್ಚು ಕಾರಕವಾಗುತ್ತವೆ.

ರಾಶಿ : ಸ್ವತಂತ್ರ ಉದ್ಯೋಗಕ್ಕೆ ನಿರ್ದಿಷ್ಟ ರಾಶಿಯವರೇ ಇರಬೇಕೆಂಬ ನಿಯಮವಿಲ್ಲದಿದ್ದರೂ ಶುಕ್ಲಪಕ್ಷದ ದಶಮಿಯಿಂದ ಕೃಷ್ಣಪಕ್ಷದ ಪಂಚಮಿಯವರೆಗೆ ಜನಿಸಿದವರು ವೃತ್ತಿಯಲ್ಲಿ ಹೆಚ್ಚು ಯಶಸ್ಸು ಗಳಿಸುವರು. ತದನಂತರ, ಶುಕ್ಲಪಕ್ಷದ ಪ್ರತಿಪದೆಯಿಂದ ಶುಕ್ಲಪಕ್ಷದ ದಶಮಿಯವರೆಗೆ ಜನಿಸಿದ ರಾಶಿಯವರು ಬರುತ್ತಾರೆ. ಆದರೆ ಕೃಷ್ಣಪಕ್ಷದ ಪಂಚಮಿಯಿಂದ ಅಮಾವಾಸ್ಯೆಯವರೆಗೆ ಜನಿಸಿದ ರಾಶಿಯವರು ಸ್ವತಂತ್ರ ಉದ್ಯೋಗದ ಗೊಡವೆಗೆ ಹೋಗಬಾರದು. ಇದಲ್ಲದೆ ಕೆಲವೊಂದು ವಿಶಿಷ್ಟ ಪ್ರಕಾರದ ವೃತ್ತಿಗೆ,ಉದ್ಯೋಗಕ್ಕೆ ವಿಶಿಷ್ಟ ಪ್ರಕಾರದ ರಾಶಿಯವರೇ ಕಾರಕರಿರುತ್ತಾರೆ. ಉದಾಹರಣೆಗೆ— ಬುದ್ಧಿಜೀವಿಗಳ ವೃತ್ತಿಗೆ ವಿಭಿನ್ನ ರಾಶಿಯವರು ಕಾರಕರಿದ್ದರೆ ಕೃಷಿ, ವ್ಯಾಪಾರ, ಉದ್ದಿಮೆ, ಸಾರಿಗೆ ವೃತ್ತಿಗಳಿಗೆ ವಿಭಿನ್ನ ರಾಶಿಯವರು ಕಾರಕರಿರುತ್ತಾರೆ. ಯಾವ ಯಾವ ವೃತ್ತಿಗೆ ಯಾವ ಯಾವ ರಾಶಿಯವರು ಕಾರಕರು ಎಂಬುದನ್ನು ಆಯಾ ಅಧ್ಯಾಯದಲ್ಲಿಯೇ ವಿವೇಚಿಸಲಾಗುವುದು.

ಭಾವೇಶ : ಸ್ವತಂತ್ರ ಉದ್ಯೋಗಸ್ಥರಿಗೆ ಕಾರಕ ಭಾವೇಶರೆಂದರೆ ಲಗ್ನೇಶ, ಚತುರ್ಥೇಶ. ಇವರ ನಂತರ ದಶಮೇಶ, ಸಪ್ತಮೇಶರು. ಈ ಸ್ಥಾನೇಶರು ಬಲಾಢ್ಯರಿದ್ದರೆ ಸ್ವತಂತ್ರ ವೃತ್ತಿಯಲ್ಲಿ ಯಶಸ್ಸು ನೀಡಬಲ್ಲರು. ಇದಲ್ಲದೆ ವಿಭಿನ್ನ ಪ್ರಕಾರದ ವೃತ್ತಿಗೆ ವಿಭಿನ್ನ ಭಾವೇಶರು ಕಾರಕರಿರುತ್ತಾರೆ. ಉದಾಹರಣೆಗೆ— ವಾಚ-ರೇಡಿಯೋ-ಟಿವಿ ರಿಪೇರಿ ವೃತ್ತಿಗೆ ತೃತೀಯೇಶ

ಕಾರಕನಿದ್ದರೆ ನ್ಯಾಯವಾದಿ, ಸಂಗೀತಗಾರ ವ್ಯಕ್ತಿಗೆ ದ್ವಿತೀಯೇಶ ಪಂಚ ಮೇಶರು ಕಾರಕರಿರುತ್ತಾರೆ. ಹೀಗೆ ವಿಭಿನ್ನ ವ್ಯಕ್ತಿಗೆ ವಿಭಿನ್ನ ಭಾವೇಶರು ಕಾರಕರಿದ್ದು ಯಾವ ಯಾವ ವ್ಯಕ್ತಿಗೆ ಯಾವ ಯಾವ ಭಾವೇಶರು ಕಾರಕ ರಿರುತ್ತಾರೆ ಎಂಬ ವಿಶ್ಲೇಷಣೆಯನ್ನು ಆಯಾ ಅಧ್ಯಾಯದಲ್ಲಿ ಮಾಡಲಾಗು ವದು. ಸಾಮಾನ್ಯವಾಗಿ ಹೇಳುವದಾದರೆ, ಯಾವುದೇ ಸ್ವತಂತ್ರ ಉದ್ಯೋಗ ಸ್ಥರಿಗೆ ಲಗ್ನೇಶ, ಚತುರ್ಥೇಶ, ದಶಮೇಶ, ಸಪ್ತೇಶರು ಕಾರಕರಿರುತ್ತಾರೆ.

ಯೋಗಗಳು: ಈ ಕೆಳಗೆ ಬರೆದ ಯೋಗಗಳು ಸ್ವತಂತ್ರ ಉದ್ಯೋಗಸ್ಥರ ಜಾತಕದಲ್ಲಿ ಸಾಮಾನ್ಯವಾಗಿ ಕಂಡುಬರುವವು.

೧) ಲಗ್ನೇಶ, ಚತುರ್ಥೇಶ, ದಶಮೇಶ, ಸಪ್ತಮೇಶ ಈ ನಾಲ್ವರಲ್ಲಿ ಯಾವುದೆ ಇಬ್ಬರು ಭಾವೇಶರು ಬಲಾಢ್ಯರಿರಬೇಕು. ಲಗ್ನೇಶ ನಂತೂ ದುರ್ಬಲನಿರಕೂಡದು.

೨) ಅನೇಕ ಗ್ರಹಗಳು ಉಚ್ಚ ರಾಶಿಯಲ್ಲಿ ಇಲ್ಲವೆ ಸ್ವಗೃಹ ದಲ್ಲಿರಬೇಕು, ಕನಿಷ್ಟ ಪಕ್ಷ ಮಿತ್ರರಾಶಿಯಲ್ಲಿಯಾದರೂ ಇರಬೇಕು.

೩) ಭಿನ್ನ ಭಿನ್ನ ಲಗ್ನಕ್ಕೆ ಇರುವ ಯೋಗ ಕಾರಕ ಗ್ರಹಗಳು ಬಲಾಢ್ಯವಿರಬೇಕು.

೪) ಆಯಾ ವ್ಯಕ್ತಿ ಕಾರಕ ಗ್ರಹಗಳು ಬಲಾಢ್ಯರಿರಬೇಕು.

೫) ಅಷ್ಟಮ ಹಾಗೂ ದ್ವಾದಶಗಳಲ್ಲಿ ಗ್ರಹಗಳಿರಕೂಡದು.

೬) ಚಂದ್ರ, ಶುಕ್ರ, ರವಿ, ಗುರು, ಮಂಗಳರಲ್ಲಿ ಯಾವುದೇ ಮೂರು ಗ್ರಹಗಳು ಜಾತಕದಲ್ಲಿ ಬಲಾಢ್ಯವಿರಬೇಕು.

೭) ವಯಸ್ಸಿನ ೨೦ ರಿಂದ ೫೦ ರವರೆಗಿನ ಕಾಲದಲ್ಲಿ ಬಲಾಢ್ಯ ಗ್ರಹಗಳ ಇಲ್ಲವೆ ಯೋಗಕಾರಕ ಗ್ರಹಗಳ ದಶೆ-ಅಂತರ್ದಶೆ, ನಡೆಯುತ್ತಿರಬೇಕು.

೮) ಸ್ವತಂತ್ರ ಉದ್ಯೋಗ ಪ್ರಾರಂಭಿಸುವ ಸಮಯದಲ್ಲಿ ಸಾಡೇಸಾತಿ ಇಲ್ಲವೆ ಪಂಚಮಾಷ್ಟಮ ಶನಿ ಇರಕೂಡದು.

೯) ಶನಿ–ಚಂದ್ರ, ಶನಿ–ಮಂಗಳ, ಶನಿ–ರವಿ ಇವರ ಯುತಿ ಯೋಗ, ಪ್ರತಿಯೋಗ ಜಾತಕದಲ್ಲಿದ್ದರೆ ಪಾಲುಗಾರಿಕೆ ವ್ಯವಹಾರ ಮಾಡಬಾರದು.

೧೦) ಲಗ್ನ–ಚತುರ್ಥ–ದಶಮ–ಸಪ್ತಮಗಳಲ್ಲಿ ರವಿ–ಶನಿ, ಶನಿ–ಮಂಗಳ, ಶನಿ– ಚಂದ್ರ, ರಾಹು–ಮಂಗಳ, ರವಿ–ಕೇತು ಗ್ರಹ ಯೋಗವಿದ್ದರೆ ಪಾಲುಗಾರಿಕೆ ಉದ್ಯೋಗ ಮಾಡಬಾರದು.

## ೨. ಕೃಷಿ ವೃತ್ತಿ

ಆಧುನಿಕ ಯುಗದಲ್ಲಿ ಕೃಷಿ ಒಂದು ಉದ್ದಿಮೆಯಾಗಿ ಬೆಳೆಯುತ್ತಿದೆ. ಇದನ್ನು ವಾಣಿಜ್ಯದ ತತ್ವಗಳ ಮೇಲೆ ಬೆಳೆಸಬೇಕೆಂಬ ಪ್ರವೃತ್ತಿ ಒಳ ಮೂಡಿದೆ. ಉದ್ದಿಮೆಗಳಲ್ಲಿ ಬಹುಮುಖ ಬೆಳವಣಿಗೆಯ ತತ್ವ (ಪ್ರಿನ್ಸಿಪಲ್ ಆಫ್ ಡೈವರ್ಸಿಫಿಕೇಶನ್) ವನ್ನು ಜಾರಿಗೆ ತರುತ್ತಿರುವಂತೆಯೇ ಕೃಷಿಯಲ್ಲಿಯೂ ಇದೇ ತತ್ವದ ಪ್ರಯೋಗವನ್ನು ನಡೆಸಲಾಗುತ್ತಿದೆ. ಹೀಗಾಗಿ ಕೃಷಿ ವೃತ್ತಿಯೆಂದಾಗ ಅದು ಕೇವಲ ಶೇತ್ಕಿ ಕೆಲಸವೆಂದು ಪರಿಗಣಿಸಲು ಬರುವುದಿಲ್ಲ. ಏಕೆಂದರೆ ಕೃಷಿ ವೃತ್ತಿಯು ಈಗ ಕ್ಲಿಷ್ಟವೂ ವಿಸ್ತೃತವೂ ಆಗಿದೆ. ಆದ್ದರಿಂದ ಈ ವಿಭಾಗದಲ್ಲಿ ಕೃಷಿ, ತೋಟಗಾರಿಕೆ, ಹೈನೋದ್ಯಮ, ಕೋಳಿಸಾಕಾಣಿಕೆ, ಕುರಿಸಾಕಾಣಿಕೆ, ಜೇನ್ನೊಣ ಸಾಕಾಣಿಕೆ, ಮತ್ಸ್ಯೋದ್ಯಮ ಹಂದಿ ಸಾಕಾಣಿಕೆ, ರೇಶಿಮೆ ವ್ಯವಸಾಯ ಹೀಗೆ ಕೃಷಿ ಆಧಾರಿತ (ಇತರ) ವೃತ್ತಿಗಳು ಎಂದು ವಿವಿಧ ವೃತ್ತಿಗಳ ಬಗೆಗೆ ಇಲ್ಲಿ ವಿಶ್ಲೇಷಿಸಿ, ಯಾವ ಜಾತಕನಿಗೆ ಯಾವ ವೃತ್ತಿ ಒಗ್ಗೀತು, ಯಾವ ಉಪವೃತ್ತಿಯಲ್ಲಿ ಯಶಸ್ವಿಯಾಗಬಲ್ಲ, ಈ ವೃತ್ತಿ ಕೈಕೊಳ್ಳಲು ಫಲಜ್ಯೋತಿಷ್ಯದಲ್ಲಿ ಜಾತಕ ಹೇದಿರುತ್ತವೆ, ಕಾರಕ ಗ್ರಹ ಲಗ್ನ ಸ್ಥಾನಾದಿಗಳು ಯಾವವು, ಈ ವೃತ್ತಿಯಲ್ಲಿ ಹಾಗೂ ಉಪ ವೃತ್ತಿಯಲ್ಲಿ ಯಶಸ್ಸು ಪಡೆಯಲು ಯಾವ ಯಾವ ಗ್ರಹಗಳ ಸಂಯೋಗ ಇಲ್ಲವೆ ಸಹಯೋಗ ಪೋಷಕ ಅಥವಾ ಪೂರಕವಾದೀತು ಎಂಬ ಎಲ್ಲ ಅಂಶಗಳ ನಿರೂಪಣೆ ಈ ವಿಭಾಗದಲ್ಲಿದೆ.

# ೧) ಒಕ್ಕಲುತನ (ಬೇಸಾಯಗಾರಿಕೆ)

ಹಿಂದೆಲ್ಲ ಧಾನ್ಯಸಂಪತ್ತಿನಿಂದ ಮೆರೆದ ದೇಶ ನಮ್ಮ ಭಾರತ. ವ್ಯವಸಾಯ ಪ್ರಧಾನವಾದ ನಮ್ಮ ದೇಶ ಇತ್ತೀಚೆಗೆ ಪರದೇಶಗಳಿಂದ ಧಾನ್ಯಗಳನ್ನು ಆಮದು ಮಾಡಿಕೊಳ್ಳುತ್ತಿದೆ. ಭಾರತವು ಯಂತ್ರೋಪಕರಣಗಳನ್ನು ಆಮದುಮಾಡಿಕೊಳ್ಳುವುದು ಸಹಜವಿದೆ, ಮತ್ತು ಔಚಿತ್ಯವಿದೆ. ಆದರೆ ನೂರಕ್ಕೆ ಎಂಬತ್ತರಷ್ಟು ಜನ ಒಕ್ಕಲಿಗರಿರುವ ಈ ದೇಶ ಧಾನ್ಯವನ್ನು ವಿದೇಶಗಳಿಂದ ಆಮದು ಮಾಡಿಕೊಳ್ಳುವುದು ನಿಜವಾಗಿಯೂ ದುರದೃಷ್ಟ ಕರವೆನ್ನಬಹುದು.

ಇಂತಹ ಪರಿಸ್ಥಿತಿ ಬರಲು ನಮ್ಮ ಇಂದಿನ ವ್ಯವಸಾಯ ಪದ್ಧತಿ ಯಶಸ್ವಿಯಾಗಿಲ್ಲವೆಂಬುದು ನಿಜವಿದ್ದರೂ ವ್ಯವಸಾಯಗಾರರ ಸಂಖ್ಯೆ ಕಡಿಮೆಯಾಗಿದೆಯೆಂದು ಹೇಳಲುಬಾರದು. ಈ ಬೇಸಾಯಗಾರಿಕೆಯ ವೃತ್ತಿ ಹಾನಿಕಾರಕವಾಗಲು ಕೃಷಿಕರು ಕೃಷಿಪಂಡಿತರು ರಾಜಕಾರಣಿಗಳು ತಮ್ಮತಮ್ಮವೇ ಆದ ಕಾರಣಗಳನ್ನು ಕೊಡುತ್ತಾರೆ. ಸಾಮಾನ್ಯ ಕೃಷಿಕರ ಅಭಿಪ್ರಾಯದಲ್ಲಿ ಮಳೆಯ ಅನಿಶ್ಚಿತತೆ, ವರುಷದಿಂದ ವರುಷಕ್ಕೆ ಮಳೆಯ ಪ್ರಮಾಣ ಕಡಿಮೆಯಾಗಿರುವುದರಿಂದ ಕೃಷಿವೃತ್ತಿಯು ಲಾಭದಾಯಕ ವಾಗಿಲ್ಲ, ಈ ಮಳೆಯ ಅನಿಶ್ಚಿತತೆಗೆ ಅರಣ್ಯ, ಗಿಡ, ಮರಗಳ ನಾಶ ಒಂದು ಕಾರಣವಾದರೆ ಜನರ ಆಧ್ಯಾತ್ಮಿಕತೆ ಅನೈತಿಕತೆ ಪಾಪಭೀರುತ್ವದ ಅಭಾವ ಕಾರಣವೆನ್ನುತ್ತಾರೆ. ಆದರೆ ಈ ಕಾರಣವು ಎಲ್ಲ ರೈತರಿಗೆ ಏಕೆ ಅನ್ವಯಿಸುವುದಿಲ್ಲ? ಮಳೆಯ ಅನಿಶ್ಚಿತತೆಯಲ್ಲಿಯೂ ಕೂಡ ಕೆಲವು ರೈತರು ಅಧಿಕ ಫಸಲು ಬೆಳೆವ ಉದಾಹರಣೆಗಳೂ ಇವೆ. ಇನ್ನು ಕೆಲ ವೃದ್ಧ ಕೃಷಿಕರ ಅಭಿಪ್ರಾಯದಲ್ಲಿ — ಇಂದಿನ ಯುವ ಜನಾಂಗದ ಕೃಷಿಕರು ಸರಿಯಾಗಿ ಸರಿಯಾದ ಸಮಯದಲ್ಲಿ ದುಡಿಯುವುದಿಲ್ಲ, ಬೆಳಗ್ಗೆ ಬೇಗ ಎದ್ದು ಮುಂಜಾನೆ ೬ ರಿಂದ ೧೦ ರ ಒಳಗೆ ರೆಂಟೆ ಕುಂಟೆ ಹೊಡೆದು ಬಿಸಲಿಗೆ ಬಿಟ್ಟರೆ ಎತ್ತುಗಳೂ ದಣಿಯುವುದಿಲ್ಲ, ಹೊಲದ ಕೆಲಸವೂ ಚೆನ್ನಾಗಿ ಆಗುತ್ತದೆ, ಫಸಲೂ ಚೆನ್ನಾಗಿ ಬರುತ್ತದೆ, ಇವರು ೯ ಗಂಟೆಗೆ ಎದ್ದು ಕೊರಳಲ್ಲಿ ಟ್ರಾಂಜಿಸ್ಟರನ್ನು ಹಾಕಿಕೊಂಡು ಕೆಟ್ಟಬಿಸಿಲಲ್ಲಿ ಬೇಸಾಯ ಮಾಡಿದಲ್ಲಿ ಕೆಲಸವೂ ಸಾಗುವುದಿಲ್ಲ,

ಎತ್ತುಗಳೂ ದಣಿಯುವವು ಎನ್ನುತ್ತಾರೆ. ಇವರ ಮಾತಿನಲ್ಲಿ ನಿಜಾಂಶ ವಿದ್ದರೂ ಯಂತ್ರಸಾಂಗದ ರೈತರೆಲ್ಲರೂ ಹೀಗೆ ಮಾಡುತ್ತಾರೆ ಎಂದು ಹೇಳಲು ಬಾರದು.

ಇನ್ನು ಕೃಷಿ ವಿಷಯವನ್ನು ತೆಗೆದುಕೊಂಡು ಕೃಷಿ ಪದವೀಧರ ರಾದವರೂ ಅಧಿಕಾರಿಗಳೂ ಆದ ಕೃಷಿ ಪಂಡಿತರ ಅಭಿಪ್ರಾಯವೇ ಬೇರೆ. ಅವರ ಮತದಂತೆ ನಮ್ಮ ರೈತಾಪಿ ಜನರು ವೈಜ್ಞಾನಿಕ ರೀತಿಯ ಬೇಸಾಯ ಕೈಕೊಳ್ಳದಿರುವುದರಿಂದ ಕೃಷಿಕರು ಹಾನಿಮಾಡಿಕೊಳ್ಳುತ್ತಾರೆ. ಆದರೆ ವೈಜ್ಞಾನಿಕ ರೀತಿಯಿಂದ ಬೇಸಾಯ ಮಾಡಿ ಹಾನಿಗೊಳಗಾದ ಹಲವು ಕೃಷಿಪಂಡಿತರನ್ನೇ ನೋಡಿದ ಸಾಕಷ್ಟು ಅನುಭವವಿದೆ.

ಇನ್ನು ಕೆಲವು ರಾಜಕೀಯ ವ್ಯಕ್ತಿಗಳ ಅಭಿಪ್ರಾಯ— ಸರಕಾರವು ನೀರಾವರಿಗೆ ಪ್ರಾಶಸ್ತ್ಯ ಕೊಟ್ಟಿಲ್ಲವಾದ್ದರಿಂದ ಕೃಷಿವೃತ್ತಿಯಲ್ಲಿ ಉತ್ಪನ್ನ ಅನಿಶ್ಚಿತವೆನ್ನುತ್ತಾರೆ. ಇವರ ಮಾತಿನಲ್ಲಿ ಕೆಲಮಟ್ಟಿಗೆ ಸತ್ಯಾಂಶವಿದ್ದರೂ ನೀರಾವರಿ ಭೂಮಿಯ ರೈತರೂ ಕೂಡ ಭೂಮಿ ಜವುಳಾಗಿ ಫಸಲು ಸಾಕಷ್ಟು ಬಂದಿಲ್ಲ ಎಂದು ಗುಣಗುಟ್ಟುವವರೂ ಇದ್ದಾರೆ.

ಇನ್ನು ಮತ್ತೆ ಕೆಲವು ರಾಜಕೀಯ ವ್ಯಕ್ತಿಗಳ ಅಭಿಪ್ರಾಯದಲ್ಲಿ ಭೂ ಸುಧಾರಣೆ ಕಾಯದೆಯು ಸರಿಯಾಗಿ ಅಮಲಿನಲ್ಲಿ ಬಾರದಿರುವುದರಿಂದ ಬೇಸಾಯ ವೃತ್ತಿಯಲ್ಲಿ ನಿರುತ್ಸುಕತೆಯಿಂದ ಹಾನಿ ಮಾಡಿಕೊಳ್ಳುತ್ತಾರೆ ಎನ್ನುತ್ತಾರೆ. ಆದರೆ ಇದೂ ಕೂಡ ಸಮರ್ಪಕ ಕಾರಣವಾಗಿಲ್ಲ. ಕಾರಣ ಭೂಸುಧಾರಣೆ ಕಾಯದೆ ಜಾರಿಗೆ ಬಂದಬಳಿಕ ಬೇಸಾಯದಲ್ಲಿ ಆಸಕ್ತಿ ಇರಲಿ ಬಿಡಲಿ, ಹೊಲವನ್ನು ತಮ್ಮ ಅಧೀನದಲ್ಲಿಟ್ಟುಕೊಂಡೇಹೋಗೋಣವೆಂದು ಬೇಸಾಯಮಾಡಿ ಹಾನಿಮಾಡಿಕೊಳ್ಳುವವರೂ ಇದ್ದಾರೆ.

ಮತ್ತೆ ಕೆಲವು ರಾಜಕಾರಣಿಗಳ ಅಭಿಪ್ರಾಯದಲ್ಲಿ ಸಹಕಾರಿ ಪದ್ಧತಿಯ ಬೇಸಾಯವನ್ನು ಜಾರಿಗೆ ತಂದರೆ ಕೃಷಿವೃತ್ತಿ ಲಾಭದಾಯಕವಾಗುತ್ತದೆ. ಸಹಕಾರಿ ತಳಹದಿಯ ಮೇಲೆ [illegible] ವೃತ್ತಿ ಸಂಸ್ಥೆ ಉದ್ಯೋಗಗಳು ಬಹಳಷ್ಟು ಅಸಫಲವಾದ ಉದಾಹರಣೆಗಳಿವೆ.

ಇನ್ನು ಫಲಜ್ಯೋತಿಷ್ಯವು ಕೃಷಿವೃತ್ತಿಯ ವಿಷಯವಾಗಿ ಯಾವ ಪರಿಹಾರ ಸೂಚಿಸುತ್ತದೆ ಎಂಬುದನ್ನು ನೋಡುವಾ.

ಕಾರಕಗ್ರಹ: ಕೃಷಿವೃತ್ತಿಗೆ ಕಾರಕಗ್ರಹ ಯಾವುದೆಂಬುದನ್ನು ತಿಳಿಯುವ ಮೊದಲು ಒಂದು ವಿಷಯವನ್ನು ನೆನಪಿನಲ್ಲಿಟ್ಟುಕೊಳ್ಳಬೇಕು. ಎಲ್ಲ ವ್ಯಕ್ತಿಗಳು ಎಲ್ಲ ವೃತ್ತಿಗಳಲ್ಲಿ ಯಶಸ್ಸು ಪಡೆಯಲಾರರು; ನಿರ್ದಿಷ್ಟವಾದ ಗ್ರಹಯೋಗಗಳಿಲ್ಲದ ಯಾರೂ ಯಶಸ್ವಿ ಬೇಸಾಯಗಾರರಾಗಲು ಸಾಧ್ಯವಿಲ್ಲ. ಆದುದರಿಂದ ಅಂತಹ ಯೋಗವಿದ್ದವರೇ ವ್ಯವಸಾಯವನ್ನು ಕೈಕೊಳ್ಳುವುದು ತಮಗೂ ದೇಶಕ್ಕೂ ಕಲ್ಯಾಣದಾಯಕವು.

ಒಕ್ಕಲುತನ(ಬೇಸಾಯ)ಕ್ಕೆ ಕಾರಕಗ್ರಹವೆಂದರೆ "ಶನಿಯು". ಮಳೆ-ಗಾಳಿ-ಬಿಸಲು ಸಹಿಸುವುದು ಶನಿಯ ಗುಣಧರ್ಮ. ಮೇಲಾಗಿ ಶನಿಯು ಶ್ರಮಜೀವಿಕಾರಕನು; ಒಕ್ಕಲತನಮಾಡುವವರು ಶ್ರಮಜೀವಿಗಳೇ ಇರುತ್ತಾರೆ.

ಎತ್ತಿನಿಂದ ಬೇಸಾಯ ಪ್ರಾರಂಭಿಸುವುದು— ಗಳೆ ರೆಂಟೆ ಕುಂಟೆ ಹೊಡೆಯುವುದಾಗಲೀ ಪೈರುಗಳನ್ನು ಕೊಯ್ಯುವುದಾಗಲೀ ಒಕ್ಕುವುದಾಗಲೀ ಭಾರತೀಯ ಬೇಸಾಯಗಾರರು ತಾವೇ ಸ್ವತಃ ಪರಿಶ್ರಮ ಪಡಬೇಕಾಗುತ್ತದೆ. ಪಾಶ್ಚಿಮಾತ್ಯರಂತೆ ಸಂಪೂರ್ಣವಾಗಿ ಯಂತ್ರಗಳಿಂದಲೇ ಬೇಸಾಯ ಮಾಡುವ ಪದ್ಧತಿ ನಮ್ಮಲ್ಲಿ ಇನ್ನೂ ಬಳಕೆಯಲ್ಲಿ ಬಂದಿಲ್ಲ. ಕೇವಲ ಟ್ರ್ಯಾಕ್ಟರನ್ನು ಮಾತ್ರ ಕೆಲವು ಶ್ರೀಮಂತ ರೈತರು ಬಳಸುತ್ತಾರೆ. ಆಗ ಮಾತ್ರ ಶನಿಯ ಜೊತೆಗೆ ಮಂಗಳನನ್ನು ಪರಿಶೀಲಿಸಬೇಕು. ಆದ್ದರಿಂದ ಶನಿಯು ಯಾರ ಜಾತಕದಲ್ಲಿ ಬಲಾಢ್ಯ ಇರುವನೋ ಅಂಥ ವ್ಯಕ್ತಿಗಳು ಯಶಸ್ವಿ ಬೇಸಾಯಗಾರರಾಗುತ್ತಾರೆ; ಬಲಾಢ್ಯ ಶನಿಯೆಂದರೆ ಭೂ-ರಾಶಿಯ ಇಲ್ಲವೆ ವಾಯು ರಾಶಿಯವನಾಗಿ ರಾಶಿ ಬಲದವನೂ ಸ್ಥಾನ ಬಲದವನೂ ಯೋಗಕಾರಕನೂ ಇರಬೇಕು.

ಶನಿಯ ತರುವಾಯ ಚಂದ್ರನು ಕೃಷಿ ವೃತ್ತಿಗೆ ಕಾರಕನು. ಏಕೆಂದರೆ ಆಹಾರ ಧಾನ್ಯ ಖಾದ್ಯ ವಸ್ತು ಹಣ್ಣುಹಂಪಲ-ಕಾಯಿಪಲ್ಲೆಗಳ ಮೇಲೆ ಚಂದ್ರನ ಪ್ರಭುತ್ವವಿರುತ್ತದೆ. ಅಲ್ಲದೆ ಸಸ್ಯಗಳ ಬೆಳವಣಿಗೆಯ ಮೇಲೆಯೂ

ಚಂದ್ರನ ಪ್ರಭುತ್ವವಿರುತ್ತದೆ. ಇದೂ ಅಲ್ಲದೆ, ಒಕ್ಕಲುತಕ್ಕೆ ಸಹಾಯಕ ವಾಗುವ ಸಾಕುಪ್ರಾಣಗಳಾದ ಎತ್ತು ಆಕಳು ಎಮ್ಮೆ ಕೋಣ ಕುರಿ ಆಡು ನಾಯಿ ಈ ಮೊದಲಾದ ಪ್ರಾಣಿಗಳ ಮೇಲೆಯೂ ಚಂದ್ರನ ಪ್ರಭುತ್ವವಿರು ತ್ತದೆ. ಆದ್ದರಿಂದ ಜಾತಕದಲ್ಲಿ ಚಂದ್ರನು ರಾಶಿ ಬಲದವನೂ ಸ್ಥಾನ ಬಲ ದವನೂ ಯೋಗಕಾರಕನೂ ಇದ್ದ ವ್ಯಕ್ತಿಗಳು ಕೃಷಿ ವೃತ್ತಿಯಲ್ಲಿ ಯಶಸ್ಸು ಪಡೆಯುತ್ತಾರೆ.

**ವಿಭಿನ್ನ ಬೇಸಾಯದ ಕಾರಕಗ್ರಹಗಳು:** ಬೇಸಾಯದಲ್ಲಿ ಎರಡು ಪ್ರಕಾರಗಳಿವೆ (೧) ಒಣಭೂಮಿ ಬೇಸಾಯ (೨) ನೀರಾವರಿ ಆಶ್ರಿತ ಬೇಸಾಯ. ಕೇವಲ ಮಳೆ ಮೇಲೆಯೇ, ಮಳೆಗಾಲದ ಮೇಲೆಯೇ ಅವಲಂಬಿಸಿ ಬೇಸಾಯ ಕೈಕೊಳ್ಳುವುದು ಒಣಬೇಸಾಯಗಾರಿಕೆ. ಇದಕ್ಕೆ ಶನಿಯು ಕಾರಕನಿ ರುತ್ತಾನೆ.

ಹೊಳೆ ಹಳ್ಳಕೆರೆ ಕಾಲುವೆ ಬಾವಿ ಜೋರ ಏತ ಮೊದಲಾದ ನಿಶ್ಚಿತ ನೀರಿನಿಂದ ಬೇಸಾಯ ಕೈಕೊಳ್ಳುವುದು ನೀರಾವರಿ ಆಶ್ರಿತ ಬೇಸಾಯ. ಇದಕ್ಕೆ ಚಂದ್ರನು ಕಾರಕನು. ಆದುದರಿಂದ ಶನಿಯು ಬಲಾಢ್ಯನಿದ್ದ ಜಾತಕನು ಒಣ ಬೇಸಾಯದಲ್ಲಿಯೂ, ಚಂದ್ರನು ಬಲಾಢ್ಯನಿದ್ದ ಜಾತಕನು ನೀರಾವರಿ ಬೇಸಾಯದಲ್ಲಿಯೂ ನಿಪುಣರಿರುತ್ತಾರೆ, ಆದಾಗ್ಗೂ ಶನಿಯು ಬಲಾಢ್ಯನಿರದ ಯಾರೂ ಯಶಸ್ವಿ ಬೇಸಾಯಗಾರರಾಗಲು ಶಕ್ಯವಿಲ್ಲ.

**ವಿಭಿನ್ನ ಬೆಳೆಗಳ ಕಾರಕ ಗ್ರಹಗಳು:**

ಸಾಮಾನ್ಯವಾಗಿ ಬೆಳೆಗಳಲ್ಲಿ ಎರಡೇ ಪ್ರಕಾರಗಳಿವೆ — ೧) ಮುಂಗಾರಿ ಬೆಳೆ ೨) ಹಿಂಗಾರಿ ಬೆಳೆ. ಆದರೆ ಶಾಸ್ತ್ರೀಯವಾಗಿ, ಬೆಳೆ ಬೆಳೆಯುವುದರಲ್ಲಿ ಐದು ಪ್ರಕಾರಗಳಿವೆ.

೧) ಆಹಾರ ಧಾನ್ಯಗಳ ಬೆಳೆ (Food crops)
೨) ಹಣದ ಬೆಳೆ (Money/crops)
೩) ಬೀಜೋತ್ಪಾದನೆ
೪) ಸಸ್ಯ ಸಂಗೋಪನೆ (ನರ್ಸರಿ)
೫) ತೋಟಗಾರಿಕೆ

ಬೆಳೆಯುವುದು ಅಂದರೆ ಎಲ್ಲವೂ ಒಂದೇ, ಇದರಲ್ಲಿ ಅನೇಕ ಪ್ರಕಾರ ವಿಭಾಗಗಳನ್ನು ಮಾಡಬೇಕು ಎಂದು ಕೇಳಬಹುದು. ಆದರೆ ವಿಭಿನ್ನ ಪ್ರಕಾರದ ಬೆಳೆ ಬೆಳೆಯಲು ವಿಭಿನ್ನ ಗ್ರಹಗಳು ಕಾರಕವಿರುತ್ತವೆ. ಇಲ್ಲಿಯ ಊ ಒಂದು ಪ್ರಶ್ನೆ ಉದ್ಭವಿಸುತ್ತದೆ. ಉದಾಹರಣೆಗಾಗಿ ಯಾರೊಬ್ಬ ಬೇಸಾಯ ಗಾರ ಗೋದಿ ಬೆಳೆಯುವುದರಲ್ಲಿ ನಿಪುಣನಿದ್ದಾನೆ ಎಂದು ತಿಳಿದರೆ ಬತ್ತ ಬೆಳೆಯಲು ಆತನಿಗೆ ಬರುವುದಿಲ್ಲವೋ, ಹತ್ತಿ ಬೆಳೆಯಲು ಬರುವುದಿಲ್ಲವೋ ಹೀಗೇಕೆ ಭಿನ್ನ ಭಿನ್ನ ಧಾನ್ಯಗಳನ್ನು ಬೆಳೆಯಲು ಅಲ್ಲಿಯ ಹವೆ, ಭೂಮಿ, ಮಳೆ ಕಾರಣವೆ ವಿನಃ ವಿಭಿನ್ನ ಗ್ರಹಗಳು ಕಾರಕವಲ್ಲ ಎಂಬ ಒಂದು ತರ್ಕ ಅಥವಾ ವಾದಸರಣಿ ಮುನ್ನು ಒಡ್ಡಬಹುದು. ಇದಕ್ಕೆ ಉತ್ತರವಿಷ್ಟೇ ಸಾಮಾನ್ಯವಾಗಿ ಎಲ್ಲ ವೈದ್ಯ ಡಾಕ್ಟರರು ಎಲ್ಲ ರೋಗಗಳಿಗೂ ಔಷಧ ಕೊಡು ತ್ತಾರೆ. ಗಾಯಕರು ಎಲ್ಲ ರಾಗಗಳನ್ನು ಹಾಡಬಲ್ಲರು, ಆದರೆ ಒಬ್ಬೊಬ್ಬ ಡಾಕ್ಟರರು ಒಂದೊಂದು ರೋಗದ ವಿಶೇಷ ಪರಿಜ್ಞಾನ ಉಳ್ಳವರೂ ಸಿದ್ಧಹ ಸ್ತರೂ ಇರುತ್ತಾರೆ. ಇದರಂತೆ ಎಲ್ಲ ಗಾಯಕರು ಎಲ್ಲ ರಾಗಗಳನ್ನು ಹಾಡಬಲ್ಲ ವರಿದ್ದರೂ ಕೆಲವೊಂದು ರಾಗಗಳಲ್ಲಿ ಕೆಲವು ಗಾಯಕರು ವಿಶೇಷ ಪರಿಣತಿ ಯುಳ್ಳವರಿರುತ್ತಾರೆ. ಹಾಗೆಯೇ ಎಲ್ಲ ಬೇಸಾಯಗಾರರು ಎಲ್ಲ ಪ್ರಕಾರದ ಬೆಳೆಗಳನ್ನು ಬೆಳೆಯಬಲ್ಲವರಿದ್ದರೂ, ಕೆಲ ಬೆಳೆ ಬೆಳೆಯುವ ವಿಧಾನ ಬೇರೆ ಇರುವುದರಿಂದ ವಿಶಿಷ್ಟ ಪ್ರಕಾರದ ಬೆಳೆ ಬೆಳೆಯಲು ವಿಶಿಷ್ಟ ಗ್ರಹಗಳು ಕಾರಕವಿರುತ್ತವೆ. ಹೇಗೆ ಚಿಕ್ಕಮಕ್ಕಳಿಗೆ ಬರುವ ರೋಗಗಳ ನಿವಾರಣೆಯಲ್ಲಿ ತಜ್ಞತೆ ಇರುವ ಡಾಕ್ಟರರು ಇರುವರೋ ಹಾಗೆ ನರ್ಸರಿಯೆಂದರೆ ಸಸ್ಯ ಸಂಗೋಪನ ಕೆಲಸದಲ್ಲಿ ವಿಶಿಷ್ಟ ಗ್ರಹಗಳು ಕಾರಕವಿರುತ್ತವೆ. ವಿಶಿಷ್ಟ ಗ್ರಹವೆಂದರೆ ಚಂದ್ರನು. ಚಂದ್ರನು ಬಲಾಢ್ಯನಿರದೇ ಯಾರೂ ಸಸ್ಯ ಸಂಗೋ ಪನೆಯಲ್ಲಿ ಯಶಸ್ವಿಯಾಗಲಾರರು. ಅಂತೆಯೇ ತೆಂಗಿನ ಸಸಿ, ಚಿಕ್ಕೂ ಸಸಿ, ಪೇರಲ ಸಸಿ, ಮಾವಿನ ಸಸಿ, ಮೆಣಸಿನ ಮಡಿ, ಟೊಮೇಟೋ ಬದನಿ ಮೊದಲಾದ ಕಾಯಿ ಪಲ್ಲೆಗಳ ಮಡಿ ತಯಾರಿಸುವುದರಲ್ಲಿ, ಸಸ್ಯಗಳನ್ನು ಸಂರಕ್ಷಿಸಿ ಸಂಗೋಪನ ಮಾಡಿ ಮಾರಾಟ ಮಾಡುವದರಲ್ಲಿ ಚಂದ್ರನು ಬಲಾಢ್ಯನಿರುತ್ತಾನೆ. ಅಷ್ಟೇ ಏಕೆ, ಇತ್ತೀಚೆಗೆ ಬತ್ತ ಮೊದಲಾದವುಗಳನ್ನು ನಾಟೀ ಮಾಡಿ ಮಾರುವವರು ಅನೇಕರಿದ್ದಾರೆ. ನರ್ಸರೀಯಲ್ಲಿ ರಾಶಸ್ತು

ಪಡೆಯಲು ಚಂದ್ರ-ಶುಕ್ರರು ಬಲಾಢ್ಯರಿರುತ್ತಾರೆ, ಅಲ್ಲದೆ ಅನೇಕ ಗ್ರಹಗಳು ಸ್ತ್ರೀ ರಾಶಿಯಲ್ಲಿರುತ್ತವೆ. ವಿಶೇಷವಾಗಿ ಚಂದ್ರ-ಶುಕ್ರರು. ಇದರಂತೆ ತೋಟಗಾರಿಕೆ ಬೆಳೆ ಬೆಳೆಯಲು ಕೂಡ ಚಂದ್ರನೇ ಕಾರಕನು. ಚಂದ್ರನು ಬಲಾಢ್ಯನಿರದೆ ಯಾರೂ ತೋಟಗಾರಿಕೆಯಲ್ಲಿ ಯಶಸ್ವಿಯಾಗಲಾರರು.

ಬೀಜೋತ್ಪಾದನೆಯು ಕೂಡ ಇಂದು ಹೊಸ ಉದ್ಯಮವಾಗಿದೆ. ಬೀಜೋತ್ಪಾದನೆಯಲ್ಲಿ ಯಶಸ್ವಿಯಾಗಲು ಶನಿಯೊಂದಿಗೆ ಸ್ತ್ರೀ ಗ್ರಹಗಳಾದ ಚಂದ್ರ-ಶುಕ್ರರನ್ನು ಪರಿಶೀಲಿಸಬೇಕು. ಯಶಸ್ವೀ ಬೀಜೋತ್ಪಾದಕರಲ್ಲಿ ಶನಿ-ಚಂದ್ರ-ಶುಕ್ರರು ಬಲಾಢ್ಯರಿರುವರಲ್ಲದೆ, ಅನೇಕ ಗ್ರಹಗಳು ಸ್ತ್ರೀ ರಾಶಿಯಲ್ಲಿರುತ್ತವೆ.

ಇತ್ತೀಚೆಗೆ ಹಣದ ಬೆಳೆಯ ಕ್ಷೇತ್ರ ಹೆಚ್ಚಾಗಹತ್ತಿದೆ. ಈ ಹಿಂದೆ ಹತ್ತಿ, ಜೂಟ, ಶೇಂಗಾ, ತಂಬಾಕು ಮೊದಲಾದ ಕೆಲವೇ ಪದಾರ್ಥಗಳು ಹಣದ ಬೆಳೆಗಳಾಗಿದ್ದವು. ಇಂದು ಆಲೂಗಡ್ಡೆ, ಕಬ್ಬು, ವರಲಕ್ಷ್ಮೀ ಹತ್ತಿ, ದ್ರಾಕ್ಷಿ ಮೊದಲಾದ ಅನೇಕ ಪದಾರ್ಥಗಳನ್ನು ಅಧಿಕವಾಗಿ ಬೆಳೆಯಹತ್ತಿದ್ದಾರೆ. ಆದಾಗ್ಯೂ ಎಲ್ಲ ಬೇಸಾಯಗಾರರೂ ಹಣದ ಬೆಳೆ ಬೆಳೆಯುವುದರಲ್ಲಿ ಯಶಸ್ವಿಯಾಗಿಲ್ಲ. ಸಾಲಮಾಡಿ ಹಣ ತೊಡಗಿಸಿ ಬಹಳ ಪರಿಶ್ರಮಪಟ್ಟರೂ ಕೂಡ ಹಾನಿಮಾಡಿಕೊಂಡ ಅನೇಕ ರೈತರನ್ನೂ ನೋಡಿದ ಅನುಭವವಿದೆ. ಆದ್ದರಿಂದ ಹಣದ ಬೆಳೆಯಲ್ಲಿ ಯಶಸ್ವಿಯಾಗಲು ಶನಿಯ ಸಂಗತ ಬುಧ-ಶುಕ್ರರನ್ನೂ ಪರಿಶೀಲಿಸಬೇಕು. ಇಲ್ಲಿ ಶನಿಯು ರಾಶಿ ಬಲದವನೂ ಸ್ಥಾನ ಬಲದವನೂ ಇದ್ದರೆ, ಬುಧ-ಶುಕ್ರರು ರಾಶಿ ಬಲದವರಿದ್ದರೆ ಸಾಕು. ಆದರೆ ಶತ್ರುಕ್ಷೇತ್ರಿ, ನೀಚ, ಇಲ್ಲವೆ ಅಸ್ತಂಗತ ಇರಕೂಡದು.

ಇನ್ನು ಜೋಳ, ಗೋದಿ, ಭತ್ತ, ಅಕ್ಕಡಿಕಾಳು, ದ್ವಿದಳ ಧಾನ್ಯ, ಎಣ್ಣೆಕಾಳು ಮೊದಲಾದ ಖಾದ್ಯ ಆಹಾರ ಬೆಳೆಯುವುದರಲ್ಲಿ ಜಾತಕದಲ್ಲಿ ಶನಿಯೋರ್ವನೇ ಬಲಾಢ್ಯನಿರದೆ ಯಾರೂ ಯಶಸ್ವಿ ಆಹಾರ ಧಾನ್ಯ ಬೆಳೆಗಾರರಾಗಲಾರರು.

**ಕಾರಕ ಸ್ಥಾನ:** ಸ್ಥಾನ ದೃಷ್ಟಿಯಿಂದ ನೋಡಿದರೆ ಗದ್ದೆ, ಹೊಲ–ಮನೆ, ತೋಟಪಟ್ಟಿ, ಸ್ಥಾವರ ಇಸ್ಟೇಟಗಳ ಸ್ಥಾನವಾದ ಚತುರ್ಥ ಸ್ಥಾನವೇ ಕೃಷಿ ವೃತ್ತಿಯ, ಒಕ್ಕಲುತನ ಉದ್ಯೋಗದ ಕಾರಕ ಸ್ಥಾನವು. ಆದುದರಿಂದ ಚತುರ್ಥ ಸ್ಥಾನದಲ್ಲಿರುವ ಗ್ರಹಗಳು, ಚತುರ್ಥೇಶನು ಬಲಾಢ್ಯರಿರದೆ ಯಾರೂ ಯಶಸ್ವಿ ಬೇಸಾಯಗಾರರಾಗಲಾರರು.

ಚತುರ್ಥ ಸ್ಥಾನದ ನಂತರ ಷಷ್ಠ ಹಾಗೂ ದ್ವಾದಶ ಸ್ಥಾನಗಳನ್ನು ಪರಿಶೀಲಿಸಬೇಕು; ಏಕೆಂದರೆ ಒಕ್ಕಲುತನಕ್ಕೆ ಬೇಕಾಗಬಹುದಾದ ಸಾಕುಪ್ರಾಣಿಗಳಾದ ಎತ್ತು ಎಮ್ಮೆ ಆಕಳು ಕುರಿ ಕೋಣ ನಾಯಿ ಇವುಗಳ ಕಾರಕ ಸ್ಥಾನಗಳೆಂದರೆ ಷಷ್ಠ ದ್ವಾದಶ ಸ್ಥಾನಗಳು. ಆದರೆ ಚತುರ್ಥ ಸ್ಥಾನ, ಚತುರ್ಥೇಶ ಬಲಾಢ್ಯರಿರಬೇಕು. ಅಂದರೆ ರಾಶಿ ಬಲದವರೂ ಸ್ಥಾನ ಬಲದವರೂ ಇರಬೇಕು. ಷಷ್ಠ, ದ್ವಾದಶ ಸ್ಥಾನಗಳೂ ಆಯಾ ಸ್ಥಾನಾಧೀಶರೂ ಬಲಾಢ್ಯರಿರದಿದ್ದರೂ ದುರ್ಬಲರಿರಕೂಡದು.

**ಲಗ್ನ :** ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ಲಗ್ನದವರೆ ಕೃಷಿವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ ಎಂದು ಹೇಳಲು ಬಾರದಿದ್ದರೂ ಮೇಷ, ವೃಷಭ, ತುಲಾ, ವೃಶ್ಚಿಕ, ಕುಂಭ ಈ ಲಗ್ನದವರೂ ತದನಂತರ ಕರ್ಕ, ಮಕರ, ಮೀನ ಲಗ್ನದವರೂ ಕೃಷಿ ವೃತ್ತಿಯಲ್ಲಿ ಯಶಸ್ವಿಯಾಗು–ತ್ತಾರೆ.

**ರಾಶಿ :** ರಾಶಿ ದೃಷ್ಟಿಯಿಂದ ನೋಡಿದರೆ ಮಳೆ, ಗಾಳಿ, ಬಿಸಿಲು ಸಹಿಸುವುದು ಹೊಲ ಗದ್ದೆ ಮೊದಲಾದ ಪ್ರದೇಶಗಳಲ್ಲಿ ದುಡಿಯುವುದು ಇವು ಗಂಡಸರ ಕೆಲಸ, ಅರ್ಥಾತ್ ಪುರುಷರ ಕೆಲಸ; ಅಂದರೆ ಗ್ರಹಗಳು ಹೆಚ್ಚಾಗಿ ಪುರುಷ ರಾಶಿಯಲ್ಲಿರಬೇಕು. ಆದ್ದರಿಂದ ಪುರುಷ ರಾಶಿಯಲ್ಲಿ ಚಂದ್ರನು ಅಂದರೆ ಮೇಷ–ಮಿಥುನ–ಸಿಂಹ–ತುಲಾ–ಧನು–ಕುಂಭ ಈ ರಾಶಿಯವರು ಬೇಸಾಯ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ. ಆದರೆ ಈ ರಾಶಿಯವರು ಆಹಾರ ಧಾನ್ಯ ಹಾಗೂ ಹಣದ ಬೆಳೆ ಬೆಳೆಯುವುದರಲ್ಲಿ ಮಾತ್ರ. ವೃಷಭ, ಕರ್ಕ, ಕನ್ಯಾ, ವೃಶ್ಚಿಕ, ಮಕರ, ಮೀನ ರಾಶಿಯವರು

ತೋಟಗಾರಿಕೆ ಹಾಗೂ ನರ್ಸರಿ ಬೆಳೆಗಳಲ್ಲಿ ಯಶಸ್ವಿಯಾಗುತ್ತಾರೆ. ಇದ ರೀತಿ ಮಿಥುನ, ತುಲಾ, ಕುಂಭ, ಕರ್ಕ, ಮೀನ, ವೃಷಭ, ಕನ್ಯಾ ಈ ರಾಶಿ ಯವರು ಬೀಜೋತ್ಪಾದನೆ ಬೆಳೆಗಳಲ್ಲಿ ನಿಪುಣರಿರುತ್ತಾರೆ.

**ಯೋಗಗಳು :** ಚತುರ್ಥೇಶ, ಷಷ್ಠೇಶರು ಬಲಾಢ್ಯರಿದ್ದ ಜಾತ ಕರು ಕೃಷಿ ವೃತ್ತಿಯಲ್ಲಿ ಯಶಸ್ಸು ಪಡೆಯುತ್ತಾರೆ. ಶನಿ-ಚಂದ್ರಚತುರ್ಥೇಶ ರಲ್ಲಿ ಯಾವುದೇ ಎರಡು ಸಂಗತಿಗಳು ಬಲಾಢ್ಯರಿದ್ದಾರೆ. ಕೃಷಿ ವೃತ್ತಿಯಲ್ಲಿ ಯಶಸ್ವಿಗಳಾಗುತ್ತಾರೆ.

## ೨. ಕೋಳಿ ಸಾಕಾಣಿಕೆ ವೃತ್ತಿ

ಕಳೆದ ೧೦–೧೫ ವರುಷಗಳಲ್ಲಿ ನಮ್ಮ ದೇಶದಲ್ಲಿ ಕೋಳಿ ಸಾಕಾಣಿ ಕೆಯು ಒಂದು ವೃತ್ತಿಯಾಗಿ ಭರದಿಂದ ಬೆಳೆಯಹತ್ತಿದೆ. ಹಾಗೂ ಇದರಲ್ಲಿ ಕಲ್ಪನಾತೀತ ಸುಧಾರಣೆಯಾಗ ತೊಡಗಿದೆ. ಸತ್ವಯುತ ಆಹಾರದ ಕೊರತೆ ಯನ್ನು ಹೋಗಲಾಡಿಸಲು, ಜನರು ತತ್ತಿಗಳನ್ನು ಹೆಚ್ಚೆಚ್ಚು ಬಳಸುತ್ತಿ ದ್ದಾರೆ. ಹಾಲಿನಂತೆ ತತ್ತಿಗಳೂ ಸಹ ಮಾನವರಿಗೆ ಗೃಥಕಾಯವಾದ ಹಾಗೂ ಆರೋಗ್ಯವಾದ ದೇಹದ ಬೆಳವಣಿಗೆಗೆ ಅಗತ್ಯವಿರುವ ಸಸಾರಜನಕವುಳ್ಳ ವಾಗಿರುವವು. ಅಲ್ಲದೆ ಕೋಳಿಗೆ ಹುಂಜಗಳಿಂದ ಮೆಟ್ಟಸದೆ ಕೋಳಿ ನೀಡುವ ತತ್ತಿಗಳಿಂದ ಮರಿಗಳು ಬರುವುದಿಲ್ಲ. ಆದ್ದರಿಂದ ಇಂಥ ತತ್ತಿಗಳು ಶಾಕಾ ಹಾರವೆಂದು ಪರಿಗಣಿಸುಪವರಿದ್ದಾರೆ. ಹೀಗಾಗಿ ಇವುಗಳ ಸೇವನೆ ಹಾಗೂ ಬಳಕೆ ಮೊದಲಿಗಿಂತ ಹೆಚ್ಚಾಗಿದೆ. ಬಳಕೆಗೆ ತಕ್ಕಂತೆ ಪೂರೈಕೆ ಅವಶ್ಯವಿದೆ. ಆದ್ದರಿಂದಲೇ ಸರಕಾರದವರು ಆಕಾಂಕ್ಷಿಗಳಿಗೆ ಧನಸಹಾಯಪರಾಡಿ (ಸಬ್ ಸಿಡಿ ಕೊಟ್ಟು) ಈ ಉದ್ಯೋಗ ಕೈಕೊಳ್ಳಲು ಎಲ್ಲಿಲ್ಲದ ಪ್ರೋತ್ಸಾಹ ಕೊಡು ತ್ತಿದ್ದಾರೆ. ತನ್ಮೂಲಕ ನಿರುದ್ಯೋಗ ಸಮಸ್ಯೆ ಕಲಮಟ್ಟಿಗೆ ಕಡಿಮೆಯಾಗಲು ಸಹಾಯವಾಗುತ್ತದೆ. ಇದೂ ಅಲ್ಲದೆ, ಶಾಲಾ-ಕಾಲೇಜ ಶಿಕ್ಷಣದ ಜೊತೆಗೆ

ಇಲ್ಲವೆ ಉದ್ಯೋಗ-ನೌಕರಿ ಮಾಡುತ್ತಲೇ, ಹೆಚ್ಚು ಶ್ರಮ ಪಡದೆ, ಕಡಿಮೆ ಬಂಡವಾಳ ತೊಡಗಿಸಿ, ಇದೊಂದು ಉಪಉದ್ಯೋಗವನ್ನಾಗಿ ಕೈಕೊಳ್ಳ ಬಹುದು. ಅಷ್ಟೇ ಏಕೆ, ಮನೆಯಲ್ಲಿ ಮಹಿಳೆಯರು ಮಕ್ಕಳೂ ಕೂಡ ಈ ವೃತ್ತಿಗೆ ಸಹಾಯವಾಗುವರು.

ಈ ವೃತ್ತಿ ಕೈಕೊಂಡವರೆಲ್ಲರೂ ಯಶಸ್ವಿಯಾಗಿರುವುದಿಲ್ಲ, ಕೈಸುಟ್ಟು ಕೊಂಡವರೂ ಅನೇಕರಿದ್ದಾರೆ. ಹೀಗೇಕೆ ? ಈ ವೃತ್ತಿ ಯಶಸ್ವಿ ಹಾಗೂ ಲಾಭದಾಯಕವಾಗಬೇಕಾದರೆ, ಆನುವಂಶಿಕ ಹಳೇ ಪದ್ಧತಿಗಳನ್ನು ಬದಲಿಸಿ ಸುಧಾರಿಸಿದ ಶಾಸ್ತ್ರೀಯ ಪದ್ಧತಿಯನ್ನು ಕೈಕೊಳ್ಳುವುದು ಆವಶ್ಯವೆಂದು ವೃತ್ತಿ ತಜ್ಞರ ಅಭಿಪ್ರಾಯ. ಆದರೆ ವೈಜ್ಞಾನಿಕ ರೀತಿಯಿಂದ ಕೋಳಿ ಸಾಕಾಣಿಕೆ ವೃತ್ತಿ ಕೈಕೊಂಡವರೂ ಕೂಡ ಹಾನಿಗೊಳಗಾದ ಅನೇಕ ಜನರ ನ್ನು ನೋಡಿದ ಅನುಭವವಿದೆ. ಆದ್ದರಿಂದ ಫಲಜ್ಯೋತಿಷ್ಯವು ಈ ವೃತ್ತಿಯ ವಿಷಯವಾಗಿ ಯಾವ ಬೆಳಕನ್ನು ಚೆಲ್ಲಬಲ್ಲದು, ಈ ವೃತ್ತಿ ಕೈಕೊಳ್ಳುವವರ ಜಾತಕ ಹೇಗಿರಬೇಕು, ಈ ವೃತ್ತಿಯ ಕಾರಕ ಗ್ರಹ-ಲಗ್ನ- ಸ್ಥಾನ- ರಾಶ್ಯಾ ದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕಗ್ರಹ :** ಈ ವೃತ್ತಿಯ ಕಾರಕ ಗ್ರಹ ಯಾವುದೆಂಬುದನ್ನು ತಿಳಿಯುವ ಮೊದಲು ಈ ವೃತ್ತಿಯಲ್ಲಿಯ ಪ್ರಕಾರಗಳನ್ನು ತಿಳಿದುಕೊಳ್ಳು ವುದು ಅವಶ್ಯವು. ಏಕೆಂದರೆ ಈ ವೃತ್ತಿಯಲ್ಲಿಯೂ ಕೂಡ ವಿವಿಧ ಭಾಗಗಳಿ ರುವುದರಿಂದಲೂ ವಿವಿಧ ಪ್ರಕಾರದ ಕೆಲಸಗಳಿರುವುದರಿಂದಲೂ ಅನೇಕ ಗ್ರಹ ಗಳು ಕಾರಕವಿರುತ್ತವೆ. ಆದ್ದರಿಂದ ಈ ವೃತ್ತಿಯ ವಿವಿಧ ಭಾಗಗಳಾವವು ಎಂಬುದನ್ನು ಮೊದಲು ತಿಳಿಯುವಾ.

**ಕೋಳಿ ಸಾಕಾಣಿಕೆಯಲ್ಲಿಯ ಪ್ರಕಾರಗಳು :**

ಕೋಳಿ ಸಾಕಾಣಿಕೆಯಲ್ಲಿ ನಾಲ್ಕು ಪ್ರಕಾರಗಳಿವೆ. (೧) ಕೋಳಿ ಮರಿ ಗಳ ಜೋಪಾನ (೨) ತತ್ತಿಗಾಗಿ ಕೋಳಿ ಸಾಕಾಣಿಕೆ (೩) ಮಾಂಸಕ್ಕಾಗಿ ಕೋಳಿ ಸಾಕಾಣಿಕೆ (೪) ಮರಿ ಕುಕ್ಕುಟ ಉತ್ಪಾದನೆ (ಹೆಚರಿ). ಯಾವುದೇ

ಉದ್ದೇಶಕ್ಕಾಗಿ ಇಲ್ಲವೆ ಯಾವುದೇ ಪ್ರಕಾರದ ಕೋಳಿ ಸಾಕಾಣಿಕೆಯ ವೃತ್ತಿ ಕೈಕೊಂಡರೂ ಜಾತಕದಲ್ಲಿ ಚಂದ್ರನು ಬಲಾಢ್ಯನಿರದೆ ಯಾರೂ ಕೋಳಿ ಸಾಕಾಣಿಕೆ ವೃತ್ತಿಯಲ್ಲಿ ಯಶಸ್ಸು ಪಡೆಯಲಾರರು. ಆದ್ದರಿಂದ ಚಂದ್ರನೇ ಈ ವೃತ್ತಿಯ ಕಾರಕಗ್ರಹ.

(೧) ಇನ್ನು ಒಂದು ದಿವಸದ ಮರಿಗಳನ್ನು ತರಿಸಿ ಕೃತಕ ರೀತಿಯ ಜೋಪಾನಮಾಡುವ ವಿಧಿವಿಧಾನಗಳನ್ನು ಅನುಸರಿಸಿ ತತ್ತಿ ಇಡುವ ಅವಧಿಯ ವರೆಗೆ ಮರಿಗಳನ್ನು ಜೋಪಾನ ಮಾಡುವ, ಬೆಳೆಸುವ ವೃತ್ತಿಗೆ ಚಂದ್ರನು ಜಾತಕದಲ್ಲಿ ಬಲಾಢ್ಯನಿರಲೇಬೇಕು. ಬಲಾಢ್ಯ ಚಂದ್ರನೆಂದರೆ ಕ್ಷೀಣ ನಿರಬಾರದು, ದುರ್ಬಲನಿರಬಾರದು. ಶನಿ ದೃಷ್ಟಿತ, ರಾಹು ದೃಷ್ಟಿತ, ಪಾಪ ಗ್ರಹ ದೃಷ್ಟಿತ ಇರಕೂಡದು; ರಾಶಿ ಬಲದವನೂ ಸ್ಥಾನ ಬಲದವನೂ ಯೋಗ ಕಾರಕನೂ ಇರಬೇಕು.

ಚಂದ್ರನ ತರುವಾಯ ಶುಕ್ರನೂ ಕೂಡ ಈ ವೃತ್ತಿಗೆ ಕಾರಕನು. ಏಕೆಂದರೆ ಮರಿಗಳನ್ನು (ಹೆಚರಿ) ಜೋಪಾನ ಮಾಡುವುದರಲ್ಲಿ ನೈಪುಣ್ಯತೆ ಪಡೆಯಲು ಸ್ತ್ರೀ ಗ್ರಹಗಳಾದ ಚಂದ್ರ-ಶುಕ್ರರು ಜಾತಕದಲ್ಲಿ ಬಲಾಢ್ಯರಿರ ಬೇಕಾಗುತ್ತದೆ.

(೨) ತತ್ತಿ ಇಡಬೇಕಾದ ವಯಸ್ಸಿನ ಬೆಳೆದ ಮರಿಗಳನ್ನು ಕೊಂಡು ತಂದು ಸಾಕಿ, ಜೋಪಾನ ಮಾಡಿ ತತ್ತಿ ಮಾರಾಟ ಮಾಡುವ ವೃತ್ತಿಗೆ ಚಂದ್ರನ ಸಂಗಡ ಬುಧನನ್ನೂ ಪರಿಶೀಲಿಸಬೇಕು. ಏಕೆಂದರೆ ವ್ಯಾಪಾರಿ ವೃತ್ತಿಯ ಕಾರಕ ಗ್ರಹವೆಂದರೆ ಬುಧನು. ಯಾವುದೇ ಪ್ರಕಾರದ ವ್ಯಾಪಾರ, ಮಾರಾಟಕ್ಕೆ ಬುಧನು ಬಲಾಢ್ಯನಿರದೆ ಯಾರೂ ಯಶಸ್ವಿ ವ್ಯಾಪಾರಗಾರ ರಾಗಲಾರರು.

(೩) ತತ್ತೀ ಇಡುವ ಕೋಳಿಗಳು ಸೂಕ್ಷ್ಮವಿದ್ದು, ಅವುಗಳ ಆರೈಕೆಯು, ಪೋಷಣೆಯು ವಿಧಿ ವಿಧಾನ ಬೇರೆ ಇವೆ. ಮಾಂಸಕ್ಕಾಗಿ ಕೋಳಿಸಾಕಾಣಿಕೆಯ ವಿಧಾನ ಭಿನ್ನವಿರುತ್ತದೆ. ಆದ್ದರಿಂದ ಇಲ್ಲಿ ಚಂದ್ರ-ಬುಧರ

ಸಂಗಡ ರಾಹು-ಮಂಗಳರನ್ನು ಪರಿಶೀಲಿಸಬೇಕು. ಏಕೆಂದರೆ ಮಾಂಸ ವ್ಯಾಪಾರಕ್ಕೆ ರಾಹು-ಮಂಗಳರು ಕಾರಕರು. ಆದರೆ ಇಲ್ಲಿ ಚಂದ್ರ-ಬುಧರು ರಾಶಿ ಬಲದವರೂ ಸ್ಥಾನ ಬಲದವರೂ ಯೋಗಕಾರಕರೂ ಇದ್ದರೆ, ರಾಹು, ಮಂಗಳರು ಕೇವಲ ರಾಶಿಬಲದವರಿರುತ್ತಾರೆ.

(೪) ಕುಕ್ಕುಟ ಉತ್ಪಾದನಾ ಉದ್ಯಮ: ಕೋಳಿ ಸಾಕಾಣಿಕೆಯು ಒಂದು ವೃತ್ತಿ, ಆದರೆ ಕೋಳಿ ಉತ್ಪಾದನೆಯು ಒಂದು ಉದ್ಯಮವು. ಉದ್ಯಮ, ಅಂದರೆ ಅದರ ಕಾರಕ ಲಗ್ನ ರಾಶಿ ಸ್ಥಾನ ಯೋಗಗಳು ಬೇರೆ ಇದ್ದು, ಅವುಗಳ ವಿವರಣೆಯನ್ನು ಇದೇ ಗ್ರಂಥದ ಉದ್ಯಮ ಭಾಗದಲ್ಲಿ ಕೊಡಲಾಗಿದೆ. ಪ್ರಸ್ತುತ ಇಲ್ಲಿ ಈ ವಿಷಯಕ್ಕೆ ಸಂಬಂಧಿಸಿದ ವಿಷಯ ಮಾತ್ರ ಇರುತ್ತದೆ.

ಕುಕ್ಕುಟ ಉತ್ಪಾದನೆಯ ಕಾರಕ ಗ್ರಹವೆಂದರೆ ಮಂಗಳನು. ಏಕೆಂದರೆ ಉತ್ಪಾದನೆ ಎಂದರೆ ಕಾರಖಾನೆ ನಡೆಸಿದಂತೆ ಲಕ್ಷಗಟ್ಟಲೆ ಹಣ (ಬಂಡವಾಳ) ತೊಡಗಿಸಿ ಲಕ್ಷಾವಧಿ ವೆಚ್ಚದಿಂದ ದೊಡ್ಡ ಮಶಿನರಿ ತರಿಸಿ ಲಕ್ಷಗಟ್ಟಲೆ ಕುಕ್ಕುಟಗಳನ್ನು ಉತ್ಪಾದಿಸಲು ಮಂಗಳನು ಬಲಾಢ್ಯನಿರದೆ ಯಾರೂ ಈ ಉದ್ಯಮದಲ್ಲಿ ಯಶಸ್ವಿಯಾಗಲಾರರು. ಆದ್ದರಿಂದ ಮಂಗಳನು ರಾಶಿ ಬಲದವನೂ ಸ್ಥಾನ ಬಲದವನೂ ಯೋಗ ಕಾರಕನೂ ಇರಬೇಕು. ಆದರೆ ಚಂದ್ರ ಮಾತ್ರ ಕೇವಲ ರಾಶಿ ಬಲವನಿದ್ದರೆ ಸಾಕು.

ಲಗ್ನ : ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ಕರ್ಕ, ತುಲಾ, ವೃಶ್ಚಿಕ, ಮೀನ ಈ ಲಗ್ನದವರು ಕೋಳಿ ಮರಿಗಳ ಜೋಪಾನ ಮಾಡುವದರಲ್ಲಿ ಯಶಸ್ವಿಯಾಗುತ್ತಾರೆ.

ಮೇಷ, ವೃಷಭ, ಮಿಥುನ, ಕನ್ಯಾ, ಧನು, ಮಕರ, ಮೀನ ಈ ಲಗ್ನದವರು ತತ್ತಿಗಾಗಿ ಕೋಳಿ ಸಾಕಾಣಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

ಮೇಷ, ಕರ್ಕ, ಸಿಂಹ, ವೃಶ್ಚಿಕ, ಧನು, ಮಕರ ಈ ಲಗ್ನದವರು ಮಾಂಸಕ್ಕಾಗಿ ಕೋಳಿ ಸಾಕಾಣಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

ಮೇಷ, ಕರ್ಕ, ಸಿಂಹ, ವೃಶ್ಚಿಕ, ಧನು, ಮಕರ ಲಗ್ನದವರು ಕುಕ್ಕುಟ ಉತ್ಪಾದನೆಯಲ್ಲಿ ಯಶಸ್ವಿಯಾಗುತ್ತಾರೆ.

**ಸ್ಥಾನ :** ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಕೋಳಿ ಸಾಕಾಣಿಕೆಯ ಕಾರಕ ಸ್ಥಾನವೆಂದರೆ ಷಷ್ಠವು. ಷಷ್ಠ ಹಾಗೂ ಷಷ್ಠೇಶರು ಬಲಾಢ್ಯರಿರದೆ ಯಾರೂ ಯಾವುದೇ ಪ್ರಕಾರದ ಕೋಳಿ ಸಾಗಾಣಿಕೆ ವೃತ್ತಿಯಲ್ಲಿ ಯಶಸ್ವಿಯಾಗಲಾರರು. ಷಷ್ಠದ ನಂತರ ಚತುರ್ಥ ಹಾಗೂ ತೃತೀಯ ಸ್ಥಾನಗಳು ಕಾರಕವಿರುತ್ತವೆ. ಏಕೆಂದರೆ ಕೋಳಿ ಸಾಕಾಣಿಕೆಗೆ ಪ್ರತ್ಯೇಕವಾದ ವೈಜ್ಞಾನಿಕ ರೀತಿಯ ಸುಸಜ್ಜಿತವಾದ ಮನೆ ಅವಶ್ಯವು. ಯಾವುದೊಂದು ಗುಡಿಸಿಲಲ್ಲಿ ಕೋಳಿ ಸಾಕಾಣಿಕೆ ವೃತ್ತಿ ಕೈಕೊಳ್ಳುತ್ತೇನೆ ಎಂದರೆ ಆಗದು. ಮನೆ ಅಂದರೆ ಚತುರ್ಥಸ್ಥಾನ. ಚತುರ್ಥಸ್ಥಾನ, ಚತುರ್ಥೇಶ ಬಲಾಢ್ಯರಿರದೆ ಯಾರಿಗೂ ಮನೆಯ ಸೌಖ್ಯ ಸಿಗದು.

ಕೋಳಿ ಸಾಕಾಣಿಕೆ ವೃತ್ತಿಯಲ್ಲಿ ಮರಿಗಳ ಚುಂಚು ಕತ್ತರಿಸುವುದು, ಅವುಗಳಿಗೆ ಆಹಾರ, ನೀರು, ಔಷಧಿ ಕೊಡುವುದು ಈ ಮೊದಲಾದ ಕೆಲಸಗಳನ್ನು ಸ್ವತಃ ಮಾಡಬೇಕಾಗುವುದರಿಂದ ಜಾತಕದ ತೃತೀಯ ಸ್ಥಾನವನ್ನು ಪರಿಶೀಲಿಸಬೇಕಾಗುತ್ತದೆ. ತೃತೀಯ ಸ್ಥಾನ, ತೃತೀಯೇಶ ಬಲಾಢ್ಯರಿದ್ದವರು ಯಾವುದೇ ಪ್ರಕಾರದ ಕೋಳಿ ಸಾಕಾಣಿಕೆಯಲ್ಲಿ ಯಶಸ್ವಿಯಾಗುತ್ತಾರೆ. ಆದರೆ ತೃತೀಯೇಶ, ತೃತೀಯ ಸ್ಥಾನ ದುರ್ಬಲವಿದ್ದವರು ಪರಾವಲಂಬನದಿಂದಾಗಿ ಹಾನಿ ಮಾಡಿಕೊಳ್ಳುತ್ತಾರೆ.

**ರಾಶಿ :** ರಾಶಿ ದೃಷ್ಟಿಯಿಂದ ನೋಡಿದರೆ ವೃಷಭ, ಕರ್ಕ, ಕನ್ಯಾ ರಾಶಿಯವರೂ ತದನಂತರ ಮಿಥುನ, ತುಲಾ, ಕುಂಭ ರಾಶಿಯವರೂ ಕೋಳಿ ಮರಿಗಳನ್ನು ಜೋಪಾನ ಮಾಡುವ ವೃತ್ತಿಯಲ್ಲಿ ಯಶಸ್ವಿಯಾದರೆ, ಮಿಥುನ ತುಲಾ, ಕುಂಭ, ತದನಂತರ ವೃಷಭ, ಕನ್ಯಾ ಕರ್ಕ, ಮೀನ ಈ ರಾಶಿಯವರು ತತ್ತಿ ಇಡುವ ವಯಸ್ಸಿನ ಕೋಳಿ ಸಾಕಾಣಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ. ಮೇಷ, ಸಿಂಹ, ವೃಶ್ಚಿಕ, ಧನು, ಮಕರ ಈ ರಾಶಿ

ಯವರು ಮಾಂಸಕ್ಕಾಗಿ ಕೋಳಿ ಸಾಕಾಣಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ. ಮೇಷ, ಮಿಥುನ, ಸಿಂಹ, ತುಲಾ, ಧನು, ವೃಶ್ಚಿಕ, ಮಕರ, ಕುಂಭ ರಾಶಿಯವರು ಕುಕ್ಕುಟ ಉತ್ಪಾದನೆ ಉದ್ಯಮದಲ್ಲಿ ಯಶಸ್ವಿಯಾಗುತ್ತಾರೆ.

**ಯೋಗಗಳು :** ಕೋಳಿ ಸಾಕಾಣಿಕೆ ವೃತ್ತಿಯೆಂದರೆ ಗುತ್ತಿಗೆಯ ವ್ಯವಹಾರವಿದ್ದಂತೆ.ಅದಕ್ಕೂ ಸ್ಪಷ್ಟವಾಗಿ ಹೇಳಬೇಕೆಂದರೆ ಜೂಜಾಟವಿದ್ದಂತೆ. ಏಕೆಂದರೆ ರಾಣೀಖೇತ, ರಕ್ತಭೇದಿ, ಮೈಲಿಬೇನೆ, ಕತ್ತುಬಗ್ಗುವಿಕೆ, ಲಿಕೊಸೀಸ ಜಾತುಗಳು, ಜ್ವರ ಮೊದಲಾದ ರೋಗಗಳ ಬಾಧೆ ಬಹಳ; ಅದರಲ್ಲಿಯೂ ರಾಣೀಖೇತದಂತಹ ರೋಗ ಬಂದರೆ ಕ್ಷಣದಲ್ಲಿಯೇ ನೂರಾರು ಕೋಳಿಗಳು ಸಾಯುತ್ತವೆ; ಆದರಿಂದ ಹಾನಿ ಬಹಳವಾಗುವುದರಿಂದ ಹತಾಶರಾಗಿ ವೃತ್ತಿ ತ್ಯಜಿಸಬೇಕಾದ ಪ್ರಸಂಗಗಳು ಬರುತ್ತವೆ. ಆದ್ದರಿಂದ ಈ ಕೆಳಗೆ ಬರೆದ ಯೋಗಗಳಿದ್ದವರು ಈ ವೃತ್ತಿ ಕೈಕೊಳ್ಳದಿರುವುದು ಹಿತಕರ (೧) ಶನಿ-ಮಂಗಳ, ಶನಿ-ರವಿ, ಶನಿ-ಚಂದ್ರ, ಚಂದ್ರ-ರಾಹು ಈ ಗ್ರಹಗಳ ಯುತಿಯೋಗ ಪ್ರತಿಯೋಗವು ಚತುರ್ಥ-ದಶಮ, ಷಷ್ಠ-ವ್ಯಯ, ದ್ವಿತೀಯ-ಅಷ್ಟಮದಲ್ಲಿದ್ದರೆ ಜಾತಕರು ಕೋಳಿ ರೋಗದಿಂದ ಕಳವು ತುಡುಗುಗಳಿಂದ ನರೀ ಬೆಕ್ಕು ಮೊದಲಾದ ಪ್ರಾಣಿಗಳಿಂದ ಹಾನಿಗೀಡಾಗುವರು.

೨) ಸಾಡೇಸಾತಿ ಸಮಯದಲ್ಲಿ ಈ ವೃತ್ತಿಯಲ್ಲಿ ಹಾನಿಯಾಗುತ್ತದೆ.

**ಇತರ ಯೋಗಗಳು :** (೧) ಶುಕ್ರ-ಚಂದ್ರರು ದುರ್ಬಲರಿರುವ ಜಾತಕನು ಕೋಳಿ ಮರಿಗಳ ಜೋಪಾನ ವೃತ್ತಿಯಲ್ಲಿ ಹಾನಿಗೊಳಗಾಗುತ್ತಾನೆ.

(೨) ರವಿಯು ಬಲಾಢ್ಯನಿರುವ ಜಾತಕನಿಗೆ ಸರಕಾರದ ಸೌಲಭ್ಯ ಬಹಳ ಸಿಗುತ್ತದೆ.

೩) ಬುಧನು ಬಲಾಢ್ಯನಿರುವ ಜಾತಕನಿಗೆ ತತ್ತಿ ಹಾಗೂ ಮರಿಗಳ ಮಾರಾಟದಲ್ಲಿ ಲಾಭವಾಗುತ್ತದೆ.

# ೩. ಹೈನೋದ್ಯಮ (ಹೈನುಗಾರಿಕೆ)

ಹೈನುಗಾರಿಕೆಯು ಬಹು ಪ್ರಾಚೀನ ಕಾಲದಿಂದಲೂ ಇದೆ. ಸುಮಾರು ೨,೩೦೦ ವರುಷಗಳ ಹಿಂದೆ ಮೌರ್ಯ ಕಾಲದಲ್ಲಿ ನಮ್ಮ ದೇಶದಲ್ಲಿ ಪಶು ಪಾಲನಾ ಪದ್ಧತಿ ಹೇಗಿತ್ತು ಎಂಬುದು ಕೌಟಿಲ್ಯನ ಅರ್ಥಶಾಸ್ತ್ರದಿಂದ ತಿಳಿದು ಬರುತ್ತದೆ. ಚತುರ ಚಾಣಕ್ಯನು ಪಶು ಪಾಲನೆಯ ಬಗೆಗೆ ಅನೇಕ ಮಾತನ್ನು ಹೇಳಿದ್ದಾನೆ. ಅದೇಕೆ ಅದಕ್ಕೂ ಪೂರ್ವದಲ್ಲಿ ವೇದ-ಪುರಾಣಗಳಲ್ಲಿಯೂ ಕೂಡ ಪಶುಪಾಲನೆಯ ಕುರಿತು ಸಾಕಷ್ಟು ಮಾಹಿತಿಗಳಿವೆ. ಗೋ ಸಂಪತ್ತು ಶ್ರೀಮಂತಿಕೆಯ ಲಕ್ಷಣವಾಗಿತ್ತು, ಯಾರ ಬಳಿಯಲ್ಲಿ ಹೆಚ್ಚು ಆಕಳುಗಳಿದ್ದವೋ ಅವರು ಹೆಚ್ಚು ಶ್ರೀಮಂತರೆಂದು ಪರಿಗಣಿಸಲಾಗುತ್ತಿತ್ತು. ಅಷ್ಟೇ ಅಲ್ಲ ಈಗಿನ ನಾಣ್ಯದಂತೆ ಗೋವಿನಿಂದ ವಿನಿಮಯ ನಡೆಯುತ್ತಿತ್ತು. ಗೋ ಸಂಪದನೆಗಾಗಿಯೂ ಯುದ್ಧಗಳು ಆಗುತ್ತಿದ್ದವು. ಇದಕ್ಕೆ ನಿದರ್ಶನವೆಂದರೆ ಮಹಾಭಾರತದ ವಿರಾಟಪರ್ವ. ಆದರೆ ಇಂದು ಆ ಚಿತ್ರ ಭಾರತದಲ್ಲಿ ಬದಲಾಗಿದೆ. ಪಾಶ್ಚಿಮಾತ್ಯರಲ್ಲಿ ಇದು ಬೆಳೆದಿದೆ. ಅಮೇರಿಕಾ, ಡೆನ್‌ಮಾರ್ಕ, ಹಾಲೆಂಡ ಮೊದಲಾದ ರಾಷ್ಟ್ರಗಳಲ್ಲಿ ಹೈನುಗಾರಿಕೆಯು ಹೈನೋದ್ಯಮವಾಗಿದೆ.

ನಮ್ಮ ದೇಶದಲ್ಲಿಯೂ ಹೈನುಗಾರಿಕೆಯನ್ನು ಹೈನೋದ್ಯಮವನ್ನಾಗಿ ಬೆಳೆಸಬೇಕೆಂಬ ಪ್ರವೃತ್ತಿ ಇತ್ತೀಚೆಗೆ ಬಹಳ ಭರದಿಂದ ನಡೆಯುತ್ತಿದೆ. ರಾಜ್ಯ ಹಾಗೂ ಕೇಂದ್ರ ಸರಕಾರದವರು ಹೈನುಗಾರಿಕೆ ವೃತ್ತಿಗಾಗಿ ಸಾಕಷ್ಟು ಪ್ರೋತ್ಸಾಹ ಕೊಡುತ್ತಿದ್ದಾರೆ. ಹಸು (ಆಕಳು) ಎಮ್ಮೆಗಳನ್ನು ಸಾಕಬೇಕೆಂಬ ಆಸಕ್ತಿಯುಳ್ಳವರಿಗೆ ಬ್ಯಾಂಕು ಸಾಲಗಳನ್ನು ಸಹಾಯ ಧನವನ್ನು (ಸಬ್‌ಸಿಡಿ) ಕೊಡುತ್ತಿದ್ದಾರೆ. ದೊಡ್ಡ ಗ್ರಾಮಾಂತರದಲ್ಲಿ ತಾಲೂಕ ಸ್ಥಳದಲ್ಲಿ ಪಶುಚಿಕಿತ್ಸಾ ಆಸ್ಪತ್ರೆಗಳನ್ನು ಕೃತ್ರಿಮ ಗರ್ಭಧಾರಣಾ ಕೇಂದ್ರಗಳನ್ನು ಸ್ಥಾಪಿಸಿದ್ದಾರೆ. ಆದಾಗ್ಯೂ ಹೈನುಗಾರಿಕೆಯು ಲಾಭದಾಯಕವಾಗಿಲ್ಲ, ಹೈನೋದ್ಯಮವಾಗುವುದಂತೂ ದೂರೇ ಉಳಿಯಿತು. ಬೆಳೆಯುತ್ತಿರುವ ಜನಸಂಖ್ಯೆ

ಅನುಗುಣವಾಗಿ ಹಾಲಿನ ಪೂರೈಕೆ ಸಾಕಷ್ಟಿಲ್ಲ. ಅಲ್ಲದೆ ಹಾಲಿನ ಬಳಕೆ ಕೂಡ ಈಗ ಮೊದಲಿಗಿಂತಲೂ ಹೆಚ್ಚಾಗಿದೆ. ಈ ಹಿಂದೆ ಹಾಲನ್ನು ಚಿಕ್ಕಮಕ್ಕಳು ಹಾಗೂ ರೋಗಿಗಳಿಗೆ ಮಾತ್ರ ಕೊಡುತ್ತಿದ್ದರು. ಆದರೆ ಇಂದು ಕಾಲ ಬದಲಾಗಿದೆ. ಕೆಲವರು ಹಾಲನ್ನು ಆಹಾರದಂತೆ ಉಪಯೋಗಿಸುತ್ತಿದ್ದಾರೆ. ಪ್ರತಿ ಮನೆ ಮನೆಗಳಲ್ಲಿ ಪ್ರತಿದಿನ ಚಹಾ, ಕಾಫಿಗಾಗಿ ಹಾಲು ಬೇಕೇ ಬೇಕು. ಒಂದು ಹೊತ್ತು ಊಟವನ್ನಾದರೂ ಬಿಡಬಹುದು, ಆದರೆ ದಿನಕ್ಕೆ ಕನಿಷ್ಟ ಎರಡು ಬಾರಿಯಾದರೂ ಚಹಾ ಕಾಫಿ ಬೇಕೇಬೇಕು ಎನ್ನುವ ಪರಿಸ್ಥಿತಿಯಿದೆ. ಇದಕ್ಕೂ ಮಹತ್ವದ ಸಂಗತಿಯೆಂದರೆ ಉತ್ಪಾದಿಸಿದ ಬಹುಪಾಲು ಹಾಲನ್ನು ನಾಡಿನ ಹೋಟೆಲು ಉದ್ಯಮದಾರರೂ ಖಾಸಾವಳಿಯವರೂ ಮಿಠಾಯಿ ಗಾರರೂ ಬಳಸಿಕೊಳ್ಳುತ್ತಾರೆ. ಅಂದಬಳಿಕ ಹಾಲಿನ ಕೊರತೆ ಇರುವುದು ಸ್ವಾಭಾವಿಕವಲ್ಲವೆ ? ಹೀಗಿದ್ದರೂ ಕ್ಷೀರೋದ್ಯಮವು ಲಾಭದಾಯಕ ಉದ್ಯೋಗ ಏಕೆ ಆಗಿಲ್ಲ ? ಒಂದು ಕಡೆ ಸರಕಾರದವರು ಹೈನುಗಾರಿಕೆಗೆ ಪ್ರೋತ್ಸಾಹ ಕೊಡುತ್ತಿದ್ದಾರೆ. ಇನ್ನೊಂದೆಡೆ ದೇಶದಲ್ಲಿ ಹಾಲಿನ ಕೊರತೆ, ಇದೆ. ಆದಾಗ್ಯೂ ಹೈನುಗಾರಿಕೆಯು ಲಾಭದಾಯಕವಾಗಿಲ್ಲ ಹೀಗೇಕೆ ? ಇದಕ್ಕೆ ಕ್ಷೀರಶಾಸ್ತ್ರದ ತಜ್ಞರೂ; ಹಾಲು ಉತ್ಪಾದಿಸುವ ಹೈನುಗಾರಿಕೆಯ ವರೂ ತಮ್ಮ ತಮ್ಮವೆ ಆದ ಕಾರಣಗಳನ್ನು ಕೊಡುತ್ತಿದ್ದಾರೆ.

ಕ್ಷೀರಶಾಸ್ತ್ರಜ್ಞರ ಪಶುವೈದ್ಯ ಶಾಸ್ತ್ರಜ್ಞರ ಅಭಿಪ್ರಾಯವೆಂದರೆ— ನಮ್ಮ ರೈತಾಪಿ ಜನರಾಗಲಿ ಹೈನುಗಾರಿಕೆಯ ಉದ್ಯೋಗಸ್ಥರಾಗಲಿ ತಮ್ಮ ಸಾಂಪ್ರದಾಯಿಕವಾದ ಹಳೆಯ ಪದ್ಧತಿಯನ್ನು ಬದಲಾಯಿಸಿ ವೈಜ್ಞಾನಿಕ ರೀತಿಯಿಂದ ಹೈನುಗಾರಿಕೆ ಕೈಕೊಂಡರೆ ಲಾಭವಾಗುತ್ತದೆ. ಉತ್ತಮ ತಳಿಗಳ ದನಗಳನ್ನು ಸಾಕಿದಲ್ಲಿ ಅವು ಹೆಚ್ಚು ಹಾಲು ಕೊಡುವವು. ಎಮ್ಮೆ ಗಳಿಗಿಂತ ಮಿಶ್ರತಳಿಗಳ ಆಕಳುಗಳು ಹೆಚ್ಚು ಹಾಲನ್ನು ಕೊಡುವವು. ಅಲ್ಲದೆ ಹಿಂಡುವ ಅವಧಿಯಲ್ಲಿಯೆ ಮಂತ್ರೆ ಕೃತ್ರಿಮ ಗರ್ಭಧಾರಣದಿಂದಾಗಿ ಬೇಗ ಬೇಗ ಕರುಗಳನ್ನು ಹಾಕಿ ಹಾಲು ಕೊಡುವವು. ಹೆಚ್ಚು ಹೆಚ್ಚು ಆಹಾರ ಹಾಕಿದಷ್ಟು ಹೆಚ್ಚು ಹೆಚ್ಚು ಹಾಲು ಕೊಡುವವು ಎನ್ನುತ್ತಾರೆ. ಇವರ ಮಾತಿ ನಲ್ಲಿ ಬಹಳಷ್ಟು ಸತ್ಯವಿದ್ದರೂ, ವೈಜ್ಞಾನಿಕ ರೀತಿಯಿಂದ ಹೈನುಗಾರಿಕೆ ಕೈಕೊಂಡರೂ ಕೂಡ ಹಾನಿಮಾಡಿಕೊಂಡವರ ಸಖ್ಯೆ ಕಡಿಮೆಯಿಲ್ಲ.

ಇನ್ನು ಹೈನುಗಾರಿಕೆ ವೃತ್ತಿ ಕೈಕೊಂಡ ನಮ್ಮ ಸಾಮಾನ್ಯ ರೈತಾಪಿ ಜನರ ಅಭಿಪ್ರಾಯವೆಂದರೆ— ಮಿಶ್ರತಳಿ ಆಕಳುಗಳು ಸೂಕ್ಷ್ಮವಿದ್ದು ಅವುಗಳ ಉಪಚಾರ ಅರೈಕೆ ವೆಚ್ಚದಾಯಕವಾದದ್ದು, ಪಶುವೈದ್ಯರ ಸಹಾಯವನ್ನು ಮೇಲಿಂದ ಮೇಲೆ ಪಡೆಯಬೇಕು. ಪಶುವೈದ್ಯರೂ ಕೂಡ ಸಮಯಕ್ಕೆ ಲಭ್ಯರಿರುವುದಿಲ್ಲ, ಅಲ್ಲದೆ ಎಮ್ಮೆ ಹಾಲಿಗಿಂತ ಆಕಳ ಹಾಲಿನ ಬೇಡಿಕೆ ಕಡಿಮೆ ಎನ್ನುತ್ತಾರೆ. ಇವರ ಮಾತಿನಲ್ಲಿಯೂ ತುಸು ಸತ್ಯಾಂಶ ವಿದ್ದರೂ ಕೂಡ ಮಿಶ್ರತಳಿ ಆಕಳುಗಳ ಹೈನುಗಾರಿಕೆ ಕೈಕೊಂಡು ಲಾಭ ಮಾಡಿಕೊಂಡ ಸಾಕಷ್ಟು ಜನರನ್ನು ಕಾಣಬಹುದು.

ಇನ್ನು ಫಲಜ್ಯೋತಿಷ್ಯದ ಪ್ರಕಾರ ಈ ವೃತ್ತಿಯಲ್ಲಿ ಯಶಸ್ಸು ಸಾಧಿಸಲು ಜಾತಕ ಹೇಗಿರಬೇಕು, ಕಾರಕ ಗ್ರಹ–ಲಗ್ನ–ಸ್ಥಾನ–ರಾಶ್ಯಾದಿ ಗಳು ಯಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕಗ್ರಹ :** ಹೈನುಗಾರಿಕೆಯ ವೃತ್ತಿಯ ಕಾರಕಗ್ರಹವೆಂದರೆ ಚಂದ್ರನು, ಏಕೆಂದರೆ ಕ್ಷೀರ ಹಿಂಡುವುದು, ಹಾಗೂ ಕಡದಂತೆ ಕಾಪಾಡು ವುದು ಚಂದ್ರನ ಗುಣಧರ್ಮವು. ಇದೂ ಅಲ್ಲದೆ, ಹಾಲುಕೊಡುವ ಸಾಕು ಪ್ರಾಣಿಗಳಾದ ಆಕಳು–ಎಮ್ಮೆ–ಆಡು–ಕುರಿ ಈ ಮೊದಲಾದ ಪ್ರಾಣಿಗಳ ಮೇಲೆಯೂ ಚಂದ್ರನ ಪ್ರಭುತ್ವವಿರುತ್ತದೆ. ಆದ್ದರಿಂದ ಜಾತಕದಲ್ಲಿ ಚಂದ್ರನು ಬಲಾಢ್ಯನಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗಲಾರರು. ಬಲಾಢ್ಯ ಚಂದ್ರನೆಂದರೆ ಈ ಹಿಂದೆ ಬರೆದಂತೆ ರಾಶಿ ಬಲದವನೂ ಸ್ಥಾನ ಬಲದವನೂ ಯೋಗ ಕಾರಕನೂ ಇದ್ದು ದುರ್ಬಲ, ನಿರ್ಬಲ, ಪಾಪಗ್ರಹ ದೃಷ್ಟಿತ ಇರಕೂಡದು; ಹಾಗೂ ಪಾಪಗ್ರಹಗಳೊಂದಿಗೆ ಇರಕೂಡದು. ಚಂದ್ರನ ತರುವಾಯ ಈ ವೃತ್ತಿಗೆ ಶನಿಯು ಕಾರಕನು, ಏಕೆಂದರೆ ಹೈನುಗಾ ರಿಕೆಯಲ್ಲಿ ಯಶಸ್ವಿಯಾಗಲು ಆಹಾರ ಮುಖ್ಯ. ದನಗಳಿಗೆ ಬೇಕಾಗುವ ಮೇವು–ಹೊಟ್ಟು–ಹುಲ್ಲು ಮೊದಲಾದವುಗಳನ್ನು ಕೊಂಡು ತಂದರೆ ಲಾಭ ದಾಯಕ ವೃತ್ತಿಯಾಗುವುದಿಲ್ಲ. ತನ್ನ ಭೂಮಿಯಲ್ಲಿಯೇ ಬೆಳಸಿದರೆ ಹೆಚ್ಚು

ಲಾಭದಾಯಕವು. ಆದ್ದರಿಂದ ಕೃಷಿವೃತ್ತಿಯ ಕಾರಕನೂ ಹೊಲಗದ್ದೆಗಳ ಕಾರಕನೂ ಆದ ಶನಿಯ ಬಲಾಬಲವನ್ನೂ ಪರಿಶೀಲಿಸಬೇಕು. ಆದರೆ ಇಲ್ಲಿ ಶನಿಯು ಕೇವಲ ರಾಶಿ ಬಲದವನಿದ್ದರೆ ಸಾಕು. ಚಂದ್ರನಂತೆ ರಾಶಿ ಬಲದ, ವನೂ ಸ್ಥಾನ ಬಲದವನೂ ಇರುವ ಅವಶ್ಯಕತೆಯಿಲ್ಲ. ಚಂದ್ರ, ಶನಿಯರ ತರುವಾಯ ಬುಧನನ್ನು ಪರಿಶೀಲಿಸಬೇಕು. ಹಾಲು ಉತ್ಪಾದಿಸುವುದು ಮಾತ್ರ ಚಂದ್ರನ ಗುಣಧರ್ಮವು. ಆದರೆ ಮಾರಾಟಕ್ಕೆ ಬುಧನು ಕಾರಕನು. ಬುಧನು ಬಲಾಢ್ಯನಿರದೆ ಯಾರೂ ಯಶಸ್ವೀ ಮಾರಾಟಗಾರರಾಗಲಾರರು, ಅಷ್ಟೇ ಏಕೆ, ಇತ್ತೀಚಿಗೆ ೨೦೦ ಲೀಟರ ೩೦೦ ಲೀಟರಿನ ಸಣ್ಣ ಹಾಲುಶೀತಲೀ ಕರಣ (ಮಿಲ್ಕಕೂಲರ) ಯಂತ್ರಗಳನ್ನು ಇಟ್ಟುಕೊಂಡು ಹಾಲಿನ ವ್ಯಾಪಾರ ದಲ್ಲಿ ಯಶಸ್ವಿಯಾದ ಅನೇಕ ಜನರನ್ನು ಕಾಣುತ್ತೇವೆ. ಇಲ್ಲಿ ಹಾಲನ್ನು ಉತ್ಪಾದಿಸುವದು ಒಂದು ಸಮಸ್ಯೆ ಇರುವದಿಲ್ಲ; ಬೇರೆಯವರು ಉತ್ಪಾದಿಸಿದ ಹಾಲನ್ನು ತಂದು ಮಾರಾಟ ಮಾಡುವದು ಮತ್ತೊಂದು ಸಮಸ್ಯೆ. ಇಂಥ ವೃತ್ತಿಯವರ ಜಾತಕದಲ್ಲಿ ಚಂದ್ರನು ಕೇವಲ ರಾಶಿ ಬಲದವನಿದ್ದು ಬುಧನು ಸ್ಥಾನಬಲದವನೂ ಯೋಗಕಾರಕನೂ ಇರುತ್ತಾನೆ.

**ಕಾರಕ ಸ್ಥಾನ :** ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ, ಹೈನು ಗಾರಿಕೆಯ ಕಾರಕ ಸ್ಥಾನವೆಂದರೆ ಷಷ್ಠವು, ಆದ್ದರಿಂದ ಷಷ್ಠಸ್ಥಾನ ಹಾಗೂ ಷಷ್ಠೇಶರು ಬಲಾಢ್ಯರಿರದೆ ಯಾರೂ ಹೈನುಗಾರಿಕೆಯಲ್ಲಿ ಯಶಸ್ವಿಯಾಗ ಲಾರರು; ಷಷ್ಠದನಂತರ ಚತುರ್ಥ, ತೃತೀಯ, ಲಗ್ನ ಸ್ಥಾನಗಳನ್ನೂ ನೋಡ ಬೇಕು. ಏಕೆಂದರೆ ಹೊಲ, ಮನೆ, ಗದ್ದೆ, ತೋಟಗಳ ಕಾರಕ ಸ್ಥಾನವಾದ ಚತುರ್ಥವು ಕೂಡ ಈ ವೃತ್ತಿಗೆ ಕಾರಕವಿರುತ್ತದೆ. ಆದ್ದರಿಂದ ಚತುರ್ಥ ಸ್ಥಾನ, ಚತುರ್ಥೇಶರು ಬಲಾಢ್ಯರಿರಬೇಕು. ಷಷ್ಠ, ಚತುರ್ಥಗಳ ನಂತರ ತೃತೀಯ, ಲಗ್ನ ಸ್ಥಾನಗಳನ್ನು ಪರಿಶೀಲಿಸಬೇಕು. ಏಕೆಂದರೆ ಹೈನುಗಾರಿಕೆ ವೃತ್ತಿಯಲ್ಲಿ ಹಾಲುಕೊಡುವ ಸಾಕುವನಗಳ ಪಾಲನೆ–ಪೋಷಣೆ; ಆಹಾರ– ನೀರು ಔಷಧಗಳನ್ನು ಸಮಯಕ್ಕೆ ಸರಿಯಾಗಿ ಕೊಡುವಿಕೆ ಹಾಲುಹಿಂಡುವಿಕೆ ಹಿಂಡಿದ ಹಾಲನ್ನು ಕೆಡದಂತೆ ನೋಡಿಕೊಳ್ಳುವಿಕೆ ಮೊದಲಾದ ಕೆಲಸಗಳನ್ನು

ಸ್ವತಃ ಮಾಡಬೇಕಾಗುವುದರಿಂದ ತೃತೀಯ ಲಗ್ನ ಸ್ಥಾನಗಳನ್ನು ಪರಿಶೀಲಿಸ ಬೇಕಾಗುತ್ತದೆ. ತೃತೀಯ ಲಗ್ನೇಶರು ಬಲಾಢ್ಯರಿರದ ವ್ಯಕ್ತಿಗಳು ಪರಾವ ಲಂಬನೆಯಿಂದಾದಿ ಈ ವೃತ್ತಿಯಲ್ಲಿ ಹಾನಿಗೊಳಗಾಗುತ್ತಾರೆ.

ಲಗ್ನ : ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ಕರ್ಕ, ತುಲಾ, ವೃಶ್ಚಿಕ, ಮೀನ ಈ ಲಗ್ನದವರು ಹಾಲು ಉತ್ಪಾದನೆಯಲ್ಲಿ ಯಶಸ್ವಿಯಾಗುತ್ತಾರೆ. ಮೇಷ, ವೃಷಭ, ಮಿಥುನ, ತುಲಾ, ವೃಶ್ಚಿಕ, ಮಕರ, ಕುಂಭ ಲಗ್ನದವರು ಹಾಲು ಕೊಡುವ ಸಾಕು ಪ್ರಾಣಿಗಳನ್ನು ಸಾಕುವುದರಲ್ಲಿ ಯಶಸ್ವಿಯಾಗುತ್ತಾರೆ. ವೃಷಭ, ಮಿಥುನ, ಕನ್ಯಾ, ಧನು, ಮಕರ, ಮೀನ ಲಗ್ನದವರು ಹಾಲಿನ ಮಾರಾಟದಲ್ಲಿ ಯಶಸ್ವಿಯಾಗುತ್ತಾರೆ.

ರಾಶಿ : ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ಏಳು ರಾಶಿಯವರು ಹೈನುಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

## ೪. ರೇಷ್ಮೆ ವ್ಯವಸಾಯ (ರೇಷ್ಮೆಕೈಗಾರಿಕೆ)

ಬಟ್ಟೆಗಳ ರಾಣಿಯೆಂದು ಪ್ರಸಿದ್ಧಿಯಾದ ರೇಷ್ಮೆಯು ರೇಷ್ಮೆಹುಳು ಗಳಿಂದ ತಯಾರಾಗುತ್ತದೆ. ಈ ರೇಷ್ಮೆಹುಳುಗಳನ್ನು ಸಾಕಿ ರೇಷ್ಮೆನೂಲು ತೆಗೆದು ಬಟ್ಟೆ ತಯಾರಿಸುವ ಪದ್ಧತಿ ಬಹುಪುರಾತನ ಕಾಲದಿಂದಲೂ ಇದೆ. ಈ ರೇಷ್ಮೆಕೈಗಾರಿಕೆಯು ಪ್ರಪ್ರಥಮವಾಗಿ ಚೀನಾದಿಂದ ಎಲ್ಲ ದೇಶಗಳಿಗೆ ಪ್ರಸಾರವಾಯಿತೆಂದು ಕೆಲ ಇತಿಹಾಸಕಾರರ ಅಭಿಪ್ರಾಯ; ಭಾರತದಿಂದಲೇ ಉಳಿದ ದೇಶಗಳಿಗೆ ಪ್ರಸಾರವಾಯಿತೆಂದು ಮತ್ತೆ ಕೆಲವರ ಅಂಬೋಣ. ಈ ಮಾತಿಗೆ ಪುಷ್ಟೀಕರವಾಗಿ ರಾಮಾಯಣ-ಮಹಾಭಾರತಗಳಲ್ಲಿ ರೇಷ್ಮೆ ಬಟ್ಟೆಗಳ ಉಲ್ಲೇಖವಿದೆ.

ರೇಷ್ಮೆ ಉತ್ಪಾದನೆಯಲ್ಲಿ ಚೀನ, ಜಪಾನ, ಕೋರಿಯಾಗಳ ನಂತರ ಭಾರತವು ನಾಲ್ಕನೆಯ ಸ್ಥಾನದಲ್ಲಿದೆ. ಭಾರತವು ಉತ್ಪಾದಿಸುವ ರೇಷ್ಮೆಯಲ್ಲಿ ಕರ್ನಾಟಕವು ಮೊದಲ ಸ್ಥಾನದಲ್ಲಿದ್ದು, ನಂತರ ಆಸಾಮ, ಕಾಶ್ಮೀರಗಳು ಎರಡು ಮೂರು ಸ್ಥಾನಗಳಲ್ಲಿವೆ. ತದನಂತರ ತಮಿಳುನಾಡು, ಉತ್ತರ ಪ್ರದೇಶ, ಆಂಧ್ರ ಪ್ರಮುಖ ಸ್ಥಾನ ಪಡೆದಿವೆ.

ಈ ಹಿಂದೆ ರೇಷ್ಮೆಯನ್ನು ಬಟ್ಟೆಗಳಿಗಾಗಿ ಮಾತ್ರ ಉಪಯೋಗಿಸುತ್ತಿದ್ದರು. ಆದರೆ ಇಂದು ಹತ್ತಿ, ಉಣ್ಣೆಗಳೊಂದಿಗೆ ಮಿಶ್ರಿತ ಬಟ್ಟೆಗಳಲ್ಲಿಯೂ, ವಿದ್ಯುತ್ ತಂತಿಗಳ ಹೊರಹೊದಿಕೆಗಾಗಿಯೂ, ಬೆರಳಚ್ಚು ಯಂತ್ರಗಳ ಮಸಿ ಪಟ್ಟಿ ತಯಾರಿಕೆಯಲ್ಲಿಯೂ ವಾಹನಗಳ ಚಕ್ರಗಳಿಗೂ ಉಪಯೋಗಿಸುತ್ತಿರುವ ಟೈಯರ ಟ್ಯೂಬಗಳ ಒಳಹೊದಿಕೆಗಾಗಿಯೂ. ದುಂಬರ ಕೊಡೆಯಲ್ಲಿಯೂ ಉಪಯೋಗಿಸುವುದರಿಂದ ಇದರ ಬೇಡಿಕೆ ಬಹಳ ಹೆಚ್ಚಾಗ ಹತ್ತಿದೆ. ಇದಲ್ಲದೆ ಪರದೇಶಗಳಲ್ಲಿಯೂ ಇದರ ಬೇಡಿಕೆ ಬಹಳ ಇದೆ. ಹೀಗೆ ಮೊದಲಿಗಿಂತಲೂ ಇದರ ಬೇಡಿಕೆ ಈಗ ಹೆಚ್ಚು; ಹಾಗೂ ಉಪಯೋಗ ಹೆಚ್ಚಾಗಿರುವುದರಿಂದ ನಮ್ಮ ರೈತಾಪಿ ಜನರು ಇದನ್ನು ಹೆಚ್ಚು ಉತ್ಪಾದಿಸುವುದರಲ್ಲಿ ಆಸಕ್ತಿ ಹೊಂದಿರುವುದು ಸಹಜವಿದೆ. ಸರಕಾರದವರೂ ಕೂಡ ಈ ವ್ಯವಸಾಯಕ್ಕೆ ಈ ಉದ್ಯೋಗಕ್ಕೆ ಪ್ರೋತ್ಸಾಹ ಕೊಡುತ್ತಿದ್ದಾರೆ. ಆದಾಗ್ಯೂ ಎಲ್ಲರೂ ಇದರಲ್ಲಿ ಯಶಸ್ವಿಯಾಗುವುದಿಲ್ಲ, ಇದಕ್ಕೆ ಫಲ ಜ್ಯೋತಿಷ್ಯದ ಕಾರಣವೇನು ? ಈ ವೃತ್ತಿ ಈ ವ್ಯವಸಾಯ ಕೈಕೊಳ್ಳುವವರ ಜಾತಕ ಎಂತಿರಬೇಕು, ಕಾರಕಗ್ರಹ, ಲಗ್ನ ಸ್ಥಾನಾದಿಗಳಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ :** ಈ ವೃತ್ತಿಯ ಕಾರಕಗ್ರಹ ಯಾವುದೆಂಬುದನ್ನು ತಿಳಿಯುವ ಮೊದಲು ಈ ವೃತ್ತಿಯಲ್ಲಿಯ ಪ್ರಕಾರಗಳಾವುವು ಎಂಬುದನ್ನು ಮೊದಲು ತಿಳಿದುಕೊಳ್ಳುವುದು ಅವಶ್ಯ. ಏಕೆಂದರೆ ಈ ವೃತ್ತಿಯಲ್ಲಿಯೂ ಕೂಡ ವಿವಿಧ ಭಾಗಗಳಿರುವುದರಿಂದಲೂ ವಿವಿಧ ಪ್ರಕಾರದ ಕೆಲಸಗಳಿರುವುದರಿಂದಲೂ ಅನೇಕ ಗ್ರಹಗಳು ಕಾರಕವಿರುತ್ತವೆ.

ರೇಷ್ಮೆ ವ್ಯವಸಾಯಂದಲ್ಲಿಯ ಹಂತಗಳು.
ರೇಷ್ಮೆ ವ್ಯವಸಾಯಂದಲ್ಲಿ ಮೂರು ಪ್ರಕಾರಗಳಿವೆ.

೧) ಹಿಪ್ಪುನೇರಳೆ ಬೇಸಾಯ

೨) ರೇಷ್ಮೆಹುಳು ಸಾಕಣೆ

೩) ಗೂಡಂಗಳಿಂದ ರೇಷ್ಮೆ ನೂಲು ಬಿಚ್ಚುವಿಕೆ

### ೧) ಹಿಪ್ಪು ನೇರಳೆ ಬೇಸಾಯ

ಹಿಪ್ಪು ನೇರಳೆ ಗಿಡ ರೇಷ್ಮೆ ಹುಳುವಿನ ಮುಖ್ಯ ಆಹಾರ. ಈ ಗಿಡದ ಎಲೆಗಳಿಂದಲೇ ರೇಷ್ಮೆ ಹುಳುಗಳನ್ನು ಸಾಕುತ್ತಾರೆ.

ಯಾವುದೇ ಬೇಸಾಯ ಕೈಕೊಳ್ಳಲು ಬೇಸಾಯ ಕಾರಕಗ್ರಹವಾದ ಶನಿಯು ಬಲಾಢ್ಯನಿರದೆ ಯಾರೂ ಯಶಸ್ವೀ ಬೇಸಾಯಗಾರರಾಗಲಾರರು; ಹಿಪ್ಪು ನೇರಳೆ ಗಿಡ ಬೆಳೆಸುವ ಬೇಸಾಯವೆಂದರೆ ಹಣದ ಬೆಳೆಯ ಬೇಸಾಯ ವಿದ್ದಂತೆ. ಆದ್ದರಿಂದ ಹಣದ ಬೆಳೆಯ ಕಾರಕನೂ ರೇಷ್ಮೆ ಕಾರಕನೂ ಆದ ಶುಕ್ರನು ಬಲಾಢ್ಯನಿರದೆ ಯಾರೂ ಈ ವ್ಯವಸಾಯದಲ್ಲಿ ಯಶಸ್ವಿಯಾಗ ಲಾರರು, ಆದ್ದರಿಂದ ಶನಿ-ಶುಕ್ರರೇ ಈ ವ್ಯವಸಾಯದ ಕಾರಕರಿದ್ದು ಈ ಎರಡೂ ಗ್ರಹಗಳು ಜಾತಕದಲ್ಲಿ ಸ್ಥಾನ ಬಲದವೂ ರಾಶಿ ಬಲದವೂ ಯೋಗಕಾರಕವೂ ಇರಬೇಕು.

### ೨) ರೇಷ್ಮೆ ಹುಳು ಸಾಕಾಣಿಕೆ

ರೇಷ್ಮೆ ವೃತ್ತಿಯಲ್ಲಿ ರೇಷ್ಮೆಹುಳು ಸಾಕಾಣಿಕೆಯು ವೃತ್ತಿ ಅತಿ ಮುಖ್ಯ ಹಾಗೂ ಮಹತ್ವದ್ದಿರುತ್ತದೆ. ಈ ರೇಷ್ಮೆ ಹುಳು ಸಾಕಾಣಿಕೆಯಲ್ಲಿಯೂ ಕೂಡ ಎರಡು ಪ್ರಕಾರಗಳಿವೆ. (೧) ತತ್ತಿಗಳಿಗಾಗಿ (೨) ಗೂಡಂಗಳಿಗಾಗಿ. ಯಾವುದೇ ಉದ್ದೇಶಕ್ಕಾಗಿ ರೇಷ್ಮೆ ಹುಳು ಸಾಕಾಣಿಕೆಯ ವೃತ್ತಿ ಕೈಕೊಂಡ ರೂ ಜಾತಕದಲ್ಲಿ ಚಂದ್ರನು ಬಲಾಢ್ಯನಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು. ಏಕೆಂದರೆ ಪಶು, ಪಕ್ಷಿ, ಪ್ರಾಣಿಕೀಟಗಳ ಮೇಲೆ ಚಂದ್ರನ ಪ್ರಭುತ್ವವಿರುತ್ತದೆ.

ಯಾವುದೆ ಸಾಕುಪ್ರಾಣಿಗಳನ್ನು ಸಾಕುವಿಕೆ, ಸಲಹುವಿಕೆ, ಜೋಪಾನ ಮಾಡುವಿಕೆ,ಬೆಳೆಸುವಿಕೆ ಮೊದಲಾದ ಕ್ರಿಯೆಗಳಿಗೆ ಸ್ತ್ರೀ ಗ್ರಹಗಳು ಕಾರಕರು. ಅದರಲ್ಲಿಯೂ ರೇಷ್ಮೆ ಹುಳುಗಳಂಥ ಸೂಕ್ಷ್ಮ ಹುಳುಗಳ ಸಾಕಾಣಿಕೆ ವೃತ್ತಿಗೆ ಸ್ತ್ರೀ ಗ್ರಹಗಳಾದ ಚಂದ್ರ, ಶುಕ್ರರು ಬಲಾಢ್ಯರಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗಲಾರರು. ಆದ್ದರಿಂದ ಚಂದ್ರ-ಶುಕ್ರರೇ ಈ ವೃತ್ತಿಯ ಕಾರಕಗ್ರಹಗಳು, ತತ್ತಿಗಳಿಗಾಗಿ ಹುಳು ಸಾಕಾಣಿಕೆಯೆಂಬಲ್ಲಿ ಬೇಕೋಷ್ಟಾದನೆಯು ವೃತ್ತಿ ಇದ್ದಂತೆ. ಉತ್ತಮ ಗುಣ ಮಟ್ಟದ ರೋಗರಹಿತ ಮೊಟ್ಟೆಗಳನ್ನು ಉತ್ಪತ್ತಿ ಮಾಡುವುದು ಯಶಸ್ವಿ ರೇಷ್ಮೆ ಹುಳು ಸಾಕಾಣಿಕೆಯಲ್ಲಿಯ ಬಹುಮಹತ್ವದ ಅಂಶ. ಆದ್ದರಿಂದ ತತ್ತಿಗಳಿಗಾಗಿ ಹುಳು ಸಾಕಾಣಿಕೆಯ ವೃತ್ತಿಕೈಕೊಳ್ಳುವವರ ಜಾತಕದಲ್ಲಿ ಅನೇಕ ಗ್ರಹಗಳು ಸ್ತ್ರೀ ರಾಶಿಯಲ್ಲಿರುತ್ತವೆ ಏಕೆಂದರೆ ಸಂತಾನ ವೃದ್ಧಿ ಮಾಡುವುದಕ್ಕಾಗಿಯೇ ಈ ತತ್ತಿಗಳ ಉಪಯೋಗವಿರುವುದರಿಂದ ಅನೇಕ ಗ್ರಹಗಳು ಸ್ತ್ರೀ ರಾಶಿಯಲ್ಲಿರುತ್ತವೆ. ಆದರೆ ಗೂಡುಗಳಿಗಾಗಿ ಹುಳು ಸಾಕಾಣಿಕೆಯ ವೃತ್ತಿ ಕೈಕೊಳ್ಳುವವರ ಜಾತಕದಲ್ಲಿ ಅನೇಕ ಗ್ರಹಗಳು ಪುರುಷ ರಾಶಿಯಲ್ಲಿರುತ್ತವೆ. ಏಕೆಂದರೆ ಅಧಿಕ ರೇಷ್ಮೆ ಉತ್ಪಾದನೆಗೆ ಅಧಿಕ ಇಳುವರಿಯೇ ಮುಖ್ಯ ಗುರಿಯಾಗಿರುತ್ತದೆ.

## ೩) ಗೂಡುಗಳಿಂದ ರೇಷ್ಮೆ ಬಿಚ್ಚುವಿಕೆ

ಹಿಪ್ಪುನೇರಳೆ ಬೇಸಾಯ ಹಾಗೂ ರೇಷ್ಮೆ ಹುಳು ಸಾಕಾಣಿಕೆ ಈ ಎರಡು ಚಟುವಟಿಕೆಗಳು ಕೃಷಿ ಕೈಗಾರಿಕೆಯ ವಲಯದಲ್ಲಿದ್ದರೆ ಗೂಡುಗಳಿಂದ ರೇಷ್ಮೆ ಎಳೆತೆಗೆಯುವ ಕಾರ್ಯವು ಸಣ್ಣ ಗ್ರಾಮೀಣ ಉದ್ಯಮದಲ್ಲಿ ಬರುತ್ತದೆ.ಆದ್ದರಿಂದ ಉದ್ಯಮಕಾರಕಗ್ರಹವಾದ ಮಂಗಳನನ್ನುಪರಿಶೀಲಿಸಬೇಕು. ಇಲ್ಲಿ ರೇಷ್ಮೆಯ ಕಾರಕ ಗ್ರಹಗಳಾದ ಚಂದ್ರ, ಶುಕ್ರ, ಶನಿಯರು ಕೇವಲ ರಾಶಿ ಬಲದವರಿದ್ದರೆ ಮಂಗಳನು ರಾಶಿ ಬಲದವನೂ ಸ್ಥಾನ ಬಲದವನೂ ಯೋಗಕಾರಕನೂ ಇರುತ್ತಾನೆ.

ಸ್ಥಾನ : ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ರೇಷ್ಮೆ ಹುಳು ಸಾಕಾಣಿಕೆ ಕಾರಕಸ್ಥಾನವೆಂದರೆ ಚತುರ್ಥ ಸ್ಥಾನವು. ಏಕೆಂದರೆ ಹೊಲ ಮನೆ ಗದ್ದೆಗಳ ಸ್ಥಾನವಾದ ಚತುರ್ಥ ಸ್ಥಾನವೇ ಈ ವೃತ್ತಿಯ ಕಾರಕ ಸ್ಥಾನವಿರುವುದರಿಂದ ಚತುರ್ಥಸ್ಥಾನ ಚತುರ್ಥೇಶ ಬಲಾಢ್ಯರಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗಲಾರರು.

ಸಾಮಾನ್ಯವಾಗಿ ರೇಷ್ಮೆ ಹುಳು ಸಾಕಾಣಿಕೆ ವೃತ್ತಿ ಕೈಕೊಳ್ಳುವವರು ಅದಕ್ಕಾಗಿ ಪ್ರತ್ಯೇಕ ಮನೆ ಕಟ್ಟುವುದಿಲ್ಲವಾದಾಗ್ಯೂ ಇದ್ದ ಮನೆಯಲ್ಲಿಯೇ ನೇರವಾಗಿ, ಸೂರ್ಯನ ಕಿರಣ ಬಾರದೇಇರುವ ಅಧಿಕ ಉಷ್ಣತಾಂಶ ತೇವಾಂಶ ಇರದ ಇರುವ ಕೋಣೆಗಳಲ್ಲಿ ಸಾಕುತ್ತಾರೆ. ವೈಜ್ಞಾನಿಕ ರೀತಿಯ ಸುಸಜ್ಜಿತವಾದ ಮನೆ ಇದ್ದರೆ ವೃತ್ತಿಯಲ್ಲಿ ಹೆಚ್ಚು ಲಾಭಮಾಡಿಕೊಳ್ಳು ತ್ತಾರೆ. ಆದ್ದರಿಂದ ಚತುರ್ಥ ಸ್ಥಾನ ಚತುರ್ಥೇಶರ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ.

ಚತುರ್ಥಸ್ಥಾನದ ನಂತರ ತೃತೀಯ, ಷಷ್ಠ ಸ್ಥಾನಗಳನ್ನು ಪರಿಶೀಲಿಸ ಬೇಕು. ಏಕೆಂದರೆ ರೇಷ್ಮೆ ಹುಳುಗಳಿಗೆ ಆಹಾರ ಔಷಧ ಕೊಡುವಿಕೆಗೆ ಸ್ವತಃ ಪರಿಶ್ರಮ ಪಡಬೇಕಾಗುವುದರಿಂದ ತೃತೀಯ ಸ್ಥಾನವು ಕಾರಕವಾಗಿರುತ್ತದೆ. ಗೂಡುಗಳಿಂದ ರೇಷ್ಮೆ ಎಳೆ ಬಿಚ್ಚುವಿಕೆಯ ಕಾರ್ಯವು ಉದ್ಯಮದಲ್ಲಿ ಬರುವುದರಿಂದ ಉದ್ಯಮದ ಸ್ಥಾನವಾದ ಷಷ್ಠಸ್ಥಾನವು ಕಾರಕವಿರುತ್ತದೆ. ಆದ್ದರಿಂದ ಚತುರ್ಥ ತೃತೀಯ ಷಷ್ಠ ಸ್ಥಾನಗಳು ಈ ಸ್ಥಾನಾಧೀಶರೂ ಬಲಾಢ್ಯರಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು.

ಲಗ್ನ :- ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಮಿಥುನ, ತುಲಾ, ವೃಶ್ಚಿಕ, ಮಕರ, ಕುಂಭ ಈ ಲಗ್ನದವರು ಹಿಪ್ಪುನೇರಳೆ ಗಿಡಗಳನ್ನು ಬೆಳೆಸುವ ಬೇಸಾಯದಲ್ಲಿ ಸಿದ್ಧಹಸ್ತರು. ಮೇಷ, ವೃಷಭ, ಮಿಥುನ, ಕರ್ಕ, ತುಲಾ, ಮಕರ, ಕುಂಭ ಈ ಲಗ್ನದವರು ರೇಷ್ಮೆಹುಳು ಸಾಕಾಣಿಕೆಯ ವೃತ್ತಿಯಲ್ಲಿ ಪಳಗಿದವರು. ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ವೃಶ್ಚಿಕ, ಧನು ಈ ಲಗ್ನದವರು ಗೂಡುಗಳಿಂದ ರೇಷ್ಮೆ ಬಿಚ್ಚುವಿಕೆಯ ಉದ್ಯೋಗದಲ್ಲಿ ನಿಷ್ಣಾತರು.

**ರಾಶಿ :** ರಾಶಿ ದೃಷ್ಟಿಯಿಂದ ನೋಡಿದರೆ ಹಿಪ್ಪುನೇರಳೆ ಗಿಡಗಳ ಬೇಸಾಯದಲ್ಲಿ ಮೇಷ, ವೃಷಭ. ಸಿಂಹ, ವೃಶ್ಚಿಕ, ಧನು, ಮಕರ, ಕುಂಭ ರಾಶಿಯವರು ಯಶಸ್ವಿಯಾಗುತ್ತಾರೆ. ರೇಷ್ಮೆಹುಳುಗಳ ಸಾಕಾಣಿಕೆಯಲ್ಲಿ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯವರು ಯಶಸ್ವಿಯಾಗುತ್ತಾರೆ. ಗೂಡುಗಳಿಂದ ರೇಷ್ಮೆನೂಲು ತೆಗೆಯುವುದರಲ್ಲಿ ಮಿಥುನ, ತುಲಾ, ಕುಂಭ, ತದನಂತರ ವೃಷಭ, ಕನ್ಯಾ, ಕರ್ಕ, ಮೀನ ರಾಶಿಯವರು ಯಶಸ್ವಿಯಾಗುತ್ತಾರೆ.

## ೫. ಜೇನು ಸಾಕಾಣಿಕೆ

ಮಿತ್ರರಾಗಲಿ ಆಪ್ತೇಷ್ಟರಾಗಲಿ ಮನೆಗೆ ಬಂದರೆ ಮೊದಲು ಚಹಾ ಕಾಫಿಯಿಂದ ಅವರನ್ನು ಉಪಚರಿಸುತ್ತೇವೆ. ಆದರೆ ಹಿಂದಿನ ಕಾಲದಲ್ಲಿ ಜೇನುತುಪ್ಪಕೊಟ್ಟು ಉಪಚರಿಸುವ ಪದ್ಧತಿಯಿತ್ತು. ಅಷ್ಟೇ ಏಕೆ, ಹಬ್ಬ ಹರಿದಿನಗಳಲ್ಲಿಯಾಗಲಿ, ಮದುವೆ-ಮುಂಜಿಗಳಲ್ಲಾಗಲಿ, ಪೂಜೆ-ಪುನಸ್ಕಾರಗಳಲ್ಲಾಗಲಿ, ಯಜ್ಞ - ಯಾಗಗಳಲ್ಲಿಯಾಗಲಿ, ಶ್ರಾದ್ಧ-ಪಕ್ಷದಲ್ಲಾಗಲಿ ಮಧು ಇಲ್ಲದೆ ನಡೆಯುವುದಿಲ್ಲ. ಈಗಲೂ ಸಹ ಜೇನನ್ನು ಆಹಾರವೆಂದು, ಔಷಧಕ್ಕೆಂದು ಉಪಯೋಗಿಸಲಾಗುತ್ತದೆ.

ಜೇನು ಸಾಕಣೆ ವೃತ್ತಿ ಬಹಳ ಹಿಂದಿನ ಕಾಲದಿಂದಲೂ ರೂಢಿಯಲ್ಲಿದೆ. ವೇದ, ರಾಮಾಯಣ, ಮಹಾಭಾರತಗಳಲ್ಲಿಯೂ ಕೂಡ ಇದರ ಉಲ್ಲೇಖ ಇದೆ. ಹಿಂದಿನ ಕಾಲದಲ್ಲಿ ಹಣದ ಬದಲು ಜೇನುತುಪ್ಪ ಹಾಗೂ ಮೇಣಗಳನ್ನು ತೆರಿಗೆ-ಸುಂಕಗಳನ್ನು ತೆತ್ತಲು ಉಪಯೋಗಿಸಲಾಗುತ್ತಿತ್ತು. ಅಷ್ಟೇ ಏಕೆ ಯುದ್ಧೋಪಕರಣವನ್ನಾಗಿಯೂ ಬಳಸುತ್ತಿದ್ದರು. ಆದರೆ ಈಗಿನಂತೆ ಶಾಸ್ತ್ರೀಯವಾಗಿ ವೈಜ್ಞಾನಿಕವಾಗಿ ಜೇನ್ನೊಣಗಳ ಸಾಕಾಣಿಕೆ ಹಿಂದೆ ಇದ್ದಿಲ್ಲ,

ಆಗ ವಿಸ್ತಾರವಾದ ಕಾಡು ಬಹಳವಿತ್ತು; ಗಿಡ ಮರಗಳ ನಾಶವಾಗಿದ್ದಿಲ್ಲ. ಕಾಡಿನಲ್ಲಿ ಜೇನು ವಿಪುಲವಾಗಿ ದೊರೆಯುತ್ತಿತ್ತು. ಈ ಹಿಂದೆ ಹೊಗೆ ಹಾಕಿ ಹುಟ್ಟು ಹಿಂಡಿ ಜೇನು ತೆಗೆಯುತ್ತಿದ್ದರು. ಅದರಿಂದ ಹುಟ್ಟುಗಳು ನಾಶವಾಗುತ್ತಿದ್ದವು. ಬೇರೆ ಅಸಂಖ್ಯ ನೊಣಗಳು ಸಾಯುತ್ತಿದ್ದವು; ಆದರೆ ಈಗ ಕಾಡು ಗಿಡ-ಮರಗಳು, ಅರಣ್ಯ ನಾಶವಾಗಿರುವದರಿಂದ ನೊಣಗಳಿಗೆ ಬೇಕಾಗುವ ಪರಾಗ ದೊರೆಯುವುದೇ ಕಠಿಣವಾಗಿದೆ, ಆದ್ದರಿಂದ ಹೂದೋಟಗಳಲ್ಲಿಯೇ ಜೇನ್ನೊಣಗಳನ್ನು ಸಾಕುತ್ತಿದ್ದಾರೆ.

ಜೇನು ಹುಳು ಸಾಕುವದೆಂದರೇನು ? ಇದೇನು, ಆಕಳು ಎಮ್ಮೆ ಕೋಳಿಗಳಂತೆ ಶಾಸ್ತ್ರೀಯವಾಗಿ ಏಕೆ ಸಾಕಬೇಕು ? ಗಿಡಗಂಟಿಗಳಲ್ಲಿ ಇದ್ದೇ ಇರುತ್ತವೆ. ನಾವು ಹೋಗಿ ಬಿಡಿಸಿಕೊಂಡರಾಯಿತು ಎನ್ನುತ್ತಾರೆ. ಮತ್ತೆ ಕೆಲವರು ಒಂದು ರಾಣಿ ಹುಳುವನ್ನು ತಂದು ಎಲ್ಲಿ ಬೇಕಾದರೂ ಸಾಕಿ ಉತ್ಪನ್ನವನ್ನು ಹೊಂದಬಹುದೆಂಬ ಅಭಿಪ್ರಾಯದವರಿದ್ದಾರೆ. ಆದರೆ ಈ ಸಾಕಾಣಿಕೆಯ ತಜ್ಞರು ಈ ಅಭಿಪ್ರಾಯವನ್ನು ಒಪ್ಪುವದಿಲ್ಲ. ಹವ್ಯಾಸಕ್ಕಾಗಿ ಜೇನು ಸಾಕುತ್ತಿದ್ದರೆ ಅಡ್ಡಿ ಇಲ್ಲ, ಆದರೆ ಜೇನು ಸಾಕಾಣಿಕೆಯನ್ನು ವೃತ್ತಿಯನ್ನಾಗಿ ಕೈಕೊಳ್ಳುತ್ತಿದ್ದರೆ ಶಾಸ್ತ್ರೀಯವಾಗಿ ವೈಜ್ಞಾನಿಕ ರೀತಿಯಿಂದ ಸಾಕಾಣಿಕೆ ಮಾಡಿದರೆ ಮಾತ್ರ ಲಾಭವಾಗುತ್ತದೆ ಎನ್ನುತ್ತಾರೆ.

ವೈಜ್ಞಾನಿಕವಾಗಿ ಸಾಕಾಣಿಕೆಯ ವೃತ್ತಿ ಕೈಕೊಂಡವರೆಲ್ಲರೂ ಯಶಸ್ವಿಯಾಗಿಲ್ಲ. ಇದಕ್ಕೆ ಫಲಜ್ಯೋತಿಷ್ಯದ ಕಾರಣವೇನು, ಈ ವೃತ್ತಿ ಕೈಕೊಳ್ಳಲು ಜಾತಕ ಹೇಗಿರಬೇಕು, ಕಾರಕ ಗ್ರಹ ಲಗ್ನ ಸ್ಥಾನಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕಗ್ರಹ :** ಯಾವುದೊಂದು ಪ್ರಾಣಿ ಪಕ್ಷಿ-ಕೀಟಕಗಳ ಸಾಕಾಣಿಕೆಯ ವೃತ್ತಿಯನ್ನು ಕೈಕೊಳ್ಳುವವರ ಜಾತಕದಲ್ಲಿ ಚಂದ್ರನು ಬಲಾಢ್ಯನಿರಲೇಬೇಕು, ಚಂದ್ರನ ತರುವಾಯ ಶುಕ್ರನು ಕ ಈ

ವೃತ್ತಿಯು ಕಾರಕಗ್ರಹ. ಏಕೆಂದರೆ ಯಾವುದೊಂದು ಪ್ರಾಣಿಯನ್ನು ಸಾಕುವಿಕೆ, ಸಲಹುವಿಕೆ, ಜೋಪಾನ ಮಾಡುವಿಕೆ,-ಬೆಳೆಸುವಿಕೆ ಮೊದಲಾದ ಕ್ರಿಯೆಗಳಿಗೆ ಸ್ತ್ರೀ ಗ್ರಹಗಳು ಕಾರಕವಿರುತ್ತವೆ.

**ಸ್ಥಾನ :** ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಚತುರ್ಥಸ್ಥಾನವು ಕಾರಕವು. ಚತುರ್ಥದನಂತರ ಷಷ್ಠ, ತೃತೀಯ ಸ್ಥಾನಗಳು ಕಾರಕವು. ಆದ್ದರಿಂದ ಚತುರ್ಥ ಷಷ್ಠ, ತೃತೀಯ ಸ್ಥಾನಗಳೂ ಈ ಸ್ಥಾನಾಧೀಶರೂ ಬಲಾಢ್ಯರಿರಬೇಕು.

**ಲಗ್ನ :** ಲಗ್ನದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ಕರ್ಕ, ತುಲಾ, ವೃಶ್ಚಿಕ, ಮೀನ ಈ ಲಗ್ನದವರು ತದನಂತರ ವೃಷಭ, ಮಿಥುನ, ಮಕರ ಲಗ್ನದವರೂ ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

**ರಾಶಿ :** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯವರು ಜೇನುಸಾಕಾಣಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

## (೬) ಮತ್ಸ್ಯೋದ್ಯಮ, ಹಾಗೂ ಕುರಿ- ಹಂದಿ ಸಾಕಾಣಿಕೆಯ ವೃತ್ತಿ.

### ಮತ್ಸ್ಯೋದ್ಯಮ

**ಕಾರಕಗ್ರಹ :** ಮತ್ಸ್ಯೋದ್ಯಮ ವೃತ್ತಿಗೆ ಜಲ ಹಾಗೂ ಜಲಚರಗಳ ಮೇಲೆ ಆಧಿಪತ್ಯವಿರುವ ಚಂದ್ರನು ಬಲಾಢ್ಯನಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು, ಚಂದ್ರನ ತರುವಾಯ ಉದ್ಯಮ ಕಾರಕ ಗ್ರಹವಾದ ಮಂಗಳನ ಬಲಾಬಲವನ್ನು ಪರಿಶೀಲಿಸಬೇಕು.

ಚಂದ್ರನು ರಾಶಿ ಬಲದವನೂ ಸ್ಥಾನ ಬಲದವನೂ ಯೋಗಕಾರಕನೂ ಇದ್ದರೆ ಕುಜನು ಕೇವಲ ರಾಶಿ ಬಲದವನಿರುತ್ತಾನೆ.

**ಸ್ಥಾನ :** ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಉದ್ಯಮ ಸ್ಥಾನಗಳಾದ ಚತುರ್ಥ, ಷಷ್ಠಗಳೇ ಕಾರಕಸ್ಥಾನಗಳಿರುವದರಿಂದ, ಈ ಸ್ಥಾನ, ಸ್ಥಾನಾಧೀಶರೂ ಬಲಾಢ್ಯರಿರಬೇಕು.

**ಕಾರಕ ಲಗ್ನ :** ಮೇಷ, ಕರ್ಕ, ತುಲಾ, ವೃಶ್ಚಿಕ, ಮಕರ, ಮೀನ ಲಗ್ನದವರು ಈ ಉದ್ಯಮದಲ್ಲಿ ಯಶಸ್ವಿಯಾಗುತ್ತಾರೆ.

**ರಾಶಿ :** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಜಲ ತತ್ವದ ರಾಶಿಗಳಾದ ಕರ್ಕ, ವೃಶ್ಚಿಕ, ಮೀನ ರಾಶಿಯವರು ತದನಂತರ ಭೂ-ತತ್ವದ ರಾಶಿಗಳಾದ ವೃಷಭ, ಕನ್ಯಾ, ಮಕರ ಈ ರಾಶಿಯವರು ಈ ಉದ್ಯಮದಲ್ಲಿ ಯಶಸ್ವಿಯಾಗುತ್ತಾರೆ.

## ೭) ಕುರಿ ಸಾಕಾಣಿಕೆ

**ಕಾರಕಗ್ರಹ :** ಸಾಕು ಪ್ರಾಣಿಗಳ ವೃತ್ತಿಯ ಕಾರಕ ಗ್ರಹವಾದ ಚಂದ್ರನೇ ಕುರಿಸಾಕಾಣಿಕೆ ವೃತ್ತಿಯ ಕಾರಕನು. ಚಂದ್ರನ ತರುವಾಯ ಶನಿಯನ್ನು ಪರಿಶೀಲಿಸಬೇಕು. ಏಕೆಂದರೆ ಮಳೆ-ಗಾಳಿ-ಚಳಿ-ಬಿಸಿಲುಗಳನ್ನು ಸಹಿಸುವ ಗುಣಧರ್ಮ ಶನಿಯಲ್ಲಿರುತ್ತದೆ. ಆದ್ದರಿಂದ ಚಂದ್ರ-ಶನಿ ಇವೇ ಈ ವೃತ್ತಿಯ ಕಾರಕ ಗ್ರಹಗಳಿರುತ್ತವೆ. ಆದ್ದರಿಂದ ಚಂದ್ರ-ಶನಿ ಬಲಾಢ್ಯರಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು.

**ಸ್ಥಾನ :** ಸ್ಥಾನ ದೃಷ್ಟಿಯಿಂದ ನೋಡಿದರೆ ದಶಮ ಸ್ಥಾನವೇ ಕಾರಕಸ್ಥಾನವು. ದಶಮದ ನಂತರ ಷಷ್ಠ, ತೃತೀಯ ಸ್ಥಾನಗಳು ಕಾರಕವಿರುತ್ತವೆ.

**ಲಗ್ನ :** ಲಗ್ನ ದೃಷ್ಟಿಯಿಂದ ನೋಡಿದರೆ ಮೇಷ, ವೃಷಭ, ಕರ್ಕ, ತುಲಾ, ವೃಶ್ಚಿಕ, ಮಕರ, ಕುಂಭ ಈ ಲಗ್ನದವರೇ ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

ರಾಶಿ : ರಾಶಿ ದೃಷ್ಟಿಯಿಂದ ನೋಡಿದರೆ ಬಿಸಿಲು–ಮಳೆ-ಚಳಿ–ಗಾಳಿಯಲ್ಲಿ ಓಡಾಡುವುದರಲ್ಲಿ ಪುರುಷ ರಾಶಿಗಳು ಕಾರಕವಿರುತ್ತವೆ. ಆದ್ದರಿಂದ ಮೇಷ, ಮಿಥುನ, ಸಿಂಹ, ತುಲಾ, ಧನು, ಕುಂಭ ರಾಶಿಯವರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

## ೮. ಹಂದಿ ಸಾಕಾಣಿಕೆ

ಕಾರಕ ಗ್ರಹ : ಹಂದಿ ಸಾಕಾಣಿಕೆ ವೃತ್ತಿಗೂ ಕೂಡ ಚಂದ್ರನೇ ಕಾರಕನು. ಚಂದ್ರನ ತರುವಾಯ ಶನಿಯು ಕಾರಕನು. ಚಂದ್ರ–ಶನಿ ಬಲಾಢ್ಯರಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು.

ಲಗ್ನ : ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ತುಲಾ, ವೃಶ್ಚಿಕ, ಮಕರ ಈ ಲಗ್ನದವರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

ಸ್ಥಾನ : ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಚತುರ್ಥ, ಷಷ್ಠ, ತೃತೀಯ ಕಾರಕ ಸ್ಥಾನಗಳೂ ಈ ಸ್ಥಾನಾಧೀಶರೂ ಬಲಾಢ್ಯರಿರಬೇಕು.

ರಾಶಿ : ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಪುರುಷ ರಾಶಿಗಳಾದ ಮೇಷ, ಮಿಥುನ, ಸಿಂಹ, ತುಲಾ, ಧನು, ಕುಂಭ ಈ ರಾಶಿಯವರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

———

## ೩

# ಬುದ್ಧಿಜೀವಿಗಳ ವೃತ್ತಿ

ಆಧುನೀಕರಣ ಹೆಚ್ಚಿದಂತೆ ಬುದ್ಧಿಜೀವಿಗಳ ಪಾತ್ರವು ಹೆಚ್ಚುತ್ತ ಹೋಗುತ್ತದೆ. ಶಾಸ್ತ್ರಜ್ಞಾನ, ವಿಜ್ಞಾನ, ತಂತ್ರಜ್ಞಾನಗಳ ಬುನಾದಿಯೇ ಬುದ್ಧಿಜೀವಿಯೆಂದು ಹೇಳಬಹುದು.

ಪ್ರಾಚೀನ ಕಾಲದಲ್ಲಿ ಬುದ್ಧಿಜೀವಿಗಳ ವರ್ಗದಲ್ಲಿ ಪುರೋಹಿತರನ್ನು ಶಿಕ್ಷಕರನ್ನು ಆಚಾರ್ಯರನ್ನು ಪ್ರಧಾನವಾಗಿ ಸೇರಿಸಲಾಗುತ್ತಿತ್ತು. ಆದರೆ ಈ ವರ್ಗ ಈಗ ಬಹಳಷ್ಟು ವಿಸ್ತಾರಗೊಂಡಿದೆ. ಅಂತೆಯೇ ಬುದ್ಧಿಜೀವಿಗಳ ನಾನಾ ಪ್ರಕಾರಗಳ ಪರಿಗಣನೆ ಅತ್ಯಾವಶ್ಯಕ ವಾಗುತ್ತದೆ. ವಕೀಲ, ಡಾಕ್ಟರ, ಪರವಾನ ತೆರಿಗೆ ಸಲಹೆಗಾರ, ಚಾರ್ಟರ್ಡ ಅಕೌಂಟಂಟ, ಕಾಸ್ಟ ಅಕೌಂಟಂಟ, ಶಿಲ್ಪಿ, ಇಂಜಿನೀಯರ, ತಂತ್ರಜ್ಞಾನಿ, ಶಿಕ್ಷಕ, ಜ್ಯೋತಿಷಿ, ಪುರೋಹಿತ, ಪತ್ರಿಕೋದ್ಯಮಿ, ಪ್ರಕಾಶಕ, ಸಾಹಿತಿ(ಲೇಖಕ), ಕಲಾಕಾರ, ಸಲಹೆಗಾರ, ವಿಜ್ಞಾನಿ, ಸಂಶೋಧಕ ಈ ಮೊದಲಾದವರೆಲ್ಲರೂ ಬುದ್ಧಿಜೀವಿಗಳೇ. ಈ ಒಂದೊಂದು ವೃತ್ತಿಯಲ್ಲಿಯೂ ಉಪ ವಿಭಾಗಗಳನ್ನು ಮಾಡಬಹುದು. ಆದರೆ ಇಲ್ಲಿ ಮುಖ್ಯವಾಗಿ ಪರಿಗಣಿಸಬೇಕಾದ ವಿಷಯವೆಂದರೆ ಯಾವ ಜಾತಕನನ್ನಾದರೂ ಬುದ್ಧಿಜೀವಿಯೆಂದು ಪರಿಗಣಿಸಬೇಕಾದರೆ ಯಾವ ಲಕ್ಷಣಗಳು ಅವಶ್ಯ, ಹಾಗೆಯೇ ಯಾವ ವಿಶಿಷ್ಟ ವರ್ಗಕ್ಕೆ ಯಾವ ಗ್ರಹಗಳ ಸಮ್ಮಿಲನ ಅವಶ್ಯ ಎಂಬುದರ ವಿಶೇಷ ವಿಶ್ಲೇಷಣೆಯನ್ನು ಮಾಡಬೇಕಾಗುತ್ತದೆ. ಈ ಕ್ಲಿಷ್ಟತಮ ವಿವೇಚನೆಯನ್ನು ಈ ವಿಭಾಗದಲ್ಲಿ ಸೇರಿಸಲಾಗಿದೆ.

## ೧. ವಕೀಲಿಕೆ ವೃತ್ತಿ

ನಮ್ಮ ಸ್ವಾತಂತ್ರ್ಯಪೂರ್ವದಲ್ಲಿ ವಕೀಲಿವೃತ್ತಿಗೆ ದೊರೆತಷ್ಟು ಉನ್ನತ ಸ್ಥಾನಮಾನಗಳು ಬಹುಶಃ ಬೇರೆ ಯಾವ ಉದ್ಯೋಗಕ್ಕೂ ಉದ್ಯೋಗಸ್ಥಗೂ ದೊರೆತಿರಲಿಲ್ಲ. ಅಷ್ಟೇ ಅಲ್ಲ, ಈ ವೃತ್ತಿಯಲ್ಲಿ ಗಳಿಸುತ್ತಿದ್ದಷ್ಟು ಹಣ (ಉತ್ಪನ್ನ) ವನ್ನು ಬೇರಾವ ಉದ್ಯೋಗದಲ್ಲಿಯೂ ಗಳಿಸಲಾಗುತ್ತಿರಲಿಲ್ಲ. ಸ್ವಾತಂತ್ರ್ಯ ಸಮರದಲ್ಲಿ ಮುಖ್ಯ ಪಾತ್ರ ವಹಿಸಿ ದೇಶ ಸೇವೆಗಾಗಿ ಅತ್ಯಂತ ಹೆಚ್ಚಿನ ತ್ಯಾಗ ಮಾಡಿದವರೆಲ್ಲರೂ ಸಾಮಾನ್ಯವಾಗಿ ವಕೀಲರೇ ಆಗಿದ್ದರು, ಇಂದಿಗೂ ಸಹ ರಾಜಕೀಯ ಹಾಗೂ ಸಾಮಾಜಿಕ ಧುರೀಣರೆಲ್ಲರೂ, ಹೆಚ್ಚಿನ ಸಂಖ್ಯೆಯಲ್ಲಿ ವಕೀಲರೇ ಇದ್ದಾರೆ.

ಈ ರೀತಿ ವಕೀಲಿ ವೃತ್ತಿ ಗೌರವಪೂರ್ಣವಾಗಿದ್ದರೂ ಸಹ ಇಂದು ಆ ವೃತ್ತಿಯನ್ನು ಕೈಕೊಳ್ಳಲು ಸಾಮಾನ್ಯವಾಗಿ ಜನ ಹಿಂಜರಿಯುತ್ತಿದ್ದಾರೆ. ಇದಕ್ಕೆ ಕಾರಣಗಳಿಲ್ಲದೆಯೂ ಇಲ್ಲ.

ಪ್ರತಿಯೊಂದು ತಾಲೂಕಿನಲ್ಲಿ ನ್ಯಾಯಾಲಯಗಳು ಸ್ಥಾಪಿತವಾಗಿ (Justice at the door) ಬಾಗಿಲಲ್ಲೇ ನ್ಯಾಯನಿರ್ಣಯ ಸೌಕರ್ಯವಾಗಿ ಇಂದು ವಕೀಲಿ ವೃತ್ತಿಯಲ್ಲಿ ತೀವ್ರ ಸ್ಪರ್ಧೆ ಇದೆ. ಅಲ್ಲದೆ ಸರಕಾರದ ಧೋರಣೆಯಿಂದಾಗಿ ಕೆಲವು ಪ್ರಕಾರದ ವ್ಯಾಜ್ಯಗಳ ಸಂಖ್ಯೆ ಕಡಿಮೆಯಾಗಿದೆ. ಉದಾಹರಣೆಗಾಗಿ— ಭೂಸುಧಾರಣೆ ಕಾಯಿದೆಯ ಟ್ರಿಬ್ಯೂನಲ್ ಮೊದಲಾದವು ಆಗಿವೆ. ಇದರಿಂದಾಗಿ ಹಲವು ಶ್ರೇಷ್ಠ ವಕೀಲರನ್ನು ಬಿಟ್ಟರೆ ಇತರ ವಕೀಲರು ಸಾಕಷ್ಟು ಗಳಿಕೆ ಇಲ್ಲದೆ ಒಂದು ರೀತಿಯಿಂದ ಸಂಡೆಪ್ಲೀಡರಗಳು ಆಗಿದ್ದಾರೆ. ವಕೀಲಿವೃತ್ತಿ ಹಿಡಿದವರಿಗೂ ವೃತ್ತಿ ಆರಂಭಿಸಿ ೮–೧೦ ವರುಷಗಳಾದರೂ ಅವರ ವೃತ್ತಿ (ಪ್ರ್ಯಾಕ್ಟೀಸದಲ್ಲಿ)ಯಲ್ಲಿ ಹುರುಪೇ

ಕಂಡುಬಂದಿಲ್ಲ. ಇದರಿಂದಾಗಿ ಇಂಜಿನೀಯರಿಂಗ್, ಮೆಡಿಕಲ್ ಮೊದಲಾದ ಉದ್ಯೋಗಗಳಿರುವಷ್ಟು ಪ್ರಾಶಸ್ತ್ಯ ವಕೀಲಿ ವೃತ್ತಿಗೆ ಇಲ್ಲ ಎಂಬುದು ಸ್ಪಷ್ಟವಾಗುತ್ತಿದೆ. ವಕೀಲಿ ವಿದ್ಯೆಯನ್ನು ಕಲಿತವರು ಇಂದು ಹೆಚ್ಚು ಹೆಚ್ಚಾಗಿ ಆ ವೃತ್ತಿಯಿಂದ ಪರಾಙ್ಮುಖರಾಗುತ್ತಿರುವುದು ಕಂಡುಬಂದಿದೆ. ಹೀಗಾಗಿ ಅವರು ನ್ಯಾಯಖಾತೆಯಲ್ಲಿ ಮತ್ತಿತರ ಕಡೆಗಳಲ್ಲಿ ನೌಕರಿ ಮಾಡಲು ಬಯಸುತ್ತಾರೆ.

ಇಂದು ಅನೇಕ ಆಸ್ತಿವಂತರು ತಮ್ಮ ಆಸ್ತಿಯ ರಕ್ಷಣೆಗಾಗಿ, ಭದ್ರತೆಗಾಗಿ ಮತ್ತು ರಾಜಕೀಯ ಸಾಮಾಜಿಕ ಚಟುವಟಿಕೆಗಳಿಗೆ ಸಹಾಯಕವಾಗಲೆಂದು ವಕೀಲಿ ವೃತ್ತಿಯನ್ನು ಕೈಕೊಳ್ಳುತ್ತಿರುವರೆ ವಿನಃ ಆ ವೃತ್ತಿಯಿಂದಲೇ ಉಪಜೀವನ ಕೈಕೊಂಡಿರುವುದಿಲ್ಲವೆಂದು ಹೇಳಿದರೆ ತಪ್ಪಾಗಲಾರದು. ಅಥವಾ ಬೇರೆ ರೀತಿಯ ಒಳ್ಳೆ ಉತ್ಪನ್ನ ಇರುವವರಿಗೆ ಇದೊಂದು ಉಪ ಉದ್ಯೋಗ ( Side Profession ) ವೆಂದು ಈ ವೃತ್ತಿ ಕೈಕೊಂಡಿದ್ದಾರೆ. ಇನ್ನು ಕೆಲವರು ವಂಶ ಪಾರಂಪರ್ಯದಿಂದಾಗಿ ಈ ವೃತ್ತಿಯನ್ನು ಕೈಕೊಂಡಿರುವರು, ಆದರೆ ಈ ಯಾವುದೇ ಆಧಾರವೂ ಇಲ್ಲದೆ ಇರುವ ಸಾಮಾನ್ಯ ವ್ಯಕ್ತಿಯು ವಕೀಲಿಕಿ ವೃತ್ತಿಯಿಂದಲೇ ಉಪಜೀವನ ಸಾಗಿಸುವುದು ಕಷ್ಟಕರವೆಂದು, ಅದಕ್ಕಿಂತಲೂ ಒಂದು ಸರಕಾರಿ ಕಾರಕೂನಿಕೆಯೇ ಹೆಚ್ಚು ಆಶ್ವಾಸನಕಾರಿಯಾದೀತೆಂದು ಇಂದು ಅನೇಕರ ಅಭಿಪ್ರಾಯವಾಗಿದೆ.

ವಕೀಲಿಕಿ ವೃತ್ತಿಯನ್ನು ಕೈಕೊಳ್ಳಲು ಹಿಂಜರಿಯುತ್ತಿರುವ ಒಬ್ಬರಿಗೆ ನಾನು ಅದೇ ವೃತ್ತಿಯನ್ನು ಕೈಕೊಳ್ಳಬೇಕೆಂದು ಸಲಹೆ ಮಾಡಿದಾಗ ಅವರು ಕೊಟ್ಟ ಉತ್ತರ ವಿಚಿತ್ರವೆನಿಸಿದರೂ ಅದು ನಿಜವಿದೆ— " ನಮ್ಮ ಜಾತಿಯ ಜನ ಇಲ್ಲಿ ಕಡಿಮೆ, ಸರ್; ಆದ್ದರಿಂದ ಈ ವೃತ್ತಿ ಕೈ ಕೊಂಡರೆ ಯಾರು ಬೆಂಬಲ ಕೊಡುತ್ತಾರೆ, ನನ್ನ ಮದುವೆ ಹೇಗೆ, ಕನ್ಯೆ ಯಾರು ಕೊಡುತ್ತಾರೆ" ಎಂದರು.

ಇವು ಏನೇ ಇರಲಿ, ಜ್ಯೋತಿಷ್ಯದ ಪ್ರಕಾರ ಅನುಕೂಲ ಕಾಲ

ಬಂದಾಗ ಯಾವದೇ ಉದ್ಯೋಗದಲ್ಲಾದರೂ ಚೆನ್ನಾಗಿ ಪ್ರಗತಿಯಾಗುತ್ತದೆ. ಆದರೆ ಯಾವದೇ ಉದ್ಯೋಗದಲ್ಲಿ ಸಹ ಒಮ್ಮೆಲೇ ಹೆಸರು - ಗಳಿಕೆಗಳು ದೊರೆಯುವುದು ಸಾಧ್ಯವಿಲ್ಲ. ವೈದ್ಯಕೀಯ, ವ್ಯಾಪಾರ ಮಾತ್ರಿತರ ಉದ್ಯೋಗಗಳಲ್ಲಿ ಹೇಗೆಯೋ ಅದೇ ರೀತಿ ವಕೀಲಿ ವೃತ್ತಿಯಲ್ಲಿಯೂ ನಿಜ ವಿರುತ್ತದೆ. ಅನುಕೂಲ ಕಾಲ ಬಂದರೆ, ಜಾತಿ-ಮತ-ಪಂಥ-ಪ್ರಭಾವ-ಪ್ರಚಾರ-ವಶೀಲಿ ಮತ್ತಿತರ ಯಾವುದೇ ಪ್ರತಿಕೂಲ ಸಂದರ್ಭಗಳಿದ್ದರೂ ಸಹ, ಅವುಗಳೆಲ್ಲವನ್ನು ಬದಿಗಿರಿಸಿ ಅವನನ್ನು ಖಂಡಿತ ಮುಂದೆತರುತ್ತದೆ. ಉದಾಹರಣೆಗಾಗಿ— ಅಟಾರ್ನಿ ಜನರಲ್‌ರಾಗಿ ನಿವೃತ್ತರಾದ ಎಂ. ಸಿ. ಸೆಟಲ್‌ವಾಡರು ಅನೇಕ ವರುಷಗಳವರೆಗೆ ಪ್ರ್ಯಾಕ್ಟೀಸ ಇಲ್ಲದಲೆ ಇದ್ದರೂ ಆನಂತರ ಉಸಿರಾಡಿಸಲು ಸಹ ಸಮಯವಿಲ್ಲದಷ್ಟು ಪ್ರ್ಯಾಕ್ಟೀಸ ಹೊಂದಿ ಅಟಾರ್ನಿ ಜನರಲ್‌ದಂತಹ ಅತ್ಯುಚ್ಚ ಹುದ್ದೆಗೇರಿ ನಿವೃತ್ತರಾದರು.

ಅದೇನೆ ಇರಲಿ ಫಲ ಜ್ಯೋತಿಷ್ಯದಲ್ಲಿ ವಕೀಲಿ ವೃತ್ತಿ ಕೈಕೊಳ್ಳಲು ಜಾತಕ ಹೇಗಿರುತ್ತದೆ, ಕಾರಕ ಗ್ರಹ ಸ್ಥಾನ ಲಗ್ನ ರಾಶ್ಯಾದಿಗಳಾವವು ಎಂಬುದನ್ನು ಪರೀಶಿಲಿಸುವಾ.

**ಕಾರಕ ಗ್ರಹ :** ಕಾಯದೆಗೆ ಕಾರಕಗ್ರಹವೆಂದರೆ ಶನಿಯು. ಜಾತಕದಲ್ಲಿ ಶನಿಯು ಬಲಾಢ್ಯನಿರದ ಯಾರೂ ಯಶಸ್ವಿ ಕಾಯದೇ ಪಂಡಿತ ರಾಗಲಾರರು. ಬಲಾಢ್ಯನೆಂದರೆ ರಾಶಿ ಬಲದವನೂ ಸ್ಥಾನಬಲದವನೂ, ಯೋಗಕಾರನೂ ಆಗಿರಬೇಕು.

ಶನಿಯ ತರುವಾಯ ಗುರು, ರವಿಯರ ಬಲಾಬಲವನ್ನು ಪರಿಶೀಲಿಸ ಬೇಕು. ಏಕೆಂದರೆ ನ್ಯಾಯಾಧೀಶರ ಸಹಾಯ-ಸಹಕಾರ ವಕೀಲರಿಗೆ ಬೇಕೇ ಬೇಕು. ನ್ಯಾಯಾಧೀಶ ಕಾರಕನಾದ ಗುರುವು, ನ್ಯಾಯಾಧೀಶರ ಮೇಲೆ ಪ್ರಭಾವ ಬೀರುವ ಸರಕಾರ ಕಾರಕವಾದ ರವಿಯು ಬಲಾಢ್ಯರಿರಬೇಕು. ಗುರು-ರವಿ ಬಲಾಢ್ಯರಿರದೆ ವಕೀಲಿ ವೃತ್ತಿ ನಡೆಯುವುದಿಲ್ಲವೆಂದಲ್ಲ, ಶನಿಯು

ಬಲಾಢ್ಯನಿದ್ದರೆ, ಎಂತಹ ಕಾಯದೆ ಪಂಡಿತ ತಜ್ಞನಿದ್ದರೂ ರವಿ–ಗುರು ಗಳು ದುರ್ಬಲರಿದ್ದರೆ, ೫-೬ ವರುಷಗಳವರೆಗೆ ವೃತ್ತಿ ಕುದುರುವದಿಲ್ಲ. ಶನಿಯು ರಾಶಿ ಬಲದವನು ಸ್ಥಾನ ಬಲದವನು ಯೋಗಕಾರಕನಾಗಿದ್ದು ರವಿ–ಗುರುಗಳು ಕೇವಲ ರಾಶಿ ಬಲದವರಿದ್ದರೆ ಸಾಕು, ವಕೀಲಕಿ ವೃತ್ತಿ ಚೆನ್ನಾಗಿ ನಡೆಯುತ್ತಿದೆ. ಶನಿಯು ಬಲಾಢ್ಯನಿದ್ದು ರವಿ, ಗುರುಗಳು ದುರ್ಬಲ ಹಿರಿಯ ವಕೀಲರು ತಾವೆ ಸ್ವತಃ ಕೇಸುಗಳನ್ನು ನಡೆಸದೆ ಕಿರಿಯ ವಕೀಲ ರಿಗೆ ಕೇಸಗಳನ್ನು ನಡೆಸಲು ಹೇಳಿ ಅವರಿಗೆ ಕಾಯದೆ ಸಲಹೆ ಪಾಯಿಂಟು ಗಳನ್ನು ಸೂಚಿಸುವದುಂಟು. ಗುರುವು ಬಲಾಢ್ಯನಿದ್ದ ವಕೀಲರು ಕಾಯದೆ ಸ್ವರೂಪದ ಮಸೂದೆ (ಡ್ರಾಫ್ಟ್)ಗಳ ಬರಯುವದರಲ್ಲಿ ಪಳಗಿದವರಿರುತ್ತಾರೆ ಅಲ್ಲದೆ ದಿವಾಣಿ ವ್ಯಾಜ್ಯಗಳಿಗೆ, ಶಿಕ್ಷಣ ಸಂಸ್ಥೆಯ, ಶಿಕ್ಷಣ ಸಂಬಂಧಿಸಿದ ವ್ಯಾಜ್ಯಗಳಿಗೆ, ಮಠ-ಗುಡಿ-ಪಾಠಶಾಲೆ ಮೊದಲಾದ ಸಾರ್ವಜನಿಕ ಟ್ರಸ್ಟಗಳ ವ್ಯಾಜ್ಯಗಳಲ್ಲಿ ಜಯ ಪಡೆಯಲು ಜಾತಕದಲ್ಲಿ ಗುರುವು ಬಲಾಢ್ಯನಿರಲೇ ಬೇಕು. ಅಲ್ಲದೆ ಹೊಲ– ಮನೆಗೆ ಸಂಬಂಧಿಸಿದ ಟೆನನ್ಸಿ ಹಾಗೂ ಲ್ಯಾಂಡ ಅಕ್ವಿಜೇಶನ್ ವ್ಯಾಜ್ಯಗಳಲ್ಲಿಯೂ ಸಹಕಾರ ಸಂಬಧದ ವ್ಯಾಜ್ಯಗಳ ಲ್ಲಿಯೂ ಯಶಸ್ವಿಯಾಗಲು ಗುರುವು ಬಲಾಢ್ಯನಿರಲೇಬೇಕು.

ಫೌಜದಾರಿ ಹಾಗೂ ಖೂನಿ ಸಂಬಂಧ ವ್ಯಾಜ್ಯಗಳಲ್ಲಿ ಯಶಸ್ಸು ಪಡೆ ಯಲು ಶನಿಯೊಂದಿಗೆ ಮಂಗಳನ ಬಲಾಬಲವನ್ನು ಪರಿಶೀಲಿಸಬೇಕು. ಇಲ್ಲಿ ಮಂಗಳ ರಾಶಿ ಬಲದವ, ಸ್ಥಾನ ಬಲದವ, ಯೋಗ ಕಾರಕನಿದ್ದರೆ, ಶನಿಯು ಕೇವಲ ರಾಶಿ ಬಲದವನಿರುತ್ತಾನೆ. ಇದರಂತೆ ಮೋಟಾರ ಫ್ರಿ ಕಲ ವ್ಯಾಜ್ಯದಲ್ಲಿಯೂ ಯಶಸ್ವಿಯಾಗಲು ಜಾತಕದಲ್ಲಿ ಮಂಗಳ ಬಲಾಢ್ಯನಿರಲೇಬೇಕು. ವಾಣಿಜ್ಯ, ವ್ಯಾಪಾರ-ಸುಂಕ-ತೆರಿಗೆ ಸಂಬಂಧದ ವ್ಯಾಜ್ಯದಲ್ಲಿ ಯಶಸ್ವಿಯಾಗಲು ಜಾತಕದಲ್ಲಿ ಬುಧನು ಬಲಾಢ್ಯನಿರಲೇ ಬೇಕು. ಇಲ್ಲಿ ಬುಧನು ರಾಶಿ ಬಲದವನು ಸ್ಥಾನ ಬಲದವನು ಯೋಗ ಕಾರಕನು ಇದ್ದರೆ, ಶನಿಯು ಕೇವಲ ರಾಶಿ ಬಲದವನಿರುತ್ತಾನೆ.

ಸರಕಾರಿ ನೌಕರಿಗೆ ಸಂಬಂಧಿಸಿದ ಇಲ್ಲವೆ ಯಾವುದೇ ಪ್ರಕಾರದ

ನೌಕರಿಗೆ ಸಂಬಂಧಿಸಿದ ವ್ಯಾಜ್ಯದಲ್ಲಿಯೂ ಚುನಾವಣೆ ಸಂಬಂಧದ ವ್ಯಾಜ್ಯ ದಲ್ಲಿಯೂ ಯಶಸ್ವಿಯಾಗಲು ಜಾತಕದಲ್ಲಿ ರವಿ ಶನಿಯೂ ಬಲಾಢ್ಯರಿರ ಬೇಕಾಗುತ್ತದೆ. ಅಂದರೆ ರವಿಯು ರಾಶಿ ಬಲದವನೂ ಸ್ಥಾನ ಬಲ ದವನೂ ಇದ್ದರೆ ಶನಿಯು ಕೇವಲ ರಾಶಿ ಬಲದವನಿರುತ್ತಾನೆ.

ತೋಟಗಾರಿಕೆಗೆ,ಹಣ್ಣು ಹಂಪಲಕ್ಕೆ,ಪ್ರವಾಹಿ ಪದಾರ್ಥಗಳಿಗೆ ಸಂಬಂ ಧಿಸಿದ ವ್ಯಾಜ್ಯದಲ್ಲಿ ಯಶಸ್ವಿಯಾಗಲು ಚಂದ್ರನ ಬಲಾಬಲವನ್ನು ಪರಿಶೀಲಿಸ ಬೇಕು.

ಅಲ್ಲದೆ ಮನೆ ಅಂಗಡಿಗೆ ಸಂಬಂಧಿಸಿದ ಕಟ್ಟಡದ ಬಾಡಿಗೆಗೆ ಸಂಬಂಧಿಸಿದ (ಹೆಚ್. ಆರ್. ಸಿ.) ವ್ಯಾಜ್ಯಗಳಲ್ಲಿ ಯಶಸ್ವಿಯಾಗಲು ಚಂದ್ರ-ಶುಕ್ರರ ಬಲಾಬಲವನ್ನು ಪರಿಶೀಲಿಸಬೇಕು.

ಪೋಟಗೆ-ಸೋಡಚೀಟಿ ಮೊದಲಾದ ಕೌಟುಂಬಿಕ ವ್ಯಾಜ್ಯದಲ್ಲಿ ಯಶಸ್ವಿಯಾಗಲು ಗುರುವಿನ ಬಲಬಲವನ್ನು ಪರಿಶೀಲಿಸಬೇಕು.

ಹೀಗೆ ಭಿನ್ನಭಿನ್ನ ವಿಷಯುಗಳ ಕೇಸುಗಳಲ್ಲಿ ಯಶಸ್ವಿಯಾಗಲು ಶನಿ ಯೊಡನೆ ಆಯಾ ವಿಷಯಗಳ ಕಾರಕ ಗ್ರಹಗಳ ಬಲಾಬಲವನ್ನು ಪರಿಶೀಲಿಸ ಬೇಕಾಗುತ್ತದೆ.

## ಸ್ಥಾನ ಹಾಗೂ ಸ್ಥಾನಾಧಿಶರು

ಸ್ಥಾನ ದೃಷ್ಟಿಯಿಂದ ಪರಿಶಿಲಿಸಿದರೆ ವಕೀಲಿ ವೃತ್ತಿಗೆ ದ್ವಿತೀಯ ಸ್ಥಾನವೇ ಮೂಲ ಹಾಗೂ ಮುಖ್ಯವಿರುತ್ತದೆ. ಏಕೆಂದರೆ ಮಾತುಗಾರಿ ಕೆಯು ಕಡೆಯೋ ವಕೀಲಿ ವೃತ್ತಿಯ ಮಹತ್ವದ ಅಂಶ. ಮಾತಿನ ವೈಖರಿ, ಮಾತಿನ ಪಾಂಡಿತ್ಯ, ಸಮಯೋಜಿತ ಮಾತು ಈ ಮೊದಲಾದ ಮಾತುದಾರಿ

ಕೆಗೆ ಸಂಬಂಧಿಸಿದ ಸ್ಥಾನವೆಂದರೆ ದ್ವಿತೀಯ ಸ್ಥಾನವು. ಆದ್ದರಿಂದ ದ್ವಿತೀಯ ಸ್ಥಾನ, ದ್ವಿತೀಯೇಶರು ಬಲಾಢ್ಯರಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗುವುದಿಲ್ಲ ದ್ವಿತೀಯದಲ್ಲಿ ರಾಹು, ಶನಿಯಿದ್ದರೆ ಮಾತು ಪರಿಣಾಮಕಾರಿಯಾಗುವುದಿಲ್ಲ.

ದ್ವಿತೀಯದ ನಂತರ ಪಂಚಮ ಸ್ಥಾನವು ವಕೀಲಿ ವೃತ್ತಿಗೆ ಕಾರಕ ಸ್ಥಾನವು. ಏಕೆಂದರೆ ಕಾಯದೇ ಸ್ವರೂಪದ ಡ್ರಾಫ್ಟನ್ನು ತಯಾರಿಸಲು ಪಂಚಮ ಸ್ಥಾನದ ಬಲಾಬಲವನ್ನು ಪರಿಶೀಲಿಸಬೇಕು. ಪಂಚಮ ಸ್ಥಾನ, ಪಂಚಮೇಶರು ಬಲಾಢ್ಯರಿರುವ ವಕೀಲರು ಪರಿಣಾಮಕಾರಿ ಡ್ರಾಫ್ಟ ಬರೆಯಬಲ್ಲರು.

ವಕೀಲಿ ವೃತ್ತಿಯಲ್ಲಿ ಪ್ರತಿವಾದಿಯ ವಾದ ಮುಖ್ಯ. ಪ್ರತಿವಾದಿ (ಪ್ರತಿಸ್ಪರ್ಧಿ) ಯನ್ನು ಸೋಲಿಸಲು ಸಪ್ತಮ ಸ್ಥಾನ, ಸಪ್ತಮೇಶರು ಬಲಾಢ್ಯರಿರಬೇಕು.

ನವಮ ಸ್ಥಾನ, ನವಮೇಶರು ಬಲಾಢ್ಯರಿದ್ದ ವಕೀಲರು ನ್ಯಾಯಾಧೀಶರು (ಕೋರ್ಟು) ಒಲಿಯುವಂತೆ, ನಂಬುವಂತೆ ಮಾತಾಡುತ್ತಾರೆ. ನವಮ ಸ್ಥಾನ, ನವಮೇಶ ದುರ್ಬಲರಿದ್ದ ಜಾತಕರು ತಮ್ಮ ವಿಷಯವನ್ನು ಮಂಡಿಸಲು ಸಾಬೀತ (ಸಿದ್ಧ) ಮಾಡಲು ಸಾಕ್ಷಿ – ಪುರಾವೆಗಳನ್ನು ಕಲೆಹಾಕಲು ಹೆಣಗಾಡಬೇಕಾಗುತ್ತದೆ.

ಫೌಜದಾರಿ ( ಕ್ರಿಮಿನಲ್), ಹೊಡೆದಾಟ ಬಡಿದಾಟಕ್ಕೆ ಸಂಬಂಧಿಸಿದ ವ್ಯಾಜ್ಯದಲ್ಲಿ ಯಶಸ್ವಿಯಾಗಲು ತೃತೀಯ, ಷಷ್ಠ, ದ್ವಾದಶ ಸ್ಥಾನಗಳನ್ನು ಈ ಸ್ಥಾನಾಧೀಶರ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ.

ಸ್ಥಾವರ ಇಸ್ಟೇಟ, ಹೊಲ ಮನೆ, ಜಮೀನ–ಜುಮ್ಲಾ ಮೊದಲಾದ

ಆಸ್ತಿ ಸಂಬಂಧದ ವ್ಯಾಜ್ಯದಲ್ಲಿ ಯಶಸ್ವಿಯಾಗಲು ಚತುರ್ಥ ಸ್ಥಾನ, ಚತುರ್ಥೇಶರ ಬಲಾಬಲವನ್ನು ಪರಿಶೀಲಿಸಬೇಕು.

**ಲಗ್ನ :** ವಕೀಲಿ ವೃತ್ತಿಯನ್ನು ಕೈಕೊಳ್ಳಲು ನಿರ್ದಿಷ್ಟ ಲಗ್ನದವರೇ ಯಶಸ್ವಿಗಳಾಗುತ್ತಾರೆಯೆಂದು ಹೇಳಲುಬಾರದು. ಆದಾಗ್ಯೂ, ಮೇಷ, ವೃಷಭ, ಮಿಥುನ, ತುಲಾ, ವೃಶ್ಚಿಕ, ಮಕರ, ಕುಂಭ ಈ ಲಗ್ನದವರೇ ವಕೀಲಿ ವೃತ್ತಿಯಲ್ಲಿ ಜಯಶೀಲರಾಗುವದು ಹೆಚ್ಚು.

ಇದಲ್ಲದೆ ವಿಭಿನ್ನ ವಿಷಯಗಳ ವ್ಯಾಜ್ಯಗಳಿಗೆ ವಿಭಿನ್ನ ಲಗ್ನಗಳು ಕಾರಕವಿರುತ್ತವೆ. ಹೇಗೆಂದರೆ: ವೃಷಭ, ಮಿಥುನ, ಕನ್ಯಾ, ಧನು, ಮಕರ, ಮೀನ ಈ ಲಗ್ನದವರು ಯಾವುದೇ ಪ್ರಕಾರದ ತೆರಿಗೆ ಸಂಬಂಧದ, ಹಾಗು ವರಮಾನ, ಮಾರಾಟ, ಲಟಕಾರಿ ಇತ್ಯಾದಿ ವ್ಯಾಜ್ಯದಲ್ಲಿ ಯಶಸ್ವಿಯಾಗುತ್ತಾರೆ.

ಮೇಷ, ಕರ್ಕ, ಸಿಂಹ, ವೃಶ್ಚಿಕ, ಧನು ಲಗ್ನದವರು ಕ್ರಿಮಿನಲ್ ಫೌಜದಾರಿ, ಮೋಟರ ವ್ಹೀಕಲ ವ್ಯಾಜ್ಯದಲ್ಲಿ ಯಶಸ್ವಿಯಾಗುತ್ತಾರೆ.

ಮೇಷ, ವೃಷಭ, ಕರ್ಕ, ಸಿಂಹ, ವೃಶ್ಚಿಕ, ಧನು ಈ ಲಗ್ನದವರು ಚುನಾವಣೆ ಸಂಬಂಧದ, ನೌಕರಿಗೆ ಸಂಬಂಧಿಸಿದ ವ್ಯಾಜ್ಯದಲ್ಲಿ ಯಶಸ್ವಿಯಾಗುತ್ತಾರೆ.

ಮೇಷ, ಮಿಥುನ, ಕರ್ಕ, ಸಿಂಹ, ವೃಶ್ಚಿಕ, ಧನು, ಮೀನ ಲಗ್ನದವರು ದಿವಾಣಿ ವ್ಯಾಜ್ಯ, ಹೊಲ-ಮನೆ-ಆಸ್ತಿ-ಮಠ ಯಾವುದೇ ಪ್ರಕಾರದ ಟ್ರಸ್ಟ, ವಿದ್ಯಾ ಸಂಸ್ಥೆ ವ್ಯಾಜ್ಯಗಳಲ್ಲಿ ಯಶಸ್ವಿಯಾಗುತ್ತಾರೆ.

**ರಾಶಿ :** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯವರೆ ಈ ವಕೀಲಿ ವೃತ್ತಿಯಲ್ಲಿ ಯಶಸ್ವಿಯಾಗುವರು ಎಂಬ ನಿಯಮ ವಿರುವದಿಲ್ಲ.

# ೨ ವೈದ್ಯಕೀಯ ವೃತ್ತಿ

ಇತಿಹಾಸ, ರಾಜಕೀಯ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ನಾವು ಅನೇಕ ಯುಗಗಳನ್ನು ಗುರುತು ಮಾಡಿರುವಂತೆಯೇ ಉದ್ಯೋಗ ಕ್ಷೇತ್ರದಲ್ಲಿಯೂ ಸಹ ಕಾಲಕಾಲಕ್ಕೆ ಆಗುವ ಬದಲಾವಣೆಯನ್ನು ಗುರುತಿಸಿ ನಾವು ಒಂದೊಂದು ವೃತ್ತಿಗೆ ಒಂದೊಂದು ಯುಗವೆಂದು ವಿಂಗಡಿಸಬಹುದು.

ಮೊದಲನೆಯದಾಗಿ, ಸ್ವಾತಂತ್ರ್ಯ ಪೂರ್ವದಲ್ಲಿ ನಮ್ಮ ದೇಶದಲ್ಲಿ ಹಲವರು ವಕೀಲಿ ಶಿಕ್ಷಣ ಪಡೆದು ವಕೀಲಿ ವೃತ್ತಿಯನ್ನು ಕೈಕೊಂಡು ದೇಶಸೇವೆಯಲ್ಲಿ ತೊಡಗಿದ್ದರು. ಆಗ ನೌಕರಿಗೆ ಸೇರುವುದೆಂದರೆ ಬ್ರಿಟಿಶರ ಗುಲಾಮರಾಗುವುದೇದೇ ಬಗೆದ ಆ ಜನರು ಆಂಗ್ಲ ಸರಕಾರದ ಗುಲಾಮರಾಗಿ ನೌಕರಿ ಮಾಡಲಿಚ್ಛಿಸದೆ ಸ್ವತಂತ್ರ್ಯ ಉದ್ಯೋಗವನ್ನು ಹಿಡಿದು ತನ್ಮೂಲಕ ದೇಶಸೇವೆಯನ್ನು ಮಾಡಲಿಚ್ಛಿಸಿದರು.

೧೯೪೭ ರಲ್ಲಿ ದೇಶಕ್ಕೆ ಸ್ವಾತಂತ್ರ್ಯ ಬಂದ ನಂತರ ಪ್ರಜಾ ಸರಕಾರದ ಮುಂದೆ ಇದ್ದ ಆದ್ಯ ಕರ್ತವ್ಯವೆಂದರೆ ರಾಷ್ಟ್ರ ನಿರ್ಮಾಣ ಕಾರ್ಯ. ದಿವಂಗತ ಸರ್ ಎಂ. ವ್ಹಿ. ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ಸಾರಿದ ಇಂಡಸ್ಟ್ರಿಯಲಾಯಿಜ ಆರ್ ಪೆರಿಶ್ (Industrialise or Perish) ಕೈಗಾರಿಕಾಭಿವೃದ್ಧಿ ಕೈಕೊಳ್ಳಿರಿ ಇಲ್ಲವೆ ನಾಶಹೊಂದಿರಿ ಎಂಬ ಘೋಷಣೆಯ ಮಹತ್ವವನ್ನು ಅರಿತು ಸರಕಾರ ತೀವ್ರವೇ ಕೈಗಾರಿಕಾಭಿವೃದ್ಧಿ ಯೋಜನೆಗಳನ್ನು ರೂಪಿಸಿ, ಅವನ್ನು ಕಾರ್ಯರೂಪಕ್ಕೆ ಇಳಿಸ ತೊಡಗಿತು. ಕೈಗಾರಿಕೆಯನ್ನು ಭಾರೀ ಪ್ರಮಾಣದಲ್ಲಿ ಎಲ್ಲೆಲ್ಲಿಯೂ ಕೈಕೊಳ್ಳಬೇಕಾಯಿತು. ಆದರೆ ದೇಶದಲ್ಲಿ ಒಮ್ಮೆಲೇ ಅಷ್ಟು ತಾಂತ್ರಿಕ ಜ್ಞಾನವುಳ್ಳ ತಾಂತ್ರಿಕ ಸಿಬ್ಬಂದಿ ದೊರೆಯುವುದು ದುಸ್ತರವಾಗಿತ್ತು. ಈ ಕಾರಣದಿಂದಾಗಿ ಎಲ್ಲ ಕಡೆಯಲ್ಲಿಯೂ ಎಲ್ಲ ಪ್ರಕಾರದ ತಾಂತ್ರಿಕ

ಶಿಕ್ಷಣಕ್ಕೆ ಪ್ರೋತ್ಸಾಹ ನೀಡಿ ತಾಂತ್ರಿಕ ಉದ್ಯೋಗಗಳಿಗೆ ಜನ ಹೆಚ್ಚಾಗಿ ಸೇರಲು ಪ್ರೋತ್ಸಾಹಿಸಲಾಯಿತು. ಅವರ ವೇತನಾದಿಗಳನ್ನು ಹೆಚ್ಚಿಸಿತು. ಇದರಿಂದಾಗಿ ದೇಶದಲ್ಲಿ ಅನೇಕ ತಾಂತ್ರಿಕ ಶಿಕ್ಷಣ ಸಂಸ್ಥೆಗಳು ಉದಯ ವಾದವು. ಅವುಗಳಿಗೆ ಸೇರಲು ಬರುವವರ ನೂಕು ನುಗ್ಗಲು ಹೆಚ್ಚಾ ಯಿತು, ಜನರ ಸಹಕಾರ ಮತ್ತು ಒಲವು ಇಮ್ಮಡಿಯಾದಂತೆ ಸರಕಾರವು ಸಹ ಅಶಿಕ್ಷಿತರಿಂದ ಹಿಡಿದು ಸುಶಿಕ್ಷಿತರವರೆಗೆ ಎಲ್ಲರಿಗೂ ತಾಂತ್ರಿಕ ಜ್ಞಾನ ಪಡೆಯಲು ಸಾಧ್ಯವಾಗುವಂತೆ ಕೈಗಾರಿಕಾ ಶಿಕ್ಷಣ ತರ ಬೇತಿ ಕೇಂದ್ರದಿಂದ ಹಿಡಿದು ಉಚ್ಚ ಇಂಜನಿಯರಿಂಗ ಶಿಕ್ಷಣದ ವರೆಗೆ ಅಂದರೆ ಸರ್ಟಿಫಿಕೇಟ ಮತ್ತು ಡಿಪ್ಲೋಮಾ ಕೋರ್ಸದಿಂದ ಹಿಡಿದು ಬಿ. ಇ., ಎಂ ಇ. (Industrial Training Courses, Diploma and Degree Courses) ಮತ್ತಿತರ ಉನ್ನತ ಪದವಿಗಳ ವರಗಿನ ಅನೇಕ ಇಂಜನಿಯರಿಂಗ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಲಾಯಿತು. ಇದರಿಂದಾಗಿ ಈಗ ತಾಂತ್ರಿಕ ಸಿಬ್ಬಂದಿಯ ಕೊರತೆ ಕೆಲ ಮಟ್ಟಿಗೆ ನೀಗಿದೆ ಎನ್ನಬಹುದು. ಈ ದೃಷ್ಟಿಯಿಂದ ಸ್ವಾತಂತ್ರ್ಯದ ನಂತರ ೧೫ ವರುಷ ಗಳ ಕಾಲ ಅಂದರೆ ೧೯೪೭ ರಿಂದ ೧೯೬೨ ವರೆಗಿನ ಕಾಲವನ್ನು ತಾಂತ್ರಿಕ ಇಂಜನಿಯರ ಯುಗವೆಂದು ಕರೆಯಬಹುದು.

ಇದೇ ರೀತಿಯಲ್ಲಿ ೧೯೬೨ ರಿಂದೀಚೆಗೆ ದೇಶದಲ್ಲಿ ವೈದ್ಯಕೀಯ (ಡಾಕ್ಟರ) ಯುಗ ಬಂದಿದೆ ಎಂದರೆ ತಪ್ಪಾಗಲಾರದು. ದೇಶದ ಜನಸಂಖ್ಯೆ ಯೊಡನೆ ರೋಗಿಗಳ, ರೋಗಗಳ ಸಂಖ್ಯೆಯೂ ಹೇರಳವಾಗಿ ಬೆಳೆದಿದೆ. ಆದರೆ ಜನಸಂಖ್ಯೆಗೆ ಅನುಗುಣವಾಗಿ ವೈದ್ಯರಿಲ್ಲ. ಉದಾಹರಣೆಗಾಗಿ— ೮-೧೦ ಸಾವಿರ ಜನಸಂಖ್ಯೆಯುಳ್ಳ ಒಂದು ಹಳ್ಳಿಯಲ್ಲಿ ಇಬ್ಬರು ಇಲ್ಲವೆ ಮೂವರು ವೈದ್ಯರನ್ನು ಕಾಣಬಹುದಾಗಿದೆ. ಇದಲ್ಲದೆ ಅನೇಕ ಹಳ್ಳಿ ಗಳಲ್ಲಿ ಆಸ್ಪತ್ರೆಗಳೇ ಇಲ್ಲದಾಗಿದೆ. ಆಸ್ಪತ್ರೆಗಳಿದ್ದರೂ ವೈದ್ಯರ ಕೊರತೆ ಅಧಿಕವಾಗಿರುವುದು ಸರಕಾರದ ಹಾಗೂ ಜನರ ಗಮನವನ್ನು ಇತ್ತೀಚೆಗೆ ಸೆಳೆದಿರುವಂತೆ ಕಾಣುತ್ತದೆ. ಅಂತೆಯೇ ಆಲೋಪಥಿಯ ಸಂಗದ

ಆಯುರ್ವೇದ, ಹೋಮಿಯೋಪಥಿ, ಯುನಾನಿ, ನಿಸರ್ಗ ಚಿಕಿತ್ಸೆ ಚುಂಬಕ ಚಿಕಿತ್ಸೆ ಮೊದಲಾದ ಎಲ್ಲ ರೀತಿಯ ವೈದ್ಯಕೀಯ ಪದ್ಧತಿಗಳಿಗೆ ಪ್ರೋತ್ಸಾಹವನ್ನು ಕೊಟ್ಟು ಹಳ್ಳಿಯಲ್ಲಿಯ ವೈದ್ಯರ ಕೊರತೆ ತುಂಬಲು ಹೆಚ್ಚು ಸಹಾಯವಾದೀತೆಂದು ಸರಕಾರ ಹಾಗೂ ಜನತೆ ಭಾವಿಸಿದಲ್ಲಿ ತಪ್ಪೇನಿಲ್ಲ.

ವೈದ್ಯರ ಕೊರತೆ ಇರಲು ಇನ್ನೂ ಒಂದು ಕಾರಣ. ಪದವೀಧರ ವೈದ್ಯರು, ಹೆಚ್ಚಾಗಿ ಎಂ. ಬಿ. ಬಿ. ಎಸ್. ವೈದ್ಯರು ಹಳ್ಳಿಗಳಲ್ಲಿ ನೆಲಸಿ ವೈದ್ಯಕೀಯ ವೃತ್ತಿಯನ್ನು ಕೈಕೊಳ್ಳಲು ಹಿಂಜರಿಯುತ್ತಿರುವರು. ನಾಡಿನಲ್ಲಿ ವೈದ್ಯರ ಸಂಖ್ಯೆ ಹೆಚ್ಚಾದರೆ ಈ ಸಮಸ್ಯೆ ತಾನಾಗಿಯೇ ಬಗೆಹರಿಯುವದೆಂಬ ಕಾರಣದಿಂದ ಎಲ್ಲ ಕಡೆಯಲ್ಲಿ ಎಲ್ಲ ಪ್ರಕಾರದ ವೈದ್ಯಕೀಯ ಕಾಲೇಜುಗಳನ್ನು ಸ್ಥಾಪಿಸುವದು ಆರಂಭವಾಗಿದೆ. ಈ ಕಾರಣದಿಂದಾಗಿ ಇಂದಿನದು ವೈದ್ಯರ(ಡಾಕ್ಟರ) ಯುಗವೆಂದೇ ಹೇಳಬಹುದು.

ಈ ಯುಗ ಮುಗಿದು ನಾಳೆ ಬೇರೊಂದು ಯುಗವು ಬರಲು ಸಾಧ್ಯವಿದೆ. ಅದೇ ಶಿಕ್ಷಕರ ಯುಗ. ಶಿಕ್ಷಕರ ಪರಿಸ್ಥಿತಿ, ಅವರ ವೇತನ ಮಟ್ಟ, ಅವರ ಸ್ಥಾನಮಾನ ಮೊದಲಾದ ಸಮಸ್ಯೆಗಳನ್ನು ಸರಕಾರ ಹಾಗೂ ಜನತೆಗಳೆರಡೂ ಇಂದು ಬಿಡಿಸುತ್ತಿರುವ ದೃಷ್ಟಿಯಿಂದ ನಾಳಿನ ಯುಗ "ಶಿಕ್ಷಕರ ಯುಗ"ವಾಗುವುದು ಅಸಂಭವನೀಯವೇನಲ್ಲ.

ಈ ಒಂದೊಂದು ವೃತ್ತಿಗೂ ಒಂದೊಂದು ಯುಗವೆಂದು ಕಲ್ಪಿಸಲು ಜ್ಯೋತಿಷ್ಯದಲ್ಲಿ ಮೂಲ ಕಾರಣಗಳಿವೆ. ಆದರೆ ಅವುಗಳ ವಿವೇಚನೆ ಇಲ್ಲಿ ಅನಗತ್ಯ. ಪ್ರಸ್ತುತಃ ಈ ಪ್ರಕರಣದಲ್ಲಿ ಈ ಭಾಗದಲ್ಲಿ ವೈದ್ಯಕೀಯ ವೃತ್ತಿ ಕೈಕೊಳ್ಳಲು ಜಾತಕ ಎಂತಿರಬೇಕು, ಡಾಕ್ಟರ–ವೈದ್ಯ–ಹಕೀಮರ ಜಾತಕ ಹೇದಿರುತ್ತವೆ, ಕಾರಕ ಗ್ರಹ ಲಗ್ನ ಸ್ಥಾನ ರಾಶ್ಯಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

ವೈದ್ಯಕೀಯ ವೃತ್ತಿಯ ಕಾರಕ ಗ್ರಹ ಯಾವುದೆಂಬುದನ್ನು ತಿಳಿಯುವ ಮೊದಲು ವೈದ್ಯಕೀಯ ವೃತ್ತಿಯಲ್ಲಿಯ ಪ್ರಕಾರಗಳನ್ನು ತಿಳಿದುಕೊಳ್ಳುವುದು ಅವಶ್ಯ. ಏಕೆಂದರೆ ಈ ವೃತ್ತಿಯು ಇಂದು ಕ್ಲಿಷ್ಟವೂ ವಿಸ್ತೃತವೂ ಆಗಿರುವುದಲ್ಲದೆ ವಿವಿಧ ಪ್ರಕಾರದ ಕೆಲಸಗಳಿರುವುದರಿಂದ ಅನೇಕ ಗ್ರಹಗಳು ಕಾರಕವಿರುತ್ತವೆ.

## ವೈದ್ಯಕೀಯ ವೃತ್ತಿಯಲ್ಲಿಯ ಪ್ರಕಾರಗಳು

ಸ್ಥೂಲವಾಗಿ, ವೈದ್ಯಕೀಯ ವೃತ್ತಿಯನ್ನು ಎರಡು ಪ್ರಕಾರಗಳನ್ನಾಗಿ ವಿಂಗಡಿಸಬಹುದು. ೧) ವೈದ್ಯರ (ಡಾಕ್ಟರ) ವೃತ್ತಿ ೨) ಅರೆ-ವೈದ್ಯಕೀಯ ವೃತ್ತಿ (ಪ್ಯಾರಾ ಮೆಡಿಕಲ್) ಅಥವಾ ವೈದ್ಯಕೀಯ ವೃತ್ತಿ ಆಧಾರಿತ ವೃತ್ತಿಗಳು, ಇಲ್ಲವೆ ವೈದ್ಯಕೀಯ ವೃತ್ತಿಯ ಸಹಾಯಕ ಕೆಲಸಗಾರಿಕೆಯ ವೃತ್ತಿ. ಈ ಎರಡೂ ಪ್ರಕಾರದ ವೃತ್ತಿಗಳಿಗೆ ಭಿನ್ನ ಭಿನ್ನ ಗ್ರಹಗಳು ಕಾರಕವಿರುತ್ತವೆ.

## ವಿವಿಧ ಪದ್ಧತಿಯ ವೈದ್ಯರು (ಡಾಕ್ಟರಗಳು)

ವೈದ್ಯಕೀಯ ವೃತ್ತಿಯಲ್ಲಿ ಜನಸಾಮಾನ್ಯರಿಗೆಲ್ಲ ಅತಿ ಪರಿಚಿತರಾದ ಈ ವೈದ್ಯರು (ಡಾಕ್ಟರ) ಗಳಲ್ಲಿ ಪ್ರಮುಖವಾಗಿ ನಾಲ್ಕು ಪ್ರಕಾರದವರಿದ್ದಾರೆ.

೧) ಅಲೋಪಥಿ ಡಾಕ್ಟರರು
೨) ಆಯುರ್ವೇದ ವೈದ್ಯರು
೩) ಹೋಮಿಯೋಪಥಿ ಡಾಕ್ಟರರು
೪) ಯುನಾನಿ ಹಕೀಮರು.

ಇವರುಗಳಲ್ಲದೆ ನಿಸರ್ಗ ಚಿಕಿತ್ಸಾ ತಜ್ಞರು, ಏಕ ಮೂಲಿಕಾ

ಪ್ರಯೋಗದ ವೈದ್ಯರು, ಚುಂಬಕ ಚಿಕಿತ್ಸೆ ಪದ್ಧತಿಯವರು, ಸೂಜಿಚಿಕಿತ್ಸ ಕರು (ಅಕ್ಯುಪಂಕ್ಚರ) ತಜ್ಞರು ಹೀಗೆ ವಿವಿಧ ಪದ್ಧತಿಯ ಡಾಕ್ಟರ ರಿದ್ದಾರೆ.

**ಕಾರಕಗ್ರಹ :** ವಕೀಲಿ ವೃತ್ತಿಗೆ ಶನಿಯು, ಇಂಜನಿಯರಿಂಗ ವೃತ್ತಿಗೆ ಮಂಗಳನು ಕಾರಕರಿರುವಂತೆ, ವೈದ್ಯ (ಡಾಕ್ಟರ) ವೃತ್ತಿಗೆ ಕಾರಕ ಗ್ರಹ ಯಾವುದೆಂಬುದು ಸಮಸ್ಯೆಯಾಗಿದೆ. ಕೆಲ ಜ್ಯೋತಿಷಿಗಳ ಅಭಿಪ್ರಾಯ ದಲ್ಲಿ ಡಾಕ್ಟರ ವೃತ್ತಿಗೆ ಮಂಗಳನೇ ಕಾರಕನೆನ್ನುತ್ತಾರೆ. ಇದಕ್ಕೆ ಅವರು ಕೊಡುವ ಕಾರಣವೆಂದರೆ ವೃತ್ತಿಯಲ್ಲಿ ಶಸ್ತ್ರಕ್ರೀಯೆ ಮಾಡಬೇಕಾಗುತ್ತಿದೆ ಎಂಬುದು.ಮಂಗಳನು ಬಲಾಢ್ಯನಿರದೆ ಯಾರೂ ಶಸ್ತ್ರಕ್ರಿಯೆಯಲ್ಲಿ ತಜ್ಞರಾಗ ಲಾರರು. ಇವರ ಮಾತಿನಲ್ಲಿ ಬಹಳಷ್ಟು ಸತ್ಯಾಂಶವಿದೆ. ಮಂಗಳನು ಬಲಾಢ್ಯನಿರದೆ ಯಾರೂ ಶಸ್ತ್ರ ಚಿಕಿತ್ಸಾ ಕ್ರಿಯೆಯಲ್ಲಿ ನಿಷ್ಣಾತರಾಗಲಾರರು. ಎಂಬುದು ನೂರಕ್ಕೆ ನೂರರಷ್ಟು ಸತ್ಯವಿದೆ. ಆದರೆ ಇದು ಸರ್ಜನರಿಗೆ ಮಾತ್ರ ಅನ್ವಯಿಸುತ್ತಿದೆ ವಿನಹ ಎಲ್ಲ ವೈದ್ಯ– ಡಾಕ್ಟರರುಗಳಿಗೆ ಅನ್ವಯಿ ಸುವದಿಲ್ಲ. ಏಕೆಂದರೆ ಎಲ್ಲ ವೈದ್ಯ–ಡಾಕ್ಟರಗಳಿಗೆ ಶಸ್ತ್ರ ಚಿಕಿತ್ಸಾ ಮಾಡುವ ಪ್ರಸಂಗ ಬರುವುದಿಲ್ಲ. ಅಲ್ಲದೆ, ಎಲ್ಲ ರೋಗಗಳಿಗೂ ಶಸ್ತ್ರ ಚಿಕಿತ್ಸೆಯ ಅವಶ್ಯಕತೆ ಇರುವುದಿಲ್ಲ. ಇದೂ ಅಲ್ಲದೆ ಎಲ್ಲ ಪದ್ಧತಿಯ ಡಾಕ್ಟರರುಗಳಿಗೆ ಶಸ್ತ್ರಚಿಕಿತ್ಸಾ ಜ್ಞಾನದ ಅವಶ್ಯಕತೆ ಇರುವುದಿಲ್ಲ.

ಮತ್ತೆ ಕೆಲ ಜ್ಯೋತಿಷಿಗಳ ಅಭಿಪ್ರಾಯದಲ್ಲಿ ವೈದ್ಯ ಡಾಕ್ಟರ ವೃತ್ತಿಗೆ ಚಂದ್ರ–ಶನಿಯರೇ ಕಾರಕರೆನ್ನುತ್ತಾರೆ. ಇದಕ್ಕೆ ಅವರು ಕೊಡುವ ಕಾರಣಗಳೆಂದರೆ ವನಸ್ಪತಿ ಹಾಗೂ ಔಷಧಿಗೆ (**Medicine**) ಚಂದ್ರನು ಔಷಧೀ ಶಾಸ್ತ್ರಕ್ಕೆ (**Pharmacology**) ಶನಿ–ಚಂದ್ರರು ಕಾರಕರು. ಆದುದ ರಿಂದ ವೈದ್ಯವೃತ್ತಿಗೆ ಚಂದ್ರ–ಶನಿಯರೇ ಕಾರಕರೆನ್ನುತ್ತಾರೆ ಇವರ ಮಾತಿನಲ್ಲಿಯೂ ಬಹಳಷ್ಟು ಸತ್ಯಾಂಶವಿದೆ. ಔಷಧಿಯ ಮೇಲೆ, ಔಷಧಿ ಗುಣ ಧರ್ಮದ ಮೇಲೆ ಚಂದ್ರ–ಶನಿಯರೇನೋ ಕಾರಕರಿರುತ್ತಾರೆ. ಚಂದ್ರ– ಶನಿಯರು ಬಲಾಢ್ಯರಿರುವವರು ಉತ್ತಮ ಕಂಪೌಂಡರರು ಫಾರ್ಮಾಕಾಲಾ

ಜಿಸ್ಟರು, ಔಷಧ ಉತ್ಪಾದಕರು, ಮಾರಾಟಗಾರರು (ಡ್ರಗಿಸ್ಟ – ಕೆಮಿಸ್ಟರು) ಏನಹ ನಿಷ್ಣಾತ ಡಾಕ್ಟರರಾಗರು. ನಿಷ್ಣಾತ ಡಾಕ್ಟರರ ಮುಖ್ಯ ಗುಣಧರ್ಮವೆಂದರೆ ರೋಗಿಗೆ ತಗಲಿದ ರೋಗವನ್ನು ಕಂಡು ಹಿಡಿದು ಔಷಧಿಃ ಸಂಯೋಜನೆ ಮಾಡುವದು. ಇದು ಗುರುವು ಬಲಾಢ್ಯ ನಿರದೆ ಸಾಧಿಸದು.

ಮತ್ತೆ ಕೆಲ ಜ್ಯೋತಿಷಗಳ ಅಭಿಪ್ರಾಯದಲ್ಲಿ ವೈದ್ಯಕೀಯ ವೃತ್ತಿಗೆ ರವಿಯೇ ಕಾರಕನು. ಇದಕ್ಕೆ ಅವರು ಕೊಡುವ ಕಾರಣವೆಂದರೆ: ಆಧುನಿಕ ಶಿಕ್ಷಣ ಕ್ರಮದಂತೆ ವೈದ್ಯಕೀಯ ಶಿಕ್ಷಣ ಬಹಳ ವೆಚ್ಚದ್ದಾಗಿದೆಯಲ್ಲದೆ, ಈ ಕೋರ್ಸಿಗೆ ಪ್ರವೇಶ ಸಿಗುವುದೇ ದುರ್ಲಭ; ಅಲ್ಲದೆ ವೈದ್ಯಕೀಯ ಕೋರ್ಸಿನ ಪ್ರಮುಖ ವಿಷಯಗಳಾದ ಜೀವಶಾಸ್ತ್ರ, ಶರೀರ ಶಾಸ್ತ್ರ ಹಾಗೂ ಜೀವ ಕಾರ್ಯ ವಿಜ್ಞಾನ ಈ ಎಲ್ಲ ವಿಷಯಗಳಿಗೆ ರವಿಯು ಕಾರಕನಿರುತ್ತಾನೆ. ಜಾತಕದಲ್ಲಿ ರವಿಯು ಬಲಾಢ್ಯನಿದ್ದರೆ ಈ ಕೋರ್ಸಿಗೆ ಪ್ರವೇಶ ಸುಲಭವಾಗಿ ಸಿಗುವುದಲ್ಲದೆ ಸಲೀಸಾಗಿ ಆ ಕೋರ್ಸನ್ನು ಪೂರ್ತಿಗೊಳಿಸುತ್ತಾನೆ. ಇದೆಲ್ಲ ಅವರ ಅಭಿಪ್ರಾಯ.

ಇನ್ನು ನಮ್ಮ ಅಭಿಪ್ರಾಯದಲ್ಲಿ – ವೈದ್ಯ ವೃತ್ತಿಗೆ ರವಿ. ಗುರು, ಚಂದ್ರ, ಶನಿ, ಮಂಗಳ ಈ ಗ್ರಹಗಳು ಹೆಚ್ಚು ಪೋಷಕವಿರುತ್ತವೆ. ಈ ಐದು ಗ್ರಹಗಳೇ ಅದೇಕೆ ಕಾರಕವಿರುತ್ತವೆ ಎಂಬುದನ್ನು ತಿಳಿಯುವ ಮೊದಲು ಜ್ಞಾನ ಗಳಿಸುವ ವೈವಿಧ್ಯವನ್ನು ತಿಳಿಯುವದು ಅವಶ್ಯ.

**ಜ್ಞಾನದಲ್ಲಿಯ ಪ್ರಕಾರಗಳು :** ಜ್ಞಾನ ಪಡೆಯುವುದರಲ್ಲಿ ಮೂರು ಪ್ರಕಾರಗಳಿವೆ :

೧) ಪ್ರತ್ಯಕ್ಷ

೨) ಅನುಮಾನ

೩) ಆಪ್ತವಾಕ್ಯ.

**ಪ್ರತ್ಯಕ್ಷ:** ೧) ಪ್ರತ್ಯಕ್ಷವೆಂದರೆ ಯಾವುದೊಂದು ವಿಷಯದ ಜ್ಞಾನ ಪಡೆಯಲು ಪ್ರಯೋಗ ಶಾಲೆಯಲ್ಲಿ ಪ್ರಯೋಗ ಮಾಡಿ, ಪ್ರತ್ಯಕ್ಷ ಕಣ್ಣಿನಿಂದ ತಿಳಿದುಕೊಂಡು, ಮನವರಿಕೆ ಮಾಡಿಕೊಂಡು ಜ್ಞಾನ ಪಡೆಯುವ ರೀತಿಗೆ ಪ್ರತ್ಯಕ್ಷ ಜ್ಞಾನವೆನ್ನುತ್ತಾರೆ. ವೈದ್ಯಕೀಯ ಕೋರ್ಸುಗಳಾದ ಅಲೋಪಥಿ ಶಿಕ್ಷಣಕ್ಕೆ ಪ್ರತ್ಯಕ್ಷ ರೀತಿಯಿಂದ ಜ್ಞಾನ ಪಡೆಯಬೇಕಾಗುತ್ತದೆ. ಪ್ರತ್ಯಕ್ಷ ರೀತಿಯ ವಿಧಾನಕ್ಕೆ ರವಿ, ಮಂಗಳರ ಕಾರಕರು. ಆದ್ದರಿಂದ ಅಲೋಪತಿ ಡಾಕ್ಟರ ವೃತ್ತಿಗೆ ರವಿ-ಮಂಗಳರು ಕಾರಕರು.

ಇನ್ನು, ಅನುಮಾನ ರೀತಿಯಿಂದ ಜ್ಞಾನ ಪಡೆಯುವ ರೀತಿಯೆಂದರೆ ಯಾವುದೊಂದು ವಿಷಯವನ್ನು ಪ್ರತ್ಯಕ್ಷ ಪ್ರಯೋಗ ಮಾಡದೆ ಕೇವಲ ಊಹೆ — ತರ್ಕ, ಹಿಂದಿನ ಅನುಭವಗಳ ಆಧಾರದ ಮೇಲಿಂದ ಜ್ಞಾನ ಪಡೆಯುವಿಕೆ. ಉದಾಹರಣೆಗೆ "ಯತ್ರ ಯತ್ರ ಧೂಮಃ ತತ್ರ ತತ್ರ ವಹ್ನಿಃ" ಅಂದರೆ ಹೊಗೆ ಇದ್ದಲ್ಲಿ ಬೆಂಕಿ ಇರುತ್ತದೆ. ಇಲ್ಲಿ ನಾವು ಬೆಂಕಿಯನ್ನು ಪ್ರತ್ಯಕ್ಷ ನೋಡದೆ ಹೊಗೆಯ ಆಧಾರದ ಮೇಲಿಂದ ಬೆಂಕಿಯ ಅಸ್ತಿತ್ವವನ್ನು ನಿರ್ಧರಿಸುತ್ತೇವೆ. ಅನುಮಾನ ರೀತಿಯಿಂದ ಜ್ಞಾನ ಪಡೆಯುವ ವಿಧಾನಕ್ಕೆ ಶನಿಯು ಕಾರಕನು; ಶನಿಯ ತರುವಾಯ ಗುರುವು ಕಾರಕನು. ಏಕೆಂದರೆ ತರ್ಕ ಶಾಸ್ತ್ರಕ್ಕೆ ಗುರುವು ಕಾರಕನು. ಹೋಮಿಯೋಪಥಿ ಶಿಕ್ಷಣಕ್ಕೆ ಊಹೆ-ತರ್ಕಗಳೇ ಮುಖ್ಯವಿರುತ್ತವೆ. ಏಕೆಂದರೆ ಕೇವಲ ಲಕ್ಷಣಗಳ ಮೇಲಿಂದ ನಿದಾನ ಮಾಡಿ ಚಿಕಿತ್ಸೆ ಕೊಡಬೇಕಾಗುತ್ತದೆ. ಆದ್ದರಿಂದ ಹೋಮಿಯೋಪಥಿ ಡಾಕ್ಟರ ವೃತ್ತಿಗೆ ಶನಿ-ಗುರುಗಳೇ ಕಾರಕರಿರುತ್ತಾರೆ.

ಕೊನೆಯದಾಗಿ, ಕೇವಲ ಆಪ್ತವಾಕ್ಯದ ಮೇಲಿಂದಾಗಲಿ ಗ್ರಂಥೋಕ್ತಿಯಿಂದಾಗಲಿ ಜ್ಞಾನಪಡೆಯುವ ರೀತಿಗೆ ಆಪ್ತವಾಕ್ಯವೆನ್ನಬಹುದು. ಉದಾಹರಣೆಗೆ — ವಿಷ ತಿಂದರೆ ಸಾಯುವನು; ಅಗ್ನಿ ಸ್ಪರ್ಶ ಮಾಡಿದರೆ ಸುಡುವುದು. ಇದಕ್ಕಾಗಿ ಪ್ರತ್ಯಕ್ಷ ಪ್ರಯೋಗವಾಗಲಿ ಅನುಮಾನವಾಗಲಿ ಅವಶ್ಯವಿಲ್ಲ. ಇದನ್ನು ನಾವು ಪ್ರತ್ಯಕ್ಷ ನೋಡದೆ ಜ್ಞಾನ ಪಡೆಯಬಹುದು. ಆಯುರ್ವೇದ ಹಾಗೂ ಯುನಾನಿ ವೈದ್ಯಕೀಯ ಶಿಕ್ಷಣ ಪದ್ಧತಿಯಲ್ಲಿ

ಆಪ್ತವಾಕ್ಯವೇ ಮಹತ್ವದ್ದು. ಆಪ್ತವಾಕ್ಯದ ಕಾರಕ ಗ್ರಹವೆಂದರೆ ಗುರುವು ಆದ್ದರಿಂದ ಆಯುರ್ವೇದ ವೈದ್ಯ ವೃತ್ತಿಗೆ ಗುರುವೇ ಕಾರಕನು.

ಇವರಂತೆ ಯುನಾನಿ ವೈದ್ಯವೃತ್ತಿಗೂ ಗುರುವೇ ಕಾರಕನಿರುತ್ತಾನೆ. ಏಕೆಂದರೆ ಯುನಾನಿ ಶಿಕ್ಷಣ ಪದ್ಧತಿಯು ಕೂಡ ಆಯುರ್ವೇದ ಶಿಕ್ಷಣ ಪದ್ಧತಿಯಂತೆ ಆಪ್ತವಾಕ್ಯದ ಮೇಲೆಯೇ ಅವಲಂಬಿಸಿರುತ್ತದೆಯಲ್ಲದೆ ಔಷಧ ತಯಾರಿಸುವ ರೀತಿ, ಕೊಡುವ ರೀತಿ, ರೋಗ ನಿದಾನ, ಚಿಕಿತ್ಸೆ ಆಯುರ್ವೇದ ಪದ್ಧತಿಯಂತೆಯೇ ಇರುತ್ತವೆ.

ಏಕ ಮೂಲಿಕಾ ಪ್ರಯೋಗದ ವೈದ್ಯ ವೃತ್ತಿಗೂ ಕೂಡ ಗುರುವೇ ಕಾರಕನು. ಏಕೆಂದರೆ ಈ ಪ್ರಕಾರದ ಹಲವರು ಆನುವಂಶಿಕದ ವೈದ್ಯರಾಗಿದ್ದು ಅವರಿಗೆ ಆಪ್ತವಾಕ್ಯವೇ ಮುಖ್ಯವಿರುವದು. ಒಂದೊಂದೇ ಗಿಡ ಮೂಲಿಕೆಗಳಿಂದ ಒಂದೊಂದೆ ರೋಗವನ್ನು ಗುಣಮುಖ ಮಾಡುವರು. ಇಂಥ ವೈದ್ಯರು ಎಲ್ಲ ಪ್ರಕಾರದ ರೋಗಗಳಿಗೆ ಔಷಧ ಕೊಡುವುದಿಲ್ಲ. ತಲೆ–ತಲಾಂತರದಿಂದ ಬಂದಂತೆ ಕೆಲವೊಂದು ರೋಗಕ್ಕೆ ಮಾತ್ರ ಔಷಧ ಕೊಡುತ್ತಾರೆ.

ಉದಾಹರಣೆಗೆ—ಅರ್ಧಾಂಗವಾಯುವಿಗೆ ಮಾತ್ರ ಎಣ್ಣೆ ಕೊಡುವ ವೈದ್ಯರಿದ್ದಾರೆ. ಕಾಮಣಿಗೆ ಬೇರು ಅಥವಾ ಬಳ್ಳಿಯನ್ನು ಕಟ್ಟಿ ಔಷಧ ಕೊಡುವವರಿದ್ದಾರೆ. ಇನ್ನು ಕೆಲವರು ಎಲವು ಮುರಿದರೆ ತಮ್ಮದೇ ಆದ ಸೊಪ್ಪುಕಟ್ಟಿ ಗುಣಮುಖ ಮಾಡುವರು. ಹೀಗೆ ಕೆಲವರು ಒಂದೊಂದೇ ರೋಗಕ್ಕೆ ಔಷಧ ಕೊಡುವರು. ಈ ಪ್ರಕಾರದ ವೈದ್ಯವೃತ್ತಿಗೆ ಗುರುವೇ ಕಾರಕನು.

ಇದರಂತೆ ಚುಂಬಕ ಚಿಕಿತ್ಸಾ ಪದ್ಧತಿಯ ವೈದ್ಯವೃತ್ತಿಯ ಕಾರಕ ಗ್ರಹಗಳೆಂದರೆ ರವಿ–ಮಂಗಳರು. ಏಕೆಂದರೆ ಚುಂಬಕ ಚಿಕಿತ್ಸಾ ಪದ್ಧತಿಯ ಶಿಕ್ಷಣಕ್ಕೆ ಪ್ರತ್ಯಕ್ಷ ರೀತಿಯಿಂದ ಜ್ಞಾನ ಪಡೆಯಬೇಕಾಗುತ್ತದೆ. ಪ್ರತ್ಯಕ್ಷ ರೀತಿಯಿಂದ ಜ್ಞಾನ ಪಡೆಯುವ ಶಿಕ್ಷಣಕ್ಕೆ ರವಿ–ಮಂಗಳರು ಕಾರಕರಿರು

ತ್ಕಾರ ಇದಲ್ಲದೆ ಚುಂಬಕಚಿಕಿತ್ಸೆಯೆಂದರೆ ಒಂದು ಪ್ರಕಾರದ ಆಘಾತ ಚಿಕಿತ್ಸೆ ಇದ್ದಂತೆ. ಶಾಕ್ ಟ್ರೀಟಮೆಂಟಿಗೆ ಮಂಗಳನು ಕಾರಕನು. ಆದ್ದರಿಂದ ಚುಂಬಕ ಚಿಕಿತ್ಸಾ ಪದ್ಧತಿಯು ವೈದ್ಯವೃತ್ತಿಗೆ ರವಿ-ಮಂಗಳರು ಕಾರಕರು.

ಇದರಂತೆಯೆ (ಅಕ್ಯುಪಂಕ್ಚರ್) ಸೂಜಿ ಚಿಕಿತ್ಸಾ ಪದ್ಧತಿಯ ವೈದ್ಯ ವೃತ್ತಿಗೆ ಮಂಗಳನೇ ಕಾರಕನು ಏಕೆಂದರೆ ಚುಚ್ಚುವುದು, ಕೊಯ್ಯುವುದು ಮೊದಲಾದ ಕ್ರಿಯೆಗಳಿಗೆ ಮಂಗಳನು ಕಾರಕನು. ಆದ್ದರಿಂದ ಸೂಜಿ ಚಿಕಿತ್ಸಾ ಪದ್ಧತಿಯ ವೈದ್ಯರಿಗೆ ಮಂಗಳನು ಕಾರಕಾರನು.

ಕೊನೆಯದಾಗಿ, ನಿಸರ್ಗ ಚಿಕಿತ್ಸಾ ಪದ್ಧತಿಯ ವೈದ್ಯವೃತ್ತಿಗೆ ರವಿ-ಚಂದ್ರರೇ ಕಾರಕರು. ಏಕೆಂದರೆ ನಿಸರ್ಗದ ಮೇಲೆ ಆಧಿಪತ್ಯವಿರುವ ರವಿ-ಚಂದ್ರರೇ ಈ ವೃತ್ತಿಗೆ ಕಾರಕರು.

**ಕಾರಕ ಸ್ಥಾನ-** ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಡಾಕ್ಟರ, ವೈದ್ಯ-ಹಕೀಮ ಮೊದಲಾದ ಯಾವುದೇ ಪ್ರಕಾರದ ವೈದ್ಯ ಡಾಕ್ಟರ ವೃತ್ತಿಯ ಸ್ಥಾನವೆಂದರೆ ಷಷ್ಠಸ್ಥಾನವು ಷಷ್ಠ ಸ್ಥಾನ ಷಷ್ಠೇಶ ಬಲಾಢ್ಯ ರಿರದೆ ಯಾರೂ ವೈದ್ಯಕೀಯ ವೃತ್ತಿಯಲ್ಲಿ ಯಶಸ್ಸು ಗಳಿಸಲಾರರು. ಇದ ರೊಂದಿಗೆ ಭಿನ್ನಭಿನ್ನ ಪದ್ಧತಿಯ ಡಾಕ್ಟರಗಳಿಗೆ ಷಷ್ಠ ಸ್ಥಾನದೊಂದಿಗೆ ಇತರ ಸ್ಥಾನಗಳನ್ನು ಪರಿಶೀಲಿಸಬೇಕಾಗುತ್ತದೆ.

ಪ್ರತ್ಯಕ್ಷ ರೀತಿಯಿಂದ ಜ್ಞಾನ ಪಡೆಯುವ ಅಲೋಪತಿ ಡಾಕ್ಟರರುಗಳಿಗೆ ಷಷ್ಠದೊಂದಿಗೆ ತೃತೀಯ ಸ್ಥಾನವನ್ನು ಲಗ್ನ (ತನು) ಸ್ಥಾನವನ್ನು ಪರಿಶೀಲಿಸಬೇಕಾಗುತ್ತದೆ. ಅನುಮಾನ ಹಾಗೂ ಆಪ್ತವಾಕ್ಯ ರೀತಿಯಿಂದ ಜ್ಞಾನ ಪಡೆದ ಆಯುರ್ವೇದ, ಹೋಮಿಯೋಪತಿ ವೈದ್ಯರುಗಳಿಗೆ ಷಷ್ಠದೊಂದಿಗೆ ಪಂಚಮ ಸ್ಥಾನವೂ ಕಾರಕವಿರುತ್ತದೆ.

**ಲಗ್ನ :** ಸಾಮಾನ್ಯ ವೈದ್ಯ–ಡಾಕ್ಟರರು (ಜನರಲ್ಲ ಪ್ರ್ಯಾಕ್ಟಿಶನರ್ಸ) ಗಳಿಗೆ ನಿರ್ದಿಷ್ಟ ಲಗ್ನಗಳೇ ಕಾರಕವಿರುತ್ತವೆ. ಎಂಬ ನಿಯಮವಿಲ್ಲ ಆದರೆ ವೈದ್ಯ ಸಲಹೆಗಾರರು, ಸರ್ಜನರು, ವಿವಿಧ ರೋಗಗಳ ತಜ್ಞ ಡಾಕ್ಟರರು ನಿರ್ದಿಷ್ಟ ಲಗ್ನದವರೇ ಇರುತ್ತಾರೆ. ಇವುಗಳ ವಿವರಣೆ ಮುಂದೆ ವಿವರಿಸಲಾಗಿದೆ.

ಆದಾಗ್ಯೂ ಮೇಷ, ವೃಷಭ, ಕರ್ಕ, ಸಿಂಹ, ವೃಶ್ಚಿಕ, ಧನು ಈ ಲಗ್ನಗಳು ಪ್ರತ್ಯಕ್ಷ ರೀತಿಯಿಂದ ಜ್ಞಾನ ಪಡೆದ ಅಲೋಪಥಿ ಮೊದಲಾದ ಡಾಕ್ಟರುಗಳಿಗೆ ಕಾರಕವಿರುತ್ತವೆ

ಮೇಷ, ವೃಷಭ, ಮಿಥುನ, ಸಿಂಹ, ತುಲಾ, ವೃಶ್ಚಿಕ, ಮಕರ, ಕುಂಭ, ಈ ಲಗ್ನದವರು ಅನುಮಾನ ರೀತಿಯಿಂದ ಜ್ಞಾನ ಪಡೆಯುವ ಹೋಮಿಯೋಪತಿ ಡಾಕ್ಟರರುಗಳಿಗೆ ಕಾರಕ ವಿರುತ್ತವೆ.

ಮೇಷ ಮಿಥುನ, ಕರ್ಕ, ಸಿಂಹ, ಕನ್ಯಾ, ವೃಶ್ಚಿಕ ಧನು, ಮೀನ ಈ ಲಗ್ನದವರು ಆಪ್ತವಾಕ್ಯದ ಮೇಲಿಂದ ಜ್ಞಾನ ಪಡೆದು ವೃತ್ತಿ ಕೈಕೊಳ್ಳುವ ಆಯುರ್ವೇದ ವೈದ್ಯರಿಗೆ ಕಾರಕವಿರುತ್ತವೆ.

**ರಾಶಿ :** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಸಾಮಾನ್ಯ ವೈದ್ಯ ಡಾಕ್ಟರರುಗಳು ನಿರ್ದಿಷ್ಟ ರಾಶಿಯವರೆ ಇರುತ್ತಾರೆ ಎಂಬ ನಿಯಮವಿಲ್ಲ.

## ವೈದ್ಯ-ಡಾಕ್ಟರುಗಳಲ್ಲಿ ಪ್ರಕಾರಗಳು

ಸಾಮಾನ್ಯವಾಗಿ ವೈದ್ಯ-ಡಾಕ್ಟರರಗಳಲ್ಲಿ ಎರಡು ಪ್ರಕಾರ ೧) ಸರ್ಜನ್ ೨) ಫಿಜೀಶಿಯನ್ಸ್. ಈ ಎರಡೂ ಪ್ರಕಾರದ ಡಾಕ್ಟರರಿಗೆ ಕಾರಕ ಗ್ರಹ ಲಗ್ನ ಸ್ಥಾನಾದಿಗಳು ವಿಭಿನ್ನವಿದ್ದು ಅವುಗಳ ವಿಷಯವಾಗಿ ಇಲ್ಲಿ ವಿವೇಚಿಸಲಾಗಿದೆ.

೧) **ಸರ್ಜನರು :**

**ಕಾರಕಗ್ರಹ :** ಸರ್ಜನರ ಕಾರಕ ಗ್ರಹವೆಂದರೆ ಮಂಗಳನು. ಮಂಗಳನು ಜಾತಕದಲ್ಲಿ ಬಲಾಢ್ಯನಿರದೆ ಯಾರೂ ಯಶಸ್ವಿ ಸರ್ಜನ್‌ರಾಗ ಲಾರರು. ಏಕೆಂದರೆ ಶಸ್ತ್ರ ಚಿಕಿತ್ಸೆ ಮಾಡುವುದೆಂದರೆ ಹೊಸದಾಗಿ ಪ್ರತ್ಯೇಕ ವಾಗಿ ರಕ್ತ ಮಾಂಸಗಳನ್ನು ನಿರ್ಮಿಸುವುದು, ಶರೀರದ ಅವಯವಗಳನ್ನು ದುರಸ್ತ ಮಾಡುವುದು, ಶರೀರದ ಭಾಗಗಳನ್ನು ಕೊಯ್ಯುವುದು, ಜೋಡಿಸು ವುದು, ಕಟ್ಟಿ ಹಾಗೂ ಹೊಲಸು ಮಾಂಸ ರಕ್ತಗಳನ್ನು ಬೇರ್ಪಡಿಸುವುದು, ಇವೇ ಪ್ರಮುಖ ಕೆಲಸಗಳಿರುತ್ತವೆ. ಮಾಂಸ ಹಾಗೂ ರಕ್ತದ ಮೇಲೆ ಮಂಗಳನ ಪ್ರಭುತ್ವವಿರುತ್ತದೆ. ಅಲ್ಲದೆ ಕೊಯ್ಯುವಿಕೆ, ಚುಚ್ಚುವಿಕೆ ಮೊದ ಲಾದ ಕಾರ್ಯಗಳು ಮಂಗಳನ ಗುಣಧರ್ಮದವು. ಆದ್ದರಿಂದ ಮಂಗಳನು ಬಲಾಢ್ಯನಿರದೇ ಯಾರೂ ಯಶಸ್ವಿ ಸರ್ಜನ್‌ರಾಗಲಾರರು. ಬಲಾಢ್ಯನೆಂದರೆ ಸ್ಥಾನ ಬಲದವನೂ ರಾಶಿ ಬಲದವನೂ ಯೋಗಕಾರಕನೂ ಇರಬೇಕು.

ಮಂಗಳನ ತರುವಾಯ ರವಿಯು ಕೂಡ ಸರ್ಜನ್ ವೃತ್ತಿಗೆ ಕಾರಕನು. ಏಕೆಂದರೆ ಸರ್ಜನ್‌ರಿಗೆ ಶರೀರ ಶಾಸ್ತ್ರ (ಅಂಗರಚನಾಶಾಸ್ತ್ರ), ಜೀವಕಾರ್ಯ ವಿಜ್ಞಾನ ಈ ಎರಡೂ ವಿಷಯಗಳಲ್ಲಿ ಪ್ರಭುತ್ವವಿರಬೇಕಾಗುತ್ತದೆ. ಈ ಎರಡೂ ವಿಷಯಗಳಲ್ಲಿ ತಜ್ಞತೆ ಪಡೆಯಲು ರವಿಯು ಬಲಾಢ್ಯನಿರಬೇಕಾಗು ತ್ತದೆ. ಆದರೆ ಇಲ್ಲಿ ಮಂಗಳನು ರಾಶಿ ಬಲದವನೂ ಸ್ಥಾನ ಬಲದವನೂ ಯೋಗಕಾರಕನೂ ಇದ್ದರೆ, ರವಿಯು ಕೇವಲ ರಾಶಿಬಲದವನಿದ್ದರೆ ಸಾಕು.

**ಲಗ್ನ :** ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ಕರ್ಕ, ಸಿಂಹ, ವೃಶ್ಚಿಕ, ಧನು ಈ ಲಗ್ನಗಳು ಸರ್ಜನ್ ವೃತ್ತಿಗೆ ಕಾರಕವಾಗಿವೆ. ಇವುಗಳ ನಂತರ ವೃಷಭ, ಮಕರ ಲಗ್ನಗಳು.

**ಸ್ಥಾನ :** ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ವೈದ್ಯ ವೃತ್ತಿಯ ಸ್ಥಾನವಾದ ಷಷ್ಠ ಸ್ಥಾನವಂತೂ ಬಲಾಢ್ಯವಿರಬೇಕು. ಅಲ್ಲದೆ ಸರ್ಜನ್ ವೃತ್ತಿಯ ಸ್ಥಾನವಾದ ಲಗ್ನ (ತನು) ಹಾಗೂ ತೃತೀಯ ಸ್ಥಾನಗಳು ಸ್ಥಾನಾ

ಧೀಶರು ಬಲಾಢ್ಯರಿರಬೇಕಾಗುತ್ತದೆ. ಇದಲ್ಲದೆ ಚತುರ್ಥ ಸ್ಥಾನವನ್ನೂ ಪರಿಶೀಲಿಸಬೇಕಾಗುತ್ತದೆ. ಏಕೆಂದರೆ ತಮ್ಮದೆ ಆದ ಸ್ವತಂತ್ರ ನರ್ಸಿಂಗ ಹೋಮ, ಪ್ರಸೂತಿ ಗೃಹ ಮೊದಲಾದ ದೊಡ್ಡ ಆಸ್ಪತ್ರೆಗಳನ್ನು ಪ್ರಾರಂಭಿಸುವ ವೈದ್ಯ-ಸರ್ಜನ್‌ರಿಗೆ ಚತುರ್ಥ ಸ್ಥಾನ, ಚತುರ್ಥೇಶ ಬಲಾಢ್ಯರಿರಬೇಕಾಗುತ್ತದೆ.

**ರಾಶಿ :** ರಾಶಿ ದೃಷ್ಟಿಯಿಂದ ನೋಡಿದರೆ ಮೇಷ, ಸಿಂಹ, ಧನು, ಈ ರಾಶಿಯವರು ಯಶಸ್ವಿ ಸರ್ಜನ್‌ರಾಗುತ್ತಾರೆ. ಇವರ ನಂತರ ವೃಶ್ಚಿಕ, ಮಕರ, ಮಿಥುನ, ತುಲಾ, ಕುಂಭ ಈ ರಾಶಿಯವರು ಅನುಕ್ರಮವಾಗಿ ಸರ್ಜನ್ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

**ಯೋಗ :** ಸರ್ಜನ್ ವೃತ್ತಿಯಲ್ಲಿ ಯಶಸ್ವಿಯಾಗಲು ಎರಡು ಸಂಗತಿಗಳು ಮಹತ್ವದವಿರುತ್ತವೆ.

೧) ಗ್ರಹಗಳು ಹೆಚ್ಚಾಗಿ ಪುರುಷ ರಾಶಿಯಲ್ಲಿರಬೇಕು; ಅದರಲ್ಲಿಯೂ ಚಂದ್ರನು ಪುರುಷರಾಶಿಯಲ್ಲಿರಲೇಬೇಕು. ಏಕೆಂದರೆ ರಕ್ತಸ್ರಾವವನ್ನು ಕಂಡರೆ ಮೂರ್ಛೆ ಹೋಗುವ ವ್ಯಕ್ತಿಗಳಿಂದ ಶಸ್ತ್ರ ಕ್ರಿಯೆ ಯಶಸ್ವಿಯಾಗಲಾರದು. ಚಂದ್ರನು ಪುರುಷರಾಶಿಯಲ್ಲಿದ್ದ ವ್ಯಕ್ತಿಗಳು ದೃಢ ಮನಸ್ಸಿನವರೂ ನಿರ್ಭೀತರೂ ಇರುತ್ತಾರೆ.

೨) ರವಿ, ಮಂಗಳರು ಅಗ್ನಿರಾಶಿಯವರಿರಬೇಕು. ಇಲ್ಲವೆ ಉಚ್ಚ ಗೃಹ ಇಲ್ಲವೆ ಮಿತ್ರ ಕ್ಷೇತ್ರದಲ್ಲಿಯಾದರೂ ಇರಬೇಕು.

**೨) ಫಿಜೀಸಿಯನ್ಸ್, ವೈದ್ಯ (ಡಾಕ್ಟರುಗಳು) :**

ಫಿಜೀಸಿಯನ್‌ರಲ್ಲಿ ಮೂರು ಪ್ರಕಾರದವರಿದ್ದಾರೆ.

೧) ಸಾಮಾನ್ಯ ವೈದ್ಯರು (ಜನರಲ್ ಪ್ರ್ಯಾಕ್ಟಿಶನರ್ಸ)

೨) ಸಲಹೆಗಾರಿಕೆಯ ವೈದ್ಯರು (ಕನ್ಸಲ್ಟಂಟ್ಸ)

೩) ವಿವಿಧ ರೋಗಗಳ ತಜ್ಞ ಡಾಕ್ಟರರು.

ಸಾಮಾನ್ಯ ವೈದ್ಯರ ವಿಷಯವಾಗಿ ಇದೇ ಪುಸ್ತಕದ ಇದೇ ಪ್ರಕರಣದ ವಿವಿಧ ಪದ್ಧತಿಯ ವೈದ್ಯರ ವಿಷಯವಾಗಿ ೫೩ ನೇ ಪುಟದಿಂದ ೫೯ ನೇ ಪುಟದವರೆಗೆ ವಿವರಿಸಲಾಗಿದೆ.

**೩) ಸಲಹೆಗಾರಿಕೆಯ ವೈದ್ಯರು :**

ಸಲಹೆಗಾರಿಕೆ ವೃತ್ತಿಯ ವೈದ್ಯರಲ್ಲಿ ಸಾಮಾನ್ಯ ವೈದ್ಯರಿಗಿರುವ ಕಾರಕ ಗ್ರಹ ಲಗ್ನ ಸ್ಥಾನಾದಿಗಳಲ್ಲದೆ ಕೆಲ ವಿಶಿಷ್ಟ ಯೋಗಗಳು ಈ ಕೆಳಗಿನಂತಿರುತ್ತವೆ.

೧) ಯಾವದೇ ಸಲಹೆಗಾರಿಕೆ ವೃತ್ತಿಯಲ್ಲಿ ಯಶಸ್ಸು ಪಡೆಯಲು ಗುರುವು ಬಲಾಢ್ಯನಿರಬೇಕಾಗುತ್ತದೆ. ಗುರುವಿನ ತರುವಾಯ ಬುಧನನ್ನು ಪರಿಶೀಲಿಸಬೇಕು. ಬಲಾಢ್ಯನೆಂದರೆ ರಾಶಿ–ಸ್ಥಾನ ಬಲ, ಯೋಗಕಾರಕರಿರಬೇಕು.

೨) ಪಂಚಮೇಶ, ಪಂಚಮ ಸ್ಥಾನ ಬಲಾಢ್ಯರಿರದೆ ಯಾರೂ ಯಾವುದೇ ಸಲಹೆಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾದರು.

೩) ಮೇಷ, ಮಿಥುನ, ಸಿಂಹ, ವೃಶ್ಚಿಕ, ಧನು, ಮೀನ ಈ ಲಗ್ನಗಳು, ತದನಂತರ ವೃಷಭ, ಕನ್ಯಾ ಲಗ್ನಗಳು ಸಲಹೆಗಾರಿಕೆ ವೃತ್ತಿಗೆ ಕಾರಕ ಲಗ್ನಗಳು.

೪) ವಾಯು ರಾಶಿಗಳು ಸಲಹೆಗಾರಿಕೆ ವೃತ್ತಿಗೆ ಪೂರಕ ರಾಶಿಗಳು. ಆದ್ದರಿಂದ ಬುಧ–ಗುರುಗಳು ವಾಯು ರಾಶಿಯವರಿರಬೇಕು. ಮತ್ತು ಚಂದ್ರನು ಮಿಥುನ, ತುಲಾ, ಕುಂಭ, ಧನು, ಮೀನ ಕರ್ಕ ಈ ರಾಶಿಯಲ್ಲಿರಬೇಕು. ಅಂದರೆ ಈ ರಾಶಿಯವರಿರಬೇಕು.

**೪) ವಿವಿಧ ರೋಗಗಳ ತಜ್ಞ ಡಾಕ್ಟರರು :**

ವಿಜ್ಞಾನ ಬೆಳೆದಂತೆ ವೃತ್ತಿಯಲ್ಲಿ ವಿಶೇಷ ತಜ್ಞರ (ಸ್ಪೆಶಿಯಾಲಿಸ್ಟರ) ಸಂಖ್ಯೆ ಹೆಚ್ಚಾಗುತ್ತದೆ. ಇದು ವೈದ್ಯಕೀಯ ವೃತ್ತಿಯಲ್ಲಿ ತೀರ ಹೆಚ್ಚಾಗಿದೆ, ಈ

ಹಿಂದೆ ಕುಟುಂಬ ವೈದ್ಯರೊಬ್ಬರೇ ಎಲ್ಲ ರೋಗಗಳಿಗೆ ಚಿಕಿತ್ಸೆ ಮಾಡುತ್ತಿದ್ದರು. ಇಂದು ಕಾಲ ಬದಲಾಗಿದೆ. ದೇಹದ ವಿವಿಧ ಅವಯವಗಳಿಗೆ ತಗಲಿದ ರೋಗಗಳನ್ನು ಗುಣ ಮಾಡಲು ಆಯಾ ಅವಯವಗಳ ಅವ್ಯವಸ್ಥೆಯನ್ನು ಸರಿಪಡಿಸಲು ವಿವಿಧ ರೋಗಗಳ ತಜ್ಞರಿದ್ದಾರೆ, ಅರ್ಥಾತ್ ವಿವಿಧ ಅವಯವಗಳಿಗೆ ತಗಲಿದ ವಿಶಿಷ್ಟ ರೋಗದ ತಜ್ಞರಿದ್ದಾರೆ. ಆಯಾ ರೋಗಗಳ ತಜ್ಞ ಡಾಕ್ಟರರ ಕಾರಕ ಗ್ರಹ-ಲಗ್ನ-ಸ್ಥಾನಾದಿಗಳು ಯಾವವು ಎಂಬದನ್ನು ಪರಿಶೀಲಿಸುವಾ.

ವಿವಿಧ ಅವಯವಗಳಿಗೆ ತಗಲಿದ ವಿವಿಧ ರೋಗಗಳ ತಜ್ಞರು ಅನೇಕರಿದ್ದಾರೆ. ಇಲ್ಲಿ ಮುಖ್ಯ ೭ ರೋಗಗಳ ತಜ್ಞರ ವಿಷಯವಾಗಿ ಮಾತ್ರ ವಿವರಿಸಲಾಗಿದೆ. ಅವರು ಯಾರೆಂದರೆ:

೧) ದಂತವೈದ್ಯರು
೨) ನೇತ್ರ ತಜ್ಞರು
೩) ಪ್ರಸೂತಿ ತಜ್ಞರು
೪) ಕಿವಿ, ಮೂಗು, ಗಂಟಲು ರೋಗಗಳ ತಜ್ಞರು
೫) ಚರ್ಮ ರೋಗಗಳ ತಜ್ಞರು
೬) ಚಿಕ್ಕ ಮಕ್ಕಳ ರೋಗಗಳ ತಜ್ಞರು
೭) ಮಾನಸಿಕ ರೋಗಗಳ ತಜ್ಞರು

ಇದಲ್ಲದೆ ನರ ಹೃದಯ ರೋಗ ತಜ್ಞರು, ನರ ದೌರ್ಬಲ್ಯ ರೋಗದ ತಜ್ಞರು ಹೀಗೆ ಅನೇಕ ರೋಗಗಳ ತಜ್ಞ ವೈದ್ಯರಿದ್ದಾರೆ.

## ೧) ದಂತವೈದ್ಯರು

ಮನುಷ್ಯನ ಆರೋಗ್ಯ ಭಾಗ್ಯ ಒಮ್ಮೆ ಲೋಪವಾದರೆ ಇನ್ನೆಲ್ಲ ಭಾಗ್ಯ ಇದ್ದೂ ವ್ಯರ್ಥ. ಕಾರಣ ತನ್ನ ಶರೀರದ ಆರೋಗ್ಯದ ಕಡೆಗೆ ಗಮನ ಕೊಡಲು ಪ್ರಜ್ಞಾವಂತನಾದವನು ತನ್ನ ಪ್ರಥಮ ದೃಷ್ಟಿ ಹರಿಸುತ್ತಾನೆ.

ಆದರೆ ಆತನ ದೇಹ ಆರೋಗ್ಯವಾಗಿರಲು ಹಲ್ಲುಗಳು ಮುಖ್ಯ. ಹಲ್ಲುಗಳು ಆರ್‍ಯೋಗದಿಂದಿರಲು ದೇಹವು ಕಾರಣವಿರುತ್ತದೆ. ದೇಹಕ್ಕೂ ಹಲ್ಲುಗಳಿಗೂ ನಿಕಟ ಸಂಬಂಧವಿದೆ. ಹಲ್ಲು, ದೇಹ ಇವೆರಡೂ ಆರೋಗ್ಯದಿಂದಿದ್ದರೆ ಮನುಷ್ಯ ಹರುಷಗೊಂಡು ಜೀವನ ಸುಖಮಯವಾಗುತ್ತದೆ. ಆದರೆ ಇಂದಿನ ನಾಗರಿಕತೆಯಿಂದಾಗಿ (ಯಾಂತ್ರಿಕ ಯುಗದ ನಾಗರಿಕತೆಯಿಂದಾಗಿ) ಹಲ್ಲು ರೋಗಿಗಳ ಸಂಖ್ಯೆ ಹೆಚ್ಚಾಗ ಹತ್ತಿದೆ. ಅದಕ್ಕೆ ತಕ್ಕಂತೆ ದಂತವೈದ್ಯರ ಸಂಖ್ಯೆ ಇರುವುದಿಲ್ಲ. ಅಂತೆಯೇ ದಂತವೈದ್ಯರಾಗಲು ಅನೇಕರು ಬಯಸುತ್ತಾರೆ. ಪ್ರಸ್ತುತ ಈ ಭಾಗದಲ್ಲಿ ದಂತ ವೈದ್ಯರ ಜಾತಕ ಹೇಗಿರುತ್ತವೆ, ದಂತವೈದ್ಯರ ಕಾರಕ ಗ್ರಹ-ಲಗ್ನ-ಸ್ಥಾನಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕಗ್ರಹ:** ದಂತ ವೈದ್ಯರ ಕಾರಕ ಗ್ರಹಗಳೆಂದರೆ ಮಂಗಳ ಹಾಗೂ ರವಿ, ಏಕೆಂದರೆ ದಂತ ವೈದ್ಯ ವೃತ್ತಿಯು ಸರ್ಜನ್ ವೃತ್ತಿಯಲ್ಲಿ ಬರುತ್ತದೆ. ಅಂತೆಯೇ ದಂತವೈದ್ಯರಿಗೆ ಡೆಂಟಲ್ ಸರ್ಜನ್ ಎಂದು ಕರೆಯುವ ವಾಡಿಕೆ. ಆದ್ದರಿಂದ ಸರ್ಜನ್ ವೃತ್ತಿ ಕಾರಕ ಗ್ರಹಗಳಾದ ಮಂಗಳ-ರವಿಯರು ಬಲಾಢ್ಯರಿರದೆ ಯಾರೂ ಯಶಸ್ವಿ ದಂತವೈದ್ಯರಾಗಲಾರರು. ರವಿ-ಮಂಗಳರಲ್ಲದೆ ಇತರ ಗ್ರಹಗಳ ಬಲವನ್ನೂ ಪರಿಶೀಲಿಸಬೇಕಾಗುತ್ತದೆ. ಏಕೆಂದರೆ ದಂತವೈದ್ಯರು ಮಾಡುವ ಕೆಲಸಗಳಲ್ಲಿ ಐದು ಪ್ರಕಾರಗಳಿವೆ:

೧) ಹಲ್ಲು ಕೀಳುವಿಕೆ

೨) ಹುಳುಕು ಹಲ್ಲಿನ ಚಿಕಿತ್ಸೆ (ಬೆಳ್ಳಿ ತುಂಬುವಿಕೆ)

೩) ವಸಡು ರೋಗದ ಚಿಕಿತ್ಸೆ

೪) ಕೃತ್ರಿಮ ಹಲ್ಲುಗಳನ್ನು ತಯಾರಿಸಿ ಕೊಡುವಿಕೆ (ಹಲ್ಲಿನ ಸೆಟ್ಟು ನಿರ್ಮಾಣ)

೫) ಓರೆಕೋರೆ ಹಲ್ಲುಗಳ ಸರಿಪಡಿಸುವಿಕೆ, ದಂತ ಸ್ವರೂಪ ಚಿಕಿತ್ಸೆ.

ಈ ವಿವಿಧ ಪ್ರಕಾರದ ಕೆಲಸಗಳಿಗೆ ವಿವಿಧ ಗ್ರಹಗಳು ಕಾರಕವಿರುತ್ತವೆ. ಹಲ್ಲಿನ ವಸಡು ಬಾಯುವಿಕೆ, ಹಲ್ಲಿನಲ್ಲಿ ಕೀವು ಬರುವಿಕೆ ಈ ಮೊದಲಾದ ವಸಡು ಚಿಕಿತ್ಸೆಗೆ ಮಂಗಳ-ರವಿಯರ ಸಂಗಡ ಶನಿ-ಚಂದ್ರ ಕಾರಕರಿರುತ್ತಾರೆ. ಹಲ್ಲು ಕೀಳುವಿಕೆ, ಹುಳುಕು ಹಲ್ಲಿನ ಚಿಕಿತ್ಸೆ, ಬೆಳ್ಳಿ ತುಂಬುವಿಕೆ ಈ ಮೊದಲಾದ ಕ್ರಿಯೆಗಳಿಗೆ ಮಂಗಳ-ರವಿಯರು ಮಾತ್ರ ಕಾರಕರು. ಇನ್ನು ಹಲ್ಲುಗಳನ್ನು ತಯಾರಿಸುವ ಕಾರ್ಯದಲ್ಲಿ ಸ್ತ್ರೀ-ಗ್ರಹಗಳಾದ ಶುಕ್ರ-ಚಂದ್ರರೇ ಕಾರಕರಿರುತ್ತಾರೆ. ಅದರಲ್ಲಿಯೂ ಕಲಾತ್ಮಕವಾಗಿ ಕೃತ್ರಿಮ ಹಲ್ಲುಗಳ ಸೆಟ್ ತಯಾರಿಸಲು ಕಾರಕ ಗ್ರಹಗಳಾದ ಶುಕ್ರ-ಚಂದ್ರರು ಬಲಾಢ್ಯರಿರದೆ ನೈಪುಣ್ಯತೆ ಬಾರದು. ಇದರಂತೆ ಓರೆಕೋರೆ ಹಲ್ಲುಗಳನ್ನು ಸರಿಪಡಿಸುವ ದಂತಸ್ವರೂಪ ಚಿಕಿತ್ಸೆಯಲ್ಲಿ ತಜ್ಞರಾಗಲು ರವಿ-ಮಂಗಳರ ಸಂಗಡ ಶುಕ್ರ-ಚಂದ್ರರ ಬಲಾಬಲವನ್ನೂ ಪರಿಶೀಲಿಸಬೇಕು. ಏಕೆಂದರೆ ಅಂಕುಡೊಂಕಾಗಿ ಬೆಳೆದ ಹಲ್ಲುಗಳನ್ನು ಹಾಗೂ ಉಬ್ಬಿದ, ಮುಂದೆಬಂದ ಹಲ್ಲುಗಳನ್ನು ಸರಿಪಡಿಸಿ ಸುಂದರ ಮಾಡಿ ಕಾಣುವಂತೆ ಮಾಡುವ ಕಾರ್ಯ ಅಂದರೆ ಕಲಾತ್ಮಕ ಕೆಲಸವೇ ಇರುತ್ತದೆ. ಈ ಕಲಾಕಾರ ವೃತ್ತಿಗೆ ಕಲಾಕಾರಕ ಗ್ರಹವಾದ ಶುಕ್ರನು ಬಲಾಢ್ಯನಿರಬೇಕಾಗುತ್ತದೆ. ಇದು ಅಲ್ಲದೆ ಅಂಕುಡೊಂಕಾದ, ಉಬ್ಬಿದ ಹಲ್ಲುಗಳನ್ನು ಸರಿಪಡಿಸಿಕೊಳ್ಳಲು ಬರುವವರು ಹೆಚ್ಚಾಗಿ ಸ್ತ್ರೀಯರೇ ಇರುತ್ತಾರೆ; ಅದರಲ್ಲಿಯೂ ಕುಮಾರಿಯರು ಇರುವುದೇ ಹೆಚ್ಚು. ಆದ್ದರಿಂದ ಸ್ತ್ರೀ ಕಾರಕ ಗ್ರಹಗಳಾದ ಶುಕ್ರ-ಚಂದ್ರರು ಬಲಾಢ್ಯರಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು.

ಕಾರಕ ಸ್ಥಾನ: ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ವೈದ್ಯ ವೃತ್ತಿಯ ಸ್ಥಾನವಾದ ಷಷ್ಠ ಸ್ಥಾನವಂತೂ ಬಲಾಢ್ಯವಿರಬೇಕು. ಅಲ್ಲದೇ ಸರ್ಜನ ವೃತ್ತಿಯ ಸ್ಥಾನವಾದ ಲಗ್ನ ಹಾಗೂ ತೃತೀಯ ಸ್ಥಾನಗಳು, ಸುಸಜ್ಜಿತ ಆಸ್ಪತ್ರೆಯ ಸ್ಥಾನವಾದ ಚತುರ್ಥವು ಹಾಗೂ ಈ ಸ್ಥಾನಾಧೀಶರೂ ಬಲಾಢ್ಯರಿರಬೇಕಾಗುತ್ತದೆ.

ಕಾರಕಲಗ್ನ: ಹಲ್ಲು ಕೀಳುವಿಕೆ ಹುಳುಕು ಹಲ್ಲಿನ ಚಿಕಿತ್ಸೆ (ಬೆಳ್ಳಿ ತುಂಬುವಿಕೆ) ಈ ಮೊದಲಾದ ಕೆಲಸಗಳೇ ಮುಖ್ಯವಾಗಿರುವ ವೈದ್ಯರಿಗೆ ಮೇಷ,

ಕರ್ಕ, ಸಿಂಹ, ವೃಶ್ಚಿಕ, ಧನು, ಲಗ್ನಗಳು ಕಾರಕವಿರುತ್ತವೆ. ವಸಡು ರೋಗದ ಚಿಕಿತ್ಸೆ ತಜ್ಞರಿರುವ ದಂತವೈದ್ಯರಿಗೆ ಮೇಷ, ವೃಷಭ, ಮಿಥುನ, ಕರ್ಕ, ತುಲಾ, ವೃಶ್ಚಿಕ, ಮಕರ ಲಗ್ನಗಳು ಕಾರಕವಿವೆ.

ಕೃತ್ರಿಮ ಹಲ್ಲುಗಳ ಸೆಟ್ಟು ತಯಾರಿಸುವದರಲ್ಲಿ ಹಾಗೂ ಓರೆಕೋರೆ ಹಲ್ಲುಗಳನ್ನು ಸರಿಪಡಿಸುವುದರಲ್ಲಿ ನಿಷ್ಣಾತರಿರುವ ದಂತವೈದ್ಯರಿಗೆ ಮೇಷ, ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಮಕರ, ಕುಂಭ ಈ ಲಗ್ನಗಳು ಕಾರಕವಿರುತ್ತವೆ.

**ರಾಶಿ :** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಹಲ್ಲು ಕೀಳುವಿಕೆ ಹಾಗೂ ಹುಳುಕು ಹಲ್ಲುಗಳಿಗೆ ಚಿಕಿತ್ಸೆ ಮಾಡುವ ದಂತವೈದ್ಯರು ಹೆಚ್ಚಾಗಿ ಮೇಷ, ಮಿಥುನ, ಸಿಂಹ, ವೃಶ್ಚಿಕ, ಧನು, ಮಕರ, ಕುಂಭ ರಾಶಿಯವರಿರುತ್ತಾರೆ.

ವಸಡು ರೋಗದ ಚಿಕಿತ್ಸೆಯಲ್ಲಿ ತಜ್ಞರಿರುವ ದಂತವೈದ್ಯರು ಹೆಚ್ಚಾಗಿ ವೃಷಭ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ರಾಶಿಯವರಿರುತ್ತಾರೆ.

ಕೃತ್ರಿಮ ಹಲ್ಲುಗಳ ಸೆಟ್ಟು ತಯಾರಿಸುವದರಲ್ಲಿ ಸಿದ್ಧಹಸ್ತರು ಹಾಗೂ ಉಬ್ಬಿದ ಓರೆಕೋರೆ ಹಲ್ಲುಗಳನ್ನು ಸರಿಪಡಿಸುವುದರಲ್ಲಿ ನಿಷ್ಣಾತರಿರುವ ದಂತ ವೈದ್ಯರು ಹೆಚ್ಚಾಗಿ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯವರಿರುವುದು ಕಂಡುಬರುತ್ತದೆ.

## ೨) ನೇತ್ರ ತಜ್ಞರು

ವಿಪರೀತ ನಾಗರಿಕತೆ ಹಾಗೂ ಯಾಂತ್ರೀಕತೆಯಿಂದಾಗಿ ಇಂದು ನೇತ್ರ ರೋಗಿಗಳ ಸಂಖ್ಯೆ ಮೊದಲಿಗಿಂತಲೂ ಹೆಚ್ಚಾಗಿದೆ. ಅದಕ್ಕೆ ತಕ್ಕಂತೆ ನೇತ್ರ ತಜ್ಞ ವೈದ್ಯರ ಸಂಖ್ಯೆ ಇರುವುದಿಲ್ಲ. ಜಿಲ್ಲಾ ಸ್ಥಳಗಳಲ್ಲಿ ಹಾಗೂ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಮಾತ್ರ ಬೆರಳೆಣಿಕೆಯಷ್ಟು ನೇತ್ರತಜ್ಞರನ್ನು ಕಾಣಬಹುದು.

ತಾಲೂಕಾ ಸ್ಥಳಗಳಲ್ಲಿ ಇವರ ಸಂಖ್ಯೆ ವಿರಳ; ಇಲ್ಲವೆಂದರೂ ತಪ್ಪಿಲ್ಲ. ಅಂತೆಯೇ ನೇತ್ರತಜ್ಞ ವೈದ್ಯರಾಗಲು ಅನೇಕರು ಬಯಸುತ್ತಿದ್ದಾರೆ. ಆದರೆ ಎಲ್ಲ ನೇತ್ರತಜ್ಞರು ಈ ವೃತ್ತಿಯಲ್ಲಿ ಯಶಸ್ವಿಯಾಗಿರುವುದಿಲ್ಲ.

ಮಾನವರಿಗೆ ಇರುವುದು ಎರಡೇ ಎರಡು ಕಣ್ಣು. ನೇತ್ರ ತಜ್ಞರ ನಿರ್ಲಕ್ಷದಿಂದಾಗಿ ಯಾವುದೊಂದು ಕಣ್ಣು ಲೋಪವಾದರೆ ಇಲ್ಲವೆ ನೇತ್ರ ತಜ್ಞರು ಶಸ್ತ್ರಚಿಕಿತ್ಸೆಯಲ್ಲಿ ವಿಫಲರಾದರೆ ಅವರಿಗೆ ಅಪಕೀರ್ತಿ ಕಟ್ಟಿಟ್ಟದ್ದೇ. ಸಾವಿರಾರು ನೇತ್ರರೋಗಿಗಳನ್ನು ಗುಣಪಡಿಸಿದ ಕೀರ್ತಿಯೆಲ್ಲ ತೊಲಗಿ ಒಬ್ಬ ರೋಗಿಯಿಂದಾಗಿ ಅಪಕೀರ್ತಿಯನ್ನು ಹೊಂದಬೇಕಾಗುತ್ತದೆ. ಆದ್ದರಿಂದ ಯಶಸ್ವಿ ನೇತ್ರತಜ್ಞರ ಜಾತಕ ಹೇಗಿರುತ್ತದೆ, ನೇತ್ರ ತಜ್ಞರ ವೈದ್ಯ ವೃತ್ತಿಯ ಕಾರಕ ಗ್ರಹ-ರಾಶಿ-ಲಗ್ನ-ಸ್ಥಾನಾದಿಗಳಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ :** ನೇತ್ರ ತಜ್ಞ ವೈದ್ಯರ ಕಾರಕ ಗ್ರಹಗಳೆಂದರೆ ಮಂಗಳ-ರವಿಯರು. ಕಾರಣ ನೇತ್ರತಜ್ಞ ವೈದ್ಯ ವೃತ್ತಿಯು ಸರ್ಜನ್ ವೃತ್ತಿಯಲ್ಲಿಯೇ ಬರುತ್ತದೆ. ಮಂಗಳ-ರವಿಯರ ತರುವಾಯ ಇತರ ಗ್ರಹ ಗಳ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ. ಏಕೆಂದರೆ ನೇತ್ರತಜ್ಞ ವೈದ್ಯರ ಬಳಿಯಲ್ಲಿ ಬರುವ ರೋಗಿಗಳು ಎರಡು ಪ್ರಕಾರದವರಿರುತ್ತಾರೆ.

೧) ನೇತ್ರಾಭಿಸಂಧ ಕಣ್ಣು ಬರುವಿಕೆ ಕಣ್ಣು ಕೆಂಪಾಗುವಿಕೆ, ಕಣ್ಣಿನಲ್ಲಿ ಪಿಚ್ಚುಗಟ್ಟುವಿಕೆ, ನೀರು ಸೇರುವಿಕೆ, ದೃಷ್ಟಿದೋಷ ಮೊದಲಾದ ವಿಕಾರದವರು.

೨) ಅಲ್ಲದೆ ನಿಶಂಧತೆ, ಕಣ್ಣಿನಲ್ಲಿ ಮೋತಿಬಿಂದು, ಕಾಚುಬಿಂದು, ಮೆಳ್ಳಗಣ್ಣು, ಗುಡ್ಡಿಯಲ್ಲಿಯ ದೋಷ ಈ ಮೊದಲಾದ ದೋಷ ಪೀಡಿತ ರೋಗಿಗಳು.

ಮೊದಲನೇ ಪ್ರಕಾರದ ರೋಗಿಗಳು ಹೆಚ್ಚಾಗಿ ಔಷಧೋಪಚಾರದಿಂದ ಗುಣ ಹೊಂದುವುದರಿಂದ ಇಂಥ ನೇತ್ರತಜ್ಞರ ಜಾತಕದಲ್ಲಿ ರವಿ-ಮಂಗಳರ ಸಂಗಡ ಚಂದ್ರ-ಶನಿಯರ ಬಲಾಬಲವನ್ನೂ ಪರಿಶೀಲಿಸಬೇಕಾಗುತ್ತದೆ.

ಎರಡನೇ ಪ್ರಕಾರದ ರೋಗಿಗಳಿಗೆ ಶಸ್ತ್ರ ಚಿಕಿತ್ಸೆಯಿಂದಲೇ ರೋಗ ಗುಣವಾಗುವುದರಿಂದ ಈ ಪ್ರಕಾರದ ನೇತ್ರತಜ್ಞ ವೈದ್ಯರಿಗೆ ಮಂಗಳ-ರವಿಯರು ಕಾರಕರಿದ್ದು, ಆ ಮಂಗಳ-ರವಿಯರು ರಾಶಿ ಬಲದವರೂ, ಸ್ಥಾನ ಬಲದವರೂ, ಯೋಗ ಕಾರಕರೂ ಇರಲೇಬೇಕಾಗುತ್ತದೆ.

ಕಣ್ಣನ್ನು ತಪಾಸಿಸಿ ವಿವಿಧ ನಂಬರಿನ ಕನ್ನಡಕ ಜಾಳೀಸು (ಚಷ್ಮಾ) ದಿಂದ ದೃಷ್ಟಿದೋಷ ನಿವಾರಣೆ ಮಾಡುವ ನೇತ್ರತಜ್ಞರಿಗೆ ಮಂಗಳ-ರವಿಯರ ಸಂಗಡ ಗುರುವನ್ನೂ ಪರಿಶೀಲಿಸಬೇಕಾಗುತ್ತದೆ. ಆದರೆ ಕನ್ನಡಕ ವ್ಯಾಪಾರಿಗಳಿಗೆ ಮಾತ್ರ ಮಂಗಳ-ರವಿಯರ ಸಂಗಡ ಬುಧನನ್ನು ಪರಿಶೀಲಿಸಬೇಕಾಗುತ್ತದೆ.

**ಕಾರಕ ಸ್ಥಾನ** : ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ವೈದ್ಯ ವೃತ್ತಿಯ ಸ್ಥಾನವಾದ ಷಷ್ಠ ಸ್ಥಾನವಂತೂ ಬಲಾಢ್ಯವಿರಲೇಬೇಕು. ಅಲ್ಲದೆ ಸರ್ಜನ್ ವೃತ್ತಿಯ ಸ್ಥಾನವಾದ ಲಗ್ನ, ತೃತೀಯ ಸ್ಥಾನಗಳು ಸುಸಜ್ಜಿತ ಆಸ್ಪತ್ರೆಯ ಸ್ಥಾನವಾದ ಚತುರ್ಥವೂ ಹಾಗೂ ಈ ಸ್ಥಾನಾಧೀಶರು ಬಲಾಢ್ಯರಿರಬೇಕಾಗುತ್ತದೆ.

**ಕಾರಕಲಗ್ನ** : ಲಗ್ನದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಕರ್ಕ, ಸಿಂಹ, ವೃಶ್ಚಿಕ, ಧನು, ಮಕರ ಈ ಏಳು ಲಗ್ನಗಳು ನೇತ್ರತಜ್ಞ ವೈದ್ಯರ ಕಾರಕ ಲಗ್ನಗಳಿರುತ್ತವೆ.

**ರಾಶಿ** : ರಾಶಿ ದೃಷ್ಟಿಯಿಂದ ನೋಡಿದರೆ ಮೇಷ, ಮಿಥುನ, ಸಿಂಹ, ತುಲಾ, ಧನು, ಮಕರ, ಕುಂಭ ಈ ಏಳು ರಾಶಿಯವರು ನೇತ್ರರೋಗಿಗಳ ಚಿಕಿತ್ಸೆಯಲ್ಲಿ ನಿಪುಣರಿರುತ್ತಾರೆ.

**ಯೋಗ** :

೧) ಲಗ್ನ, ತೃತೀಯ, ಭಾಗ್ಯ ಈ ಮೂರು ಸ್ಥಾನಗಳಲ್ಲಿ ಯಾವುದೇ ಎರಡು ಸ್ಥಾನಗಳು, ಸ್ಥಾನಾಧೀಶರು ಬಲಾಢ್ಯರಿರುವ ಜಾತಕರು ಯಶಸ್ವಿ ನೇತ್ರತಜ್ಞರಾಗುತ್ತಾರೆ.

೨) ರವಿ-ಮಂಗಳರು ಬಲಾಢ್ಯರಿರದ ಯಾರೂ ಯಶಸ್ವಿ ನೇತ್ರ ತಜ್ಞರಾಗಲಾರರು.

## ೩) ಪ್ರಸೂತಿ ತಜ್ಞರು

### ಹೆರಿಗೆ ದವಾಖಾನೆಯ ವೈದ್ಯರು (Maternity doctors)

ವಿಶೇಷ ತಜ್ಞ ವೈದ್ಯರಲ್ಲಿ (ಸ್ಪೇಶಲಿಸ್ಟರಲ್ಲಿ) ದಂತ ವೈದ್ಯರು ನೇತ್ರ ತಜ್ಞ ವೈದ್ಯರುಗಳಂತೆ ಪ್ರಸೂತಿ ತಜ್ಞ ವೈದ್ಯರ ಪ್ರಾಮುಖ್ಯತೆ ಬಹಳವಿದೆ. ಇದಕ್ಕೆ ಅನೇಕ ಕಾರಣಗಳಿವೆ. ಈ ಹಿಂದೆ ಏಕತ್ರ ಕುಟುಂಬ ಪದ್ಧತಿ ಪ್ರಚಲಿತದಲ್ಲಿದ್ದಿತು. ಮನೆಯ ಹಿರಿಯರೆ ಕುಟುಂಬದ ಹೆರಿಗೆಯ ಕೆಲಸ ನೋಡಿ ಕೊಳ್ಳುತ್ತಿದ್ದರು. ಇಂದು ಕಾಲ ಬದಲಾಗಿದೆ. ಏಕತ್ರ ಕುಟುಂಬ ನಶಿಸಿ ಹೋಗಹತ್ತಿದೆ. ಅಲ್ಲದೆ ಪುರ-ಪಟ್ಟಣಗಳಲ್ಲಿ ಪತಿ-ಪತ್ನಿ ಈರ್ವರೂ ಉದ್ಯೋಗಕ್ಕೆ ತೊಡಗುತ್ತಿರುವುದು ಅನಿವಾರ್ಯವಾಗಿದೆ. ಆದ್ದರಿಂದ ಹೆರಿಗೆಯನ್ನು ಆಸ್ಪತ್ರೆಯಲ್ಲಿ ಮಾಡಿಸಿಕೊಳ್ಳುವುದು ಅನಿವಾರ್ಯವಷ್ಟೇ ಅಲ್ಲಾ ಅತ್ಯವಶ್ಯವೂ ಆಗಿದೆ. ಅಲ್ಲದೆ ಜನರಲ್ಲಿ ಪ್ರಸೂತಿಯ ಬಗೆಗೆ ಮೊದಲಿಗಿಂತಲೂ ತಿಳುವಳಿಕೆ ಹೆಚ್ಚಾಗಿದೆ. ಆಸ್ಪತ್ರೆಯಲ್ಲಿ ಹೆರಿಗೆ ಮಾಡಿಸಿ ಕೊಂಡಲ್ಲಿ ಪ್ರಸೂತಿ ಸಮಯದಲ್ಲಿ ಆಗಬಹುದಾದ ಸಾವು-ನೋವುಗಳ ಸಂಖ್ಯೆ ಕಡಿಮೆ ಆಗಬಹುದೆಂಬ ಪ್ರಜ್ಞೆ ಜನರಲ್ಲಿ ಬೆಳೆದಿದೆ. ಇದು ಅಲ್ಲದೆ ಕುಟುಂಬ ಯೋಜನೆಯ ಪ್ರಜ್ಞೆ ಕೂಡ ಮೊದಲಿಗಿಂತ ಜನರಲ್ಲಿ ಹೆಚ್ಚಾಗಿದೆ. ಹೀಗಾಗಿ ಅನೇಕರು ಆಸ್ಪತ್ರೆಯಲ್ಲಿ ಹೆರಿಗೆ ಮಾಡಿಸಿಕೊಳ್ಳಲು ಬಯಸುತ್ತಿದ್ದಾರೆ. ಅಲ್ಲದೆ ತಜ್ಞ ವೈದ್ಯರ ಗಳಿಕೆಯು ಚೆನ್ನಾಗಿದೆ. ಅಂತೆಯೇ ಪ್ರಸೂತಿ ತಜ್ಞರಾಗಲು ಅನೇಕ ವೈದ್ಯ ವಿದ್ಯಾರ್ಥಿಗಳು ಬಯಸುತ್ತಾರೆ. ಇನ್ನು ಫಲಜ್ಯೋತಿಷ್ಯದಲ್ಲಿ ಪ್ರಸೂತಿ ತಜ್ಞ ವೈದ್ಯರ ಜಾತಕ ಹೇಗಿರುತ್ತವೆ, ಪ್ರಸೂತಿ ತಜ್ಞ ವೈದ್ಯ ವೃತ್ತಿಯ ಕಾರಕ ಗ್ರಹ, ಲಗ್ನ, ಸ್ಥಾನ ರಾಶ್ಯಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕಗ್ರಹ :** ಪ್ರಸೂತಿ ತಜ್ಞ ವೈದ್ಯರ ವೃತ್ತಿಗೆ ಮಂಗಳ, ರವಿ, ಶುಕ್ರ, ಚಂದ್ರ ಈ ನಾಲ್ಕು ಗ್ರಹಗಳು ಕಾರಕವಿರುತ್ತವೆ. ಪ್ರಸೂತಿ ತಜ್ಞರ

ವೃತ್ತಿಯು ಸರ್ಜನ ವೃತ್ತಿಯಲ್ಲಿ ಬರುತ್ತದೆ. ಆದ್ದರಿಂದ ಸರ್ಜನ ವೃತ್ತಿಯು ಕಾರಕ ಗ್ರಹಗಳಾದ ಮಂಗಳ, ರವಿಯರಂತೂ ಬಲಾಢ್ಯರಿರಲೇಬೇಕು. ಅಲ್ಲದೆ ಶುಕ್ರ-ಚಂದ್ರರ ಬಲಾಬಲವನ್ನೂ ಪರಿಶೀಲಿಸಬೇಕಾಗುತ್ತದೆ. ಏಕೆಂದರೆ ಪ್ರಸೂತಿ ತಜ್ಞರಲ್ಲಿ ಬರುವವರು ಸ್ತ್ರೀಯರೇ ಇರುತ್ತಾರೆ. ಆದ್ದರಿಂದ ಸ್ತ್ರೀ ರೋಗಿಗಳ ಹಾಗೂ ಸ್ತ್ರೀ ರೋಗಗಳ ಕಾರಕ ಗ್ರಹಗಳಾದ ಶುಕ್ರ–ಚಂದ್ರರು ಬಲಾಢ್ಯರಿರಬೇಕು. ಇದಲ್ಲದೆ ಶುಕ್ರ - ಚಂದ್ರರು ಬಲಾಢ್ಯರಿದ್ದ ಜಾತಕನಿಗೆ ಗರ್ಭಿಣಿಯರು ಹಾಗೂ ಸ್ತ್ರೀ ರೋಗಿಗಳು ಅಧಿಕ ಸಂಖ್ಯೆಯಲ್ಲಿ ಹೆಚ್ಚಾಗಿ ಬರುತ್ತಾರೆ. ಕೇವಲ ರವಿ–ಮಂಗಳರು ಬಲಾಢ್ಯರಿದ್ದ ಜಾತಕರು ಶಸ್ತ್ರಕ್ರಿಯಾ ಜ್ಞಾನದಲ್ಲಿ ಪಳಗಿದವರು ಆಗುತ್ತಾರೆ. ಇದರಂತೆ ಶುಕ್ರ–ಚಂದ್ರರು ಮಾತ್ರ ಬಲಾಢ್ಯರಿದ್ದು ರವಿ–ಮಂಗಳ ದುರ್ಬಲರಿದ್ದ ಜಾತಕನಿಗೆ ಸ್ತ್ರೀ ರೋಗಿಗಳು, ಗರ್ಭಿಣಿ ಪೇಶಂಟುಗಳು ಅಧಿಕ ಸಂಖ್ಯೆಯಲ್ಲಿ ಬರುತ್ತಾರೆ. ಆದರೆ ಇಂಥವರ ಶಸ್ತ್ರಕ್ರಿಯೆ ಮಾಡಲು ಇವರು ಬೇರೆ ವೈದ್ಯರ ಸಹಾಯ ಪಡೆದುಕೊಳ್ಳಬೇಕಾಗುತ್ತದೆ.

**ಕಾರಕ ಸ್ಥಾನ :** ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ವೈದ್ಯ ವೃತ್ತಿಯ ಸ್ಥಾನವಾದ ಷಷ್ಠ ಸ್ಥಾನವಂತೂ ಬಲಾಢ್ಯವಿರಲೇಬೇಕು. ಅಲ್ಲದೇ ಸರ್ಜನ ವೃತ್ತಿಯ ಸ್ಥಾನಗಳಾದ ಲಗ್ನ, ತೃತೀಯ ಸ್ಥಾನಗಳು ಬಲಾಢ್ಯ ವಿರಬೇಕು. ಇದಲ್ಲದೆ ಆಸ್ಪತ್ರೆಯ ಸ್ಥಾನವಾದ ಚತುರ್ಥವು ಬಲಾಢ್ಯವಿರದವರು ಸ್ವತಂತ್ರವಾದ ಪ್ರತ್ಯೇಕ ಹೆರಿಗೆ ಆಸ್ಪತ್ರೆಯನ್ನು ಹೊಂದಲಾರರು.

**ಕಾರಕ ಲಗ್ನ :** ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ, ಮೇಷ, ಕರ್ಕ, ಸಿಂಹ, ವೃಶ್ಚಿಕ, ಧನು ಈ ಲಗ್ನದವರು ಶಸ್ತ್ರಕ್ರಿಯೆ ಮಾಡುವದರಲ್ಲಿ ಸಿದ್ಧಹಸ್ತರಿದ್ದಾರೆ. ಮೇಷ, ಕರ್ಕ, ಕುಂಭ ಲಗ್ನದವರು ಸುಸಜ್ಜಿತವಾದ ಆಧುನಿಕ ಸೌಕರ್ಯವುಳ್ಳ ಯಂತ್ರೋಪಕರಣವುಳ್ಳ ಹೆರಿಗೆ ಆಸ್ಪತ್ರೆಯನ್ನು ಹೊಂದಿರುತ್ತಾರೆ. ಮೇಷ, ವೃಷಭ, ಮಿಥುನ, ಕರ್ಕ, ತುಲಾ, ಮಕರ, ಕುಂಭ, ಮೀನ ಈ ಲಗ್ನದವರಿಗೆ ಗರ್ಭಿಣಿ ಸ್ತ್ರೀಯರು ಹಾಗೂ ಸ್ತ್ರೀ ರೋಗಿಗಳ ಸಂಖ್ಯೆ ಹೆಚ್ಚಾಗಿರುತ್ತದೆ.

ರಾಶಿ : ರಾಶಿ ದೃಷ್ಟಿಯಿಂದ ನೋಡಿದರೆ ನಿರ್ದಿಷ್ಟ ರಾಶಿಯವರೇ ಪ್ರಸೂತಿ ತಜ್ಞರಿರುತ್ತಾರೆ ಎಂದು ಹೇಳಲುಬಾರದು.

ಯೋಗಗಳು :

(೧) ಚತುರ್ಥ ಸ್ಥಾನ, ಚತುರ್ಥೇಶ, ಶುಕ್ರ, ಚಂದ್ರ, ಈ ನಾಲ್ಕರಲ್ಲಿ ಯಾವುದೇ ಎರಡು ಅನುಕೂಲವಿದ್ದ ಜಾತಕನ ಹೆರಿಗೆ ಆಸ್ಪತ್ರೆ ಚನ್ನಾಗಿ ನಡೆಯುತ್ತದೆ.

(೨) ಶನಿ, ಮಂಗಳ, ರವಿ, ರಾಹು ಈ ನಾಲ್ಕು ಗ್ರಹಗಳಲ್ಲಿ ಯಾವುದೇ ಎರಡು ಗ್ರಹಗಳು ಚತುರ್ಥದಲ್ಲಿದ್ದು ಮತ್ತು ಚತುರ್ಥೇಶ ದುರ್ಬಲನಿದ್ದ ಜಾತಕನ ಹೆರಿಗೆ ಆಸ್ಪತ್ರೆ ಚನ್ನಾಗಿ ನಡೆಯುವುದಿಲ್ಲ. ಇಷ್ಟೇ ಅಲ್ಲಾ ಹೆರಿಗೆ ಸಮಯದಲ್ಲಿ ಸಾವು ನೋವುಗಳಿಂದಾಗಿ ಅಪಕೀರ್ತಿ ಪಡೆಯುತ್ತಾರೆ. ಇಂಥ ವೈದ್ಯರು ಹೆರಿಗೆ ಆಸ್ಪತ್ರೆ ಪ್ರಾರಂಭಿಸಬಾರದು.

## ೪) ಕಿವಿ, ಮೂಗು, ಗಂಟಲು ರೋಗಗಳ ತಜ್ಞರು

ವಿಶೇಷ ತಜ್ಞ ವೈದ್ಯರಲ್ಲಿ ಕಿವಿ, ಮೂಗು, ಗಂಟಲು ರೋಗಗಳ ತಜ್ಞರ ವೈದ್ಯ ವೃತ್ತಿಯು ಇತ್ತೀಚಿಗೆ ಬಹಳ ಪ್ರಾಮುಖ್ಯತೆ ಪಡೆದಿದೆ. ಆದ್ದರಿಂದ ಫಲ ಜ್ಯೋತಿಷ್ಯದಲ್ಲಿ ಈ ವೃತ್ತಿ ಕೈಕೊಳ್ಳಲು ಜಾತಕ ಹೇಗಿರಬೇಕು, ಕಾರಕಗ್ರಹ, ಲಗ್ನ ಸ್ಥಾನಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

ಕಾರಕ ಗ್ರಹ : ಕಿವಿ, ಮೂಗು, ಗಂಟಲು ರೋಗಗಳ ತಜ್ಞರ ವೃತ್ತಿಯು ಸರ್ಜನ ವೃತ್ತಿಯಲ್ಲಿ ಬರುವುದರಿಂದ ಸರ್ಜನ ವೃತ್ತಿಯು ಕಾರಕ ಗ್ರಹಗಳಾದ ಮಂಗಳ–ರವಿಯರಂತೂ ಬಲಾಢ್ಯರಿರಲೇಬೇಕು. ಅಲ್ಲದೆ ಗುರುವಿನ ಬಲಾಬಲವನ್ನೂ ಪರಿಶೀಲಿಸಬೇಕು. ಏಕೆಂದರೆ ಈ ವಿಶಿಷ್ಟ ರೋಗಗಳ ತಜ್ಞ ವೈದ್ಯರಲ್ಲಿ ಚಿಕಿತ್ಸೆಗೆ ಬರುವವರು ಹೆಚ್ಚಾಗಿ ತಮ್ಮ ಕುಟುಂಬ ವೈದ್ಯರ ಸಲಹೆ ಸೂಚನೆ ನಿರ್ದೇಶನದ (Referred cases) ಮೇರೆಗೆ ಬಂದಿರುತ್ತಾರೆ. ಆದ್ದರಿಂದ ಇವರ ಜಾತಕದಲ್ಲಿ ಗುರುವು

ಬಲಾಢ್ಯನಿರಲೇಬೇಕು. ಹೀಗೆ ಮಂಗಳ-ರವಿ-ಗುರುಗಳು ಬಲಾಢ್ಯರಿರದೇ ಯಾರೂ ಯಶಸ್ವಿ ಕಿವಿ-ಮೂಗು-ಗಂಟಲ ರೋಗಗಳ ತಜ್ಞ ವೈದ್ಯ ವೃತ್ತಿಯವರಾಗಲಾರರು.

**ಕಾರಕ ಲಗ್ನ :** ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ಕರ್ಕ, ಸಿಂಹ, ವೃಶ್ಚಿಕ ಇವು ಕಾರಕ ಲಗ್ನಗಳು. ಇವುಗಳ ನಂತರ ಮಿಥುನ, ಮೀನ ಇವು ಬರುತ್ತವೆ.

**ಕಾರಕ ಸ್ಥಾನ :** ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ವೈದ್ಯ ವೃತ್ತಿಯ ಸ್ಥಾನವಾದ ಷಷ್ಠ, ಸರ್ಜನ ವೃತ್ತಿಯ ಸ್ಥಾನಗಳಾದ ಲಗ್ನ, ತೃತೀಯ ಸ್ಥಾನಗಳು ಕಾರಕವಿರುವುದರಿಂದ ಈ ಸ್ಥಾನಗಳು ಹಾಗೂ ಈ ಸ್ಥಾನಾಧೀಶರು ಬಲಾಢ್ಯರಿರಬೇಕು.

**ರಾಶಿ :** ರಾಶಿ ದೃಷ್ಟಿಯಿಂದ ನೋಡಿದರೆ ನಿರ್ದಿಷ್ಟ ರಾಶಿಯವರೇ ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ ಎಂದು ಹೇಳಲುಬಾರದು.

## ೫) ಚರ್ಮ ರೋಗಗಳ ತಜ್ಞರು

ಆಧುನೀಕರಣ ಬೆಳೆದಂತೆ ಚರ್ಮ ರೋಗಿಗಳ ಸಂಖ್ಯೆ ಬೆಳೆದಿದೆ. ಅದರಲ್ಲಿಯೂ ಗುಹ್ಯ ರೋಗಿಗಳ ಸಂಖ್ಯೆ ಅದು ದಿನದಿಂದ ದಿನಕ್ಕೆ ಹೆಚ್ಚಾಗಹತ್ತಿದೆ. ಅಂತೆಯೇ ಚರ್ಮ ರೋಗಗಳ ಹಾಗೂ ಗುಹ್ಯ ರೋಗಗಳ ತಜ್ಞರ ವೃತ್ತಿ ಚನ್ನಾಗಿ ನಡೆಯುತ್ತದೆ. ಆದ್ದರಿಂದ ಫಲ ಜ್ಯೋತಿಷ್ಯದಲ್ಲಿ ಈ ವಿಶಿಷ್ಟ ರೋಗಗಳ ತಜ್ಞರ ಜಾತಕ ಹೇಗಿರುತ್ತವೆ, ಕಾರಕ ಗ್ರಹ, ಲಗ್ನ, ಸ್ಥಾನ, ರಾಶ್ಯಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ :** ಚರ್ಮ ರೋಗ ತಜ್ಞರ ವೃತ್ತಿ ಸಾಮಾನ್ಯ ವೈದ್ಯ ವೃತ್ತಿಯಲ್ಲಿ (ಜನರಲ್ ಫಿಜಿಸಿಯನ್) ಬರುತ್ತದೆ. ಶಸ್ತ್ರಕ್ರಿಯಾ ಚಿಕಿತ್ಸೆ ತೀರ ಕಡಿಮೆ. ಆದ್ದರಿಂದ ಈ ಹಿಂದೆ ವಿವರಿಸಿದಂತೆ ವೈದ್ಯ ವೃತ್ತಿಯ

ಕಾರಕ ಗ್ರಹಗಳ ಬಲಾಬಲವನ್ನಂತೂ ಪರಿಶೀಲಿಸಲೇಬೇಕು. ಅಲ್ಲದೆ ತ್ವಚೆಯ ಮೇಲೆ ಪ್ರಭುತ್ವವಿರುವ ಬುಧನ ಬಲಾಬಲವನ್ನೂ ಪರಿಶೀಲಿಸಬೇಕು ಇದಲ್ಲದೆ ಶನಿಯ ಬಲಾಬಲವನ್ನೂ ಪರಿಶೀಲಿಸಬೇಕು. ಏಕೆಂದರೆ ಚರ್ಮ ರೋಗಗಳು ಹೆಚ್ಚಾಗಿ ದೀರ್ಘಾವಧಿ ರೋಗ (ಕ್ರಾನಿಕ್ ಡಿಸೀಜ)ಗಳಲ್ಲಿ ಬರುತ್ತವೆ. ಆದ್ದರಿಂದ ಬುಧ-ಶನಿಯರು ಚರ್ಮರೋಗ ತಜ್ಞರ ಕಾರಕ ಗ್ರಹಗಳು.

**ಕಾರಕಲಗ್ನ :** ಲಗ್ನದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ, ಕನ್ಯಾ, ತುಲಾ, ಮಕರ, ಕುಂಭ ಈ ಲಗ್ನದವರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

**ಸ್ಥಾನ :** ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ವೈದ್ಯ ವೃತ್ತಿಯ ಸ್ಥಾನವಾದ ಷಷ್ಠವು ಕಾರಕವಿದ್ದು ಷಷ್ಠ ಹಾಗೂ ಷಷ್ಠೇಶರು ಬಲಾಢ್ಯರಿರಬೇಕಾಗುತ್ತದೆ.

**ರಾಶಿ :** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಚರ್ಮ ರೋಗ ತಜ್ಞರ ವೈದ್ಯ ವೃತ್ತಿಗೆ ತಾಳ್ಮೆ ಬಹಳ ಬೇಕಾಗುತ್ತದೆ. ಆದ್ದರಿಂದ ವೃಷಭ, ಕರ್ಕ, ಕನ್ಯಾ, ಮಕರ, ಮೀನ ಈ ರಾಶಿಯವರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

## ೬) ಚಿಕ್ಕಮಕ್ಕಳ ರೋಗಗಳ ತಜ್ಞರು

ವಿವಿಧ ರೋಗಗಳ ತಜ್ಞ ಡಾಕ್ಟರರಲ್ಲಿ ಚಿಕ್ಕಮಕ್ಕಳ ರೋಗಗಳ ತಜ್ಞರಾಗಲು ಅನೇಕರು ಬಯಸುತ್ತಿದ್ದಾರೆ. ಇದಕ್ಕೆ ಅನೇಕ ಕಾರಣಗಳಿದ್ದರೂ ಪ್ರಮುಖವಾಗಿ ಮೂರು ಕಾರಣಗಳಿವೆ. ಮೊದಲನೇದಾಗಿ ಮಕ್ಕಳ ರೋಗಿಗಳ ಸಂಖ್ಯೆ ಯಾವಾಗಲೂ ಹೆಚ್ಚಾಗಿರುತ್ತದೆ. ಅಂತೆಯೇ ಮೂರು ಅಪಾಯ ಕಳೆಯಲಿ ಎಂಬ ನಾಣ್ಣುಡಿಯಿದೆ. ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ಕೂಡ ಮೂರು ವರುಷದ ಬಾಲಾರಿಷ್ಟ ಕಳೆದ ಬಳಿಕವೇ ಜಾತಕದ ಫಲವನ್ನು ಬರೆಯುವ ಪದ್ಧತಿ ಉಂಟು. ಎರಡನೆಯದಾಗಿ ಶಾರೀರಿಕ ಪೀಡೆಯನ್ನು ಕಡೆದುಕೊಳ್ಳುವ ಶಕ್ತಿ ಮಕ್ಕಳಲ್ಲಿ ಇರುವುದಿಲ್ಲ. ತಮಗಾಗುವ ತೊಂದರೆ

ಯನ್ನು ನಿವೇದಿಸಲು ಮಾತು ಬರುವುದಿಲ್ಲವಾದ್ದರಿಂದ ಹಗಲು-ರಾತ್ರಿ ಒಂದೇ ಸವನೆ ಅಳುತ್ತವೆ. ಒಂದೇ ಸವನೆ ಮಕ್ಕಳ ಅಳುವಿಕೆಯಿಂದಾಗಿ ತಜ್ಞ ಡಾಕ್ಟರರಲ್ಲಿಗೆ ಕರೆದುಕೊಂಡು ಹೋಗುವುದು ತಾಯಂದಿರಿಗೆ ಅನಿವಾರ್ಯವಾಗುತ್ತದೆ. ಪೂರನೇದಾಗಿ ಕುಟುಂಬ ಯೋಜನೆಯ ತಿಳಿವಳಿಕೆ ಇರುವ ಮಧ್ಯಮ ವರ್ಗದವರು ಮಿತಸಂತಾನ ಪರಿಜ್ಞಾನದಿಂದಾಗಿ ಮಕ್ಕಳ ಪಾಲನೆ ಪೋಷಣೆಗೆ ಹೆಚ್ಚು ಆಸಕ್ತಿ ವಹಿಸುವುದಲ್ಲದೆ ಮಕ್ಕಳಿಗೆ ತುಸು ತೊಂದರೆಯಾದರೆ ಸಾಕು, ನೇರವಾಗಿ ಚಿಕ್ಕಮಕ್ಕಳ ರೋಗಗಳ ತಜ್ಞ ವೈದ್ಯರಲ್ಲಿಗೆ ಧಾವಿಸುತ್ತಿದ್ದಾರೆ. ಅಂತೆಯೇ ಈ ವಿಶೇಷ ತಜ್ಞರ ವೃತ್ತಿಯು ಚೆನ್ನಾಗಿ ನಡೆದಿದೆ. ಆದಾಗ್ಯೂ ಎಲ್ಲ ವಿಶೇಷ ತಜ್ಞರ ವೃತ್ತಿ ಚೆನ್ನಾಗಿರುತ್ತದೆ ಎಂದು ಹೇಳಲು ಬಾರದು. ಆದ್ದರಿಂದ ಫಲಜ್ಯೋತಿಷ್ಯದಲ್ಲಿ ಚಿಕ್ಕಮಕ್ಕಳ ರೋಗಗಳ ತಜ್ಞ ಡಾಕ್ಟರರೆಂದು ವೃತ್ತಿ ಕೈಕೊಳ್ಳಲು ಜಾತಕ ಎಂತಿರಬೇಕು, ಕಾರಕಗ್ರಹ ಲಗ್ನಸ್ಥಾನ ರಾಶ್ಯಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕಗ್ರಹ :** ಚಿಕ್ಕಮಕ್ಕಳ ರೋಗಗಳ ತಜ್ಞರ ವೃತ್ತಿಯು ಸಾಮಾನ್ಯ ವೈದ್ಯ ವೃತ್ತಿಯಲ್ಲಿ (ಜನರಲ್ ಫಿಜೀಸಿಯನ್) ಬರುತ್ತದೆ. ಶಸ್ತ್ರಚಿಕಿತ್ಸೆಯು ತೀರ ಕಡಿಮೆ; ಆದ್ದರಿಂದ ಈ ಹಿಂದೆ ವಿವರಿಸಿದಂತೆ ವೈದ್ಯ ವೃತ್ತಿಯ ಕಾರಕಗ್ರಹಗಳ ಬಲಾಬಲವನ್ನಂತೂ ಪರಿಶೀಲಿಸಬೇಕು. ಅಲ್ಲದೆ ಶುಕ್ರ-ಚಂದ್ರರ ಬಲಾಬಲವನ್ನೂ ಪರಿಶೀಲಿಸಬೇಕು. ಏಕೆಂದರೆ ಚಿಕ್ಕಮಕ್ಕಳ ರೋಗಗಳ ತಜ್ಞರಲ್ಲಿ ಬರುವವರು ಮಕ್ಕಳೊಂದಿಗೆ ತಾಯಂದಿರು, ಅಜ್ಜಿಯಂದಿರು, ಅಕ್ಕಂದಿರು, ಸೋದರತ್ತೆ ಮೊದಲಾದ ಸ್ತ್ರೀಯರೇ ಹೆಚ್ಚಾಗಿರುತ್ತಾರೆ. ಆದ್ದರಿಂದ ಸ್ತ್ರೀ ಗ್ರಹವಾದ ಶುಕ್ರನು ಬಲಾಢ್ಯನಿರಬೇಕು. ತರುವಾಯ ಚಂದ್ರನ ಬಲಾಬಲವನ್ನು ಪರಿಶೀಲಿಸಬೇಕು. ಏಕೆಂದರೆ ಚಿಕ್ಕಮಕ್ಕಳ ರೋಗಗಳ ಕಾರಕನೂ ಮಕ್ಕಳ ರೋಗಗಳ ಜ್ಞಾನದ ಕಾರಕನೂ ಆದ ಚಂದ್ರನು ಜಾತಕದಲ್ಲಿ ಬಲಾಢ್ಯನಿರಲೇಬೇಕು ಆದ್ದರಿಂದ ಶುಕ್ರ-ಚಂದ್ರರು ಬಲಾಢ್ಯರಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗಲಾರರು.

**ಕಾರಕಲಗ್ನ :** ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ ಕರ್ಕ, ತುಲಾ, ಮಕರ, ಕುಂಭ ಈ ಲಗ್ನದವರು ಅನಂತರ ವೃಷಭ, ಮಿಥುನ, ವೃಶ್ಚಿಕ, ಮೀನ ಈ ಲಗ್ನದವರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

**ಕಾರಕ ಸ್ಥಾನ :** ಸ್ಥಾನದೃಷ್ಟಿಯಿಂದ ಪರಿಶೀಲಿಸಿದರೆ ವೈದ್ಯ ವೃತ್ತಿಯ ಸ್ಥಾನವಾದ ಷಷ್ಠಸ್ಥಾನವೇ ಕಾರಕವಿರುವುದರಿಂದ ಷಷ್ಠ ಸ್ಥಾನ, ಷಷ್ಠೇಶ ಬಲಾಢ್ಯರಿರಬೇಕು.

**ರಾಶಿ :** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯ ವರೇ ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ ಎಂಬ ನಿಯಮವಿದೆ. ಕಾರಣ ತನಗಾದ ತೊಂದರೆಯನ್ನು ನಿವೇದಿಸಲು ಬಾರದ. ಮಾತನಾಡಲು ಬಾರದ ಮಕ್ಕಳಿಗೆ ತಗಲಿದ ರೋಗವನ್ನು ಕಂಡುಹಿಡಿದು ಅದಕ್ಕೆ ತಕ್ಕ ಚಿಕಿತ್ಸೆಯನ್ನು ಪರಿಹಾರೋಪಾಯವನ್ನು ಸೂಚಿಸುವುದು. ಕಷ್ಟಕರ ವಿರುತ್ತದೆ. ಆದ್ದರಿಂದ ಬುದ್ಧಿ ರಾಶಿಯವರಾದ ಮಿಥುನ, ತುಲಾ, ಕುಂಭ ರಾಶಿಯವರೆ ಈ ವೃತ್ತಿಯಲ್ಲಿ ಸಫಲರಾಗುತ್ತಾರೆ. ಇವರ ನಂತರ ಸ್ತ್ರೀ ರಾಶಿಯವರಾದ ವೃಷಭ, ಕರ್ಕ, ಕನ್ಯಾ, ಮೀನ ರಾಶಿಯವರು ಯಶಸ್ವಿಯಾಗುತ್ತಾರೆ.

## ೭) ಮನೋರೋಗಗಳ ತಜ್ಞರು
### (ಸಾಯ್ಕಿಯಾಟ್ರಿಸ್ಟ್ಸ)

ವಿಶೇಷ ತಜ್ಞ (ಸ್ಪೆಶಿಯಾಲಿಸ್ಟ) ವೈದ್ಯರಲ್ಲಿ ಮನೋರೋಗಗಳ ತಜ್ಞರ ಪ್ರಾಮುಖ್ಯತೆ ಇತ್ತೀಚೆಗೆ ಬಹಳ ಬೆಳೆದಿದೆ. ಮನೋರೋಗವೆಂದರೆ ಹುಚ್ಚು ಹಿಡಿಯುವಿಕೆ, ಮತಿಗೆಡುವಿಕೆ, ಬುದ್ಧಿ ಭ್ರಮೆ. ಭ್ರಮಿಷ್ಟರೆಂದೂ ಗುಣಮುಖವಾಗುವದಿಲ್ಲವೆಂದು ಜನಸಾಮಾನ್ಯರ ಕಲ್ಪನೆಯಾಗಿತ್ತು. ಆದರೆ ಮನೋರೋಗ ಶಾಸ್ತ್ರವು ಬಹಳಷ್ಟು ಬೆಳೆದಿದ್ದು ದೈಹಿಕ ರೋಗ ಕಂಡುಹಿಡಿಯಲು ಹೇಗೆ ಕಾರಣಗಳು, ಲಕ್ಷಣಗಳು, ಪರೀಕ್ಷಾ ವಿಧಾನಗಳಿವೆಯೋ ಹಾಗೆಯೇ ಮನೋರೋಗಗಳಿಗೂ ಸಹ ಇವೆ. ದೈಹಿಕ ರೋಗಗಳಂತೆ ಮನೋರೋಗಗಳನ್ನು ಚಿಕಿತ್ಸೆ ಮಾಡಿ ಗುಣಪಡಿಸಬಹುದು

ಎಂಬ ತಿಳವಳಿಕೆ ಸುಶಿಕ್ಷಿತರಲ್ಲಿ ಬಂದಿರುವುದಲ್ಲದೆ ಈ ಶಾಸ್ತ್ರದ ಬಗೆಗೆ ವಿಶೇಷ ಪ್ರಜ್ಞೆ ಮೂಡಿದೆ.

ಜೀವನದಲ್ಲಿ ಅನೇಕ ಘಟನೆಗಳು ಮನಸ್ಸಿಗೆ ಅತೀವ ಸಂತಾಪವನ್ನು ಉಂಟು ಮಾಡುತ್ತವೆ. ಕೌಟುಂಬಿಕ ಜೀವನದಲ್ಲಿಯ ಏರುಪೇರುಗಳಿಂದಾಗಲಿ, ಉದ್ಯೋಗದಲ್ಲಿಯ ತೊಂದರೆಯಿಂದಾಗಲಿ, ಆರ್ಥಿಕ ತಾಪತ್ರಯದಿಂದಾಗಲಿ, ರಾಜಕೀಯದಲ್ಲಿಯ ಹಿನ್ನಡೆಯಿಂದಾಗಲಿ, ನೆಚ್ಚಿದವರ ದ್ರೋಹದಿಂದಾಗಲಿ ವ್ಯಾಜ್ಯದಲ್ಲಿಯ ಅಪಜಯದಿಂದಾಗಲಿ, ಚಿಕ್ಕವರಿರುವಾಗ ತಂದೆ ತಾಯಿಗಳ ವಾತ್ಸಲ್ಯದಲ್ಲಿ ಸಹೋದರ-ಸಹೋದರಿಯರ ಬಾಂಧವ್ಯದಲ್ಲಿಯ ಎಡರು ತೊಡರು, ದೊಡ್ಡವರಾದ ಮೇಲೆ ಬಾಹ್ಯ ಹಾಗೂ ಆಂತರಿಕ ಒತ್ತಡದಿಂದಾಗಲಿ ಗುರು-ಶಿಷ್ಯರ ವೈಮನಸ್ಸಿನಿಂದಾಗಲಿ ಹೀಗೆ ಅನೇಕ ಕಾರಣಗಳಿಂದಾಗಿ ಮನಸ್ಸಿಗೆ ಆಘಾತಗಳುಂಟಾಗುವ ಸನ್ನಿವೇಶಗಳಿಂದಾಗಿ ಮನೋರೋಗಗಳು ಕಾಣಿಸಿಕೊಳ್ಳುತ್ತವೆ. ಇಂದಿನ ಯಾಂತ್ರಿಕ ಯುಗದಲ್ಲಿ ಮನೋರೋಗಿಗಳ ಸಂಖ್ಯೆ ಮೊದಲಿಗಿಂತಲೂ ಹೆಚ್ಚಾಗಿದೆ. ಒಂದು ಕಡೆ ಮನೋರೋಗಗಳ ಸಂಖ್ಯೆ ಹೆಚ್ಚಾಗಿದೆ, ಇನ್ನೊಂದೆಡೆ ಮನೋರೋಗ ತಜ್ಞರಲ್ಲಿ ಚಿಕಿತ್ಸೆ ಪಡೆಯಬೇಕೆಂಬ ಅರಿವು ಜನಸಾಮಾನ್ಯರಲ್ಲಿ ಉಂಟಾಗಿದೆ. ಆದರೆ ಅದಕ್ಕೆ ತಕ್ಕಂತೆ ಮನೋರೋಗ ತಜ್ಞರ ಸಂಖ್ಯೆ ತೀರ ಕಡಿಮೆ ಇದೆ. ತಾಲೂಕಾ ಸ್ಥಳಗಳಲ್ಲಿ ಇವರ ಸಂಖ್ಯೆ ವಿರಳ; ಅಥವಾ ಇಲ್ಲವೆಂದರೂ ತಪ್ಪಿಲ್ಲ. ಜಿಲ್ಲಾ ಸ್ಥಳಗಳಲ್ಲಿ ಹಾಗೂ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಒಬ್ಬಿಬ್ಬರನ್ನು ಮಾತ್ರ ಕಾಣಬಹುದಾಗಿದೆ. ಅಂತೆಯೇ ಮನೋರೋಗಗಳ ತಜ್ಞರಾಗಲು ಅನೇಕರು ಬಯಸುತ್ತಿದ್ದಾರೆ. ಆದರೆ ಎಲ್ಲ ಮನೋರೋಗಗಳ ತಜ್ಞರು ತಮ್ಮ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ ಎಂದು ಹೇಳಲು ಬಾರದು. ಆದ್ದರಿಂದ ಫಲ ಜ್ಯೋತಿಷ್ಯದಲ್ಲಿ ಈ ವೃತ್ತಿ ಕೈಕೊಳ್ಳಲು ಜಾತಕವೆಂತಿರಬೇಕು, ಕಾರಕಗ್ರಹ, ಲಗ್ನ, ಸ್ಥಾನ, ರಾಶ್ಯಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

ಕಾರಕಗ್ರಹ : ಮನೋರೋಗಗಳ ತಜ್ಞರ ವೃತ್ತಿಯು ಸಾಮಾನ್ಯ ವೈದ್ಯ ವೃತ್ತಿಯಲ್ಲಿ ಅಂದರೆ ಫಿಜೀಸಿಯನ್ಸರಲ್ಲಿ ಬರುತ್ತದೆ. ಶಸ್ತ್ರಕ್ರಿಯಾ

ಚಿಕಿತ್ಸೆಯು ತೀರ ಕಡಿಮೆ. ಅಲ್ಲದೆ ರೋಗಿಯ ಕುಟುಂಬ ವೈದ್ಯರ (ಫೆಮಿಲಿ ಡಾಕ್ಟರ) ಸಲಹೆ-ಸೂಚನೆಯ ಮೇರೆಗೆ ನಿರ್ದೇಶನದ ಮೇರೆಗೆ (ರೆಫರ್ಡ) ಕೇಸಾಗಿ ಈ ತಜ್ಞರಲ್ಲಿ ಬರುತ್ತಾರೆ. ಒಂದು ರೀತಿಯಿಂದ ಇವರ ವೃತ್ತಿ ಸಲಹೆಗಾರಿಕೆಯ ವೃತ್ತಿಯೂ ಆಹುದು, ವಿಶಿಷ್ಟ ರೋಗ ತಜ್ಞರ (ಸ್ಪೇಶಾಲಿಸ್ಟರ) ವೃತ್ತಿಯೂ ಹೌದು. ಆದ್ದರಿಂದ ಸಲಹೆಗಾರಿಕೆಯ ವೃತ್ತಿಯ ಕಾರಕ ಗ್ರಹವಾದ ಗುರುವು ಬಲಾಢ್ಯನಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು. ಗುರುವಿನ ತರುವಾಯ ಶನಿ ಗ್ರಹವನ್ನು ಪರಿಶೀಲಿಸಬೇಕು. ಏಕೆಂದರೆ ಮಾನಸಿಕ ರೋಗಿಗಳ ಚಿಕಿತ್ಸೆಯು ದೀರ್ಘಾವಧಿ ರೋಗಗಳ (ಕ್ರೊನಿಕ್ ಡಿಸೀಜಿಸ್) ಚಿಕಿತ್ಸೆಯಲ್ಲಿ ಬರುತ್ತದೆ. ಅಲ್ಲದೆ ಈ ರೋಗಿಗಳ ಚಿಕಿತ್ಸೆಯಲ್ಲಿ ತತ್ವ ಜ್ಞಾನದ ಅಂಶವು ಇರುತ್ತದೆ. ಆದ್ದರಿಂದ ದೀರ್ಘಾವಧಿ ರೋಗಗಳ ಚಿಕಿತ್ಸೆ ಕಾರಕನೂ ತತ್ವಜ್ಞಾನ ವಿಷಯದ ಕಾರಕನೂ ಆದ ಶನಿಯು ಕೂಡ ಜಾತಕದಲ್ಲಿ ಬಲಾಢ್ಯನಿರಬೇಕಾಗುತ್ತದೆ. ಆದ್ದರಿಂದ ಗುರು-ಶನಿಯರು ಈ ವೃತ್ತಿಯ ಕಾರಕರು.

**ಲಗ್ನ :** ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ಮಿಥುನ, ಸಿಂಹ, ವೃಶ್ಚಿಕ, ಧನು, ಮೀನ ಈ ಲಗ್ನದವರು, ಅವರ ನಂತರ ವೃಷಭ, ತುಲಾ. ಮಕರ, ಕುಂಭ ಲಗ್ನದವರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

**ಕಾರಕಸ್ಥಾನ :** ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ವೈದ್ಯ ವೃತ್ತಿಯ ಸ್ಥಾನವಾದ ಷಷ್ಠಸ್ಥಾನವಂತೂ ಬಲಾಢ್ಯವಿರಲೇಬೇಕು. ಅಲ್ಲದೆ ಸಲಹೆಗಾರಿಕೆ ವೃತ್ತಿಯ ಸ್ಥಾನವಾದ ಪಂಚಮವೂ ಬಲಾಢ್ಯವಿರಬೇಕು.

**ರಾಶಿ :** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಬುದ್ಧಿ ಹಾಗೂ ವಾಯು ರಾಶಿಗಳಾದ ಮಿಥುನ, ತುಲಾ, ಕುಂಭ ರಾಶಿಗಳು ಪೂರಕವಿರುತ್ತವೆ. ಇವುಗಳ ನಂತರ ಸ್ತ್ರೀ ರಾಶಿಯವರಾದ ವೃಷಭ, ಕರ್ಕ, ಕನ್ಯಾ, ಮೀನ ರಾಶಿಗಳ ಜನರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

**ಯೋಗಗಳು :** ೧) ಈ ವೃತ್ತಿಯು ಜನರಿಗೆ ತಾಳ್ಮೆ, ಸಹನಶೀಲತೆ, ಹೊಂದಾಣಿಕೆ ಮನೋವೃತ್ತಿ ಇರಬೇಕು. ಆದ್ದರಿಂದ ಮಂಗಳನು ದುರ್ಬಲ ನಿರಬೇಕು. (೨) ಗ್ರಹಗಳು ಹೆಚ್ಚಾಗಿ ಸ್ತ್ರೀ ರಾಶಿಯಲ್ಲಿರಬೇಕು

## ೮) ಎಲವು-ಕೀಲುಗಳ ತಜ್ಞರು (ಆರ್ಥೋಪೀಡಿಕ್ಸ್)

ಹೊಸ ಹೊಸ ಸಂಶೋಧನೆಯಿಂದಾಗಿ ಅನೇಕ ರೋಗಗಳಿಗೆ ಪ್ರತಿ ಬಂಧಕ ಚುಚ್ಚು ಮದ್ದುಗಳನ್ನು ಹಾಗೂ ಅವು ಬಂದಾಗ ಅವುಗಳ ನಿವಾರಣೋ ಪಾಯಗಳನ್ನು ಕಂಡುಹಿಡಿದಿದ್ದಾರೆ. ಆದರೆ ಇಂದಿನ ಯಾಂತ್ರಿಕ ಬದುಕಿನ ಮತ್ತು ಇಂದಿನ ವಿರಾಮವಿಲ್ಲದ ಗಡಿಬಿಡಿಯ ಜೀವನದಿಂದಾಗಿ ಅಪಘಾತ ಗಳನ್ನು ತಡೆಯುಲು ಸಾಧ್ಯವೇ ಇಲ್ಲದಾಗಿದೆ. ಅಂತೆಯೇ ಎಲವು-ಕೀಲಗಳ ತಜ್ಞರ ಬೇಡಿಕೆ ಹಾಗೂ ಮಹತ್ವ ಇತ್ತೀಚಿಗೆ ಹೆಚ್ಚಾಗಿದೆ. ಆದಾಗ್ಯೂ ಎಲ್ಲ ಎಲವು-ಕೀಲಗಳ ತಜ್ಞರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆಯೆಂದು ಹೇಳಲು ಬಾರದು. ಆದ್ದರಿಂದ ಫಲಜ್ಯೋತಿಷ್ಯದಲ್ಲಿ ಈ ವೃತ್ತಿ ಕೈಕೊಳ್ಳಲು ಜಾತಕ ಹೇಗಿರಬೇಕು, ಕಾರಕ ಗ್ರಹ, ಲಗ್ನ, ಸ್ಥಾನ, ರಾಶ್ಯಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ :** ಎಲವು-ಕೀಲಗಳ ತಜ್ಞರ ವೃತ್ತಿಯು ಸರ್ಜನವೃತ್ತಿ ಯಲ್ಲಿ ಬರುವುದರಿಂದ ಸರ್ಜನ ವೃತ್ತಿಯು ಕಾರಕ ಗ್ರಹಗಳಾದ ರವಿ-ಮಂಗಳ ಬಲಾಢ್ಯರಿರಬೇಕು. ರವಿ-ಮಂಗಳರು ಸರ್ಜನ ವೃತ್ತಿಯು ಕಾರಕ ಅಷ್ಟೇ ಅಲ್ಲಾ ಅಸ್ಥಿಯ ಮೇಲೆ, ಕೀಲಗಳ ಮೇಲೆ ರವಿಯು ಪ್ರಭುತ್ವವಿದ್ದರೆ, ಸ್ನಾಯು ಹಾಗೂ ರಕ್ತದ ಮೇಲೆ ಮಂಗಳನ ಪ್ರಭುತ್ವವಿದೆ. ಆದ್ದರಿಂದ ರವಿ-ಮಂಗಳರು ಬಲಾಢ್ಯರಿರದೆ ಯಾರೂ ಯಶಸ್ವಿ ಎಲವು-ಕೀಲುಗಳ ತಜ್ಞರಾಗಲಾರರು.

**ಕಾರಕ ಲಗ್ನ :** ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ಕರ್ಕ, ಸಿಂಹ, ವೃಶ್ಚಿಕ, ಧನು ಲಗ್ನದವರು ಈ ವೃತ್ತಿಯಲ್ಲಿ ಯಶಸ್ವಿಯಾಗು

ತ್ತಾರೆ. ಇವುಗಳ ನಂತರ ವೃಷಭ, ಮಕರ ಲಗ್ನದವರು ಯಶಸ್ವಿಯಾಗು ತ್ತಾರೆ.

**ಕಾರಕ ಸ್ಥಾನ :** ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ವೈದ್ಯ ವೃತ್ತಿಯ ಸ್ಥಾನವಾದ ಷಷ್ಠಸ್ಥಾನವಂತೂ ಬಲಾಢ್ಯವಿರಲೇಬೇಕು; ಅಲ್ಲದೆ ಸರ್ಜನ ವೃತ್ತಿಯ ಸ್ಥಾನವಾದ ಲಗ್ನ, ತೃತೀಯ ಸ್ಥಾನಗಳು ಸುಸಜ್ಜಿತ ಆಸ್ಪತ್ರೆಯ ಸ್ಥಾನವಾದ ಚತುರ್ಥಸ್ಥಾನ ಕಾರಕವಿರುವುದರಿಂದ ಷಷ್ಠ, ಲಗ್ನ, ತೃತೀಯ-ಚತುರ್ಥ ಈ ಸ್ಥಾನಗಳು ಈ ಸ್ಥಾನಾಧೀಶರೂ ಬಲಾಢ್ಯರಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು.

**ರಾಶಿ :** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ಸಿಂಹ, ಧನು ಈ ರಾಶಿಯವರು ನಂತರ ವೃಶ್ಚಿಕ, ಮಕರ, ಮಿಥುನ, ತುಲಾ, ಕುಂಭ ರಾಶಿಯವರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

**ಯೋಗಗಳು :** ಎಲುವು-ಕೀಲುಗಳ ತಜ್ಞರು ತಮ್ಮ ವೃತ್ತಿಯಲ್ಲಿ ಯಶಸ್ವಿಯಾಗಲು ಎರಡು ಸಂಗತಿಗಳು ಮಹತ್ವದವಿರುತ್ತವೆ.

೧) ಗ್ರಹಗಳು ಹೆಚ್ಚಾಗಿ ಪುರುಷ ರಾಶಿಯಲ್ಲಿರಬೇಕು; ಅದರಲ್ಲಿಯೂ ಚಂದ್ರನು ಪುರುಷ ರಾಶಿಯಲ್ಲಿರಬೇಕು.

೨ ರವಿ ಮಂಗಳರು ಲಗ್ನರಾಶಿಯಲ್ಲಿರಬೇಕು, ಇಲ್ಲವೆ ಉಚ್ಚರಾಶಿ ಸ್ವಕ್ಷೇತ್ರದವರಾದರೂ ಇರಬೇಕು.

## ೯) ಪೆಥಾಲಾಜಿಸ್ಟರು

ವಿಶೇಷ ತಜ್ಞ ವೈದ್ಯರಲ್ಲಿ ಪೆಥಾಲಾಜಿಸ್ಟರ ಪ್ರಾಮುಖ್ಯತೆ ಇತ್ತೀಚಿಗೆ ಬಹಳ ಬೆಳೆದಿದೆ. ಈ ಹಿಂದೆ ಕುಟುಂಬ ವೈದ್ಯರೇ ತಮ್ಮ ಬಳಿ ಬಂದ ರೋಗಿ ಗಳನ್ನು ದರ್ಶನ-ಸ್ಪರ್ಶ-ಶ್ರವಣ-ಸಂಭಾಷಣೆ ಮೊದಲಾದ ವಿಧಾನಗಳಿಂದ ಪರೀಕ್ಷಿಸಿ ರೋಗ ಕಂಡುಹಿಡಿದು ಅದಕ್ಕೆ ತಕ್ಕ ಚಿಕಿತ್ಸೆಯನ್ನು ಕೊಡುತ್ತಿ

ದ್ದರು. ಇಂದು ಕಾಲ ಬದಲಾಗಿದೆ. ವಿಜ್ಞಾನದ ಬೆಳವಣಿಗೆಯಿಂದಾಗಿ ಹೊಸ ಹೊಸ ಸಂಶೋಧನೆಯಿಂದಾಗಿ ರಾಸಾಯನಿಕ ಪದ್ಧತಿಗಳ ಮೂಲಕ ದೇಹದ ಪ್ರತಿಯೊಂದು ಅಂಗಾಂಗಗಳಲ್ಲಿರುವ ರಕ್ತ, ಮಲಮೂತ್ರ, ಮೊದಲಾದವುಗಳನ್ನು ಪರೀಕ್ಷಿಸಿ ರೋಗಿಗೆ ತಗಲಿದ, ತಗಲಬಹುದಾದ ರೋಗದ ಮೂಲವನ್ನು ಕಂಡುಹಿಡಿಯುವುದರಲ್ಲಿ ಅಂಗಾಂಗಗಳ ಬೆಳವಣಿಗೆಯ ವೈಪರೀತ್ಯವನ್ನು ಕಂಡುಹಿಡಿಯುವ ಕೆಲಸವೇ ಪೆಥಾಲಾಜಿಸ್ಟರದು. ಇವರು ಔಷಧವನ್ನು ಕೊಡುವುದಿಲ್ಲ, ಚಿಕಿತ್ಸೆಯನ್ನು ಮಾಡುವುದಿಲ್ಲ; ಆದರೆ ರಸ, ರಕ್ತ, ಮಲಮೂತ್ರ ಮೊದಲಾದವುಗಳನ್ನು ಪರೀಕ್ಷಿಸಿ ವಿಶ್ಲೇಷಿಸಿ ಅವುಗಳ ಗುಣದೋಷಗಳನ್ನು ಕಂಡುಹಿಡಿದು ರೋಗಿಯ ಕುಟುಂಬ ವೈದ್ಯರಿಗೆ ವರದಿಕೊಡುವ ಕೆಲಸವೇ ಮುಖ್ಯವಾಗಿರುತ್ತದೆ. ಆದ್ದರಿಂದ ಫಲ ಜ್ಯೋತಿಷ್ಯದಲ್ಲಿ ಇಂಥ ವಿಶಿಷ್ಟ ವಿಶೇಷ ತಜ್ಞ ವೈದ್ಯ ವೃತ್ತಿಯ ಕಾರಕಗ್ರಹ ಲಗ್ನ ಸ್ಥಾನ ರಾಶ್ಯಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕಗ್ರಹ :** ಪೆಥಾಲಾಜಿಸ್ಟರಲ್ಲಿ ರೋಗಿಗಳು ನೇರವಾಗಿ ಬರುವುದು ಕಡಿಮೆ. ತಮ್ಮ ಕುಟುಂಬ ವೈದ್ಯರ ಸಲಹೆ-ಸೂಚನೆ-ನಿರ್ದೇಶನ ಮೇರೆಗಾಗಲಿ ಇಲ್ಲವೆ ಬೇರೆ ಬೇರೆ ವೈದ್ಯರ ಸಲಹೆ ಮೇಲಿಂದಲಾಗಲಿ ಬಂದಿರುತ್ತಾರೆ. ಅಲ್ಲದೆ ರೋಗಿಗೆ ನೇರವಾಗಿ ಚಿಕಿತ್ಸೆ ಮಾಡದೆ ರಸ, ರಕ್ತ, ಮಲ-ಮೂತ್ರಗಳನ್ನು ಪರೀಕ್ಷಿಸಿ ತಪಾಸಣೆ ವರದಿ ಕೊಡುವ ಕೆಲಸವೇ ಮುಖ್ಯವಿರುವುದರಿಂದ ಗುರು-ಶನಿಯರೇ ಈ ವೃತ್ತಿಯ ಕಾರಕ ಗ್ರಹಗಳು. ಏಕೆಂದರೆ ಪರೀಕ್ಷೆ ಹಾಗೂ ತಪಾಸಿಸುವ ಕಾರ್ಯದ ಗುಣಧರ್ಮವು ಗುರುವಿನದು ಇದ್ದರೆ, ತನಗೆ ಒಪ್ಪಿಸಿದ ಕೆಲಸವನ್ನು ಈಡೇರಿಸುವ ಸೇವಾಕಾರ ವೃತ್ತಿಯು ಶನಿಯದು. ಆದ್ದರಿಂದ ಗುರು-ಶನಿಯರು ಬಲಾಢ್ಯರಿರುವವರೇ ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

**ಕಾರಕ ಲಗ್ನ :** ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ಸಿಂಹ, ವೃಶ್ಚಿಕ, ಧನು ಲಗ್ನದವರು ಅನಂತರ ವೃಷಭ, ಕುಂಭ ಲಗ್ನದವರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

**ಕಾರಕ ಸ್ಥಾನ :** ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಈ ಲೆಬೋರೇಟರಿಯಲ್ಲಿ ಪ್ರಯೋಗ ಕರ್ಮಶಾಲೆ (ಲೆಬೋರೇಟರಿ)ಯಲ್ಲಿ ರಸ, ರಕ್ತ, ಮಲಮೂತ್ರಗಳನ್ನು ಪರೀಕ್ಷಿಸಿ ಪರಿಶೀಲಿಸುವ ಸ್ಥಾನವೆಂದರೆ ತೃತೀಯ ಸ್ಥಾನ. ಆದರೆ ತೃತೀಯ ಸ್ಥಾನ, ತೃತಿಯೇಶ ಬಲಾಢ್ಯರಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು. ತೃತೀಯದ ನಂತರ ಸುಸಜ್ಜಿತ ಆಸ್ಪತ್ರೆಯ ಸ್ಥಾನವಾದ ಚತುರ್ಥವೂ ಕಾರಕವಿರುತ್ತದೆ. ತೃತೀಯ, ಚತುರ್ಥ ಸ್ಥಾನಗಳು ಹಾಗೂ ಈ ಸ್ಥಾನಾಧೀಶರೂ ಬಲಾಢ್ಯರಿರ ಬೇಕಾಗುತ್ತದೆ.

**ರಾಶಿ :** ರಾಶಿ ದೃಷ್ಟಿಯಿಂದ ನೋಡಿದರೆ ಪರೀಕ್ಷೆ ಹಾಗೂ ತಪಾಸಣೆ ವೃತ್ತಿಯ ಗುಣಧರ್ಮದ ಮಿಥುನ, ತುಲಾ, ಕುಂಭ ರಾಶಿಯವರು ಹೇಳಿದ ಕೆಲಸವನ್ನು ಮಾಡುವ ವೃಷಭ, ಕರ್ಕ, ಕನ್ಯಾ, ಮೀನ ರಾಶಿಯ ವರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

## ii) ವೈದ್ಯ ವೃತ್ತಿಯ ಆಧಾರಿತ ವೃತ್ತಿಯವರು

### ಅರ್ಥಾತ್ ಅರೆ-ವೈದ್ಯಕೀಯ ವೃತ್ತಿಯವರು (ಪ್ಯಾರಾ ಮೆಡಿಕಲ್ಸ್)

ವೈದ್ಯಕೀಯ ವೃತ್ತಿಯ ಆಧಾರಿತ ವೃತ್ತಿಯವರು ಅನೇಕರಿದ್ದು ಇಲ್ಲಿ ಮುಖ್ಯವಾದ ನಾಲ್ಕು ವೃತ್ತಿಯವರ ವಿಷಯವಾಗಿ ಮಾತ್ರ ವಿವರಿಸಲಾಗಿದೆ.

೧) ಸೂಲಗಿತ್ತಿಯವರು (ಮಿಡ್‌ವಾಯಿವ್ಸ) ಹಾಗೂ ದಾಯಿ ವರ್ಗದವರು (ನರ್ಸಿಂಗ್) ವೃತ್ತಿಯವರು.

೨) ಫಿಜಿಯೋಥೆರಪಿಸ್ಟರು.

೩) ವಿವಿಧ ತಂತ್ರಜ್ಞರು (ಟೆಕ್ನೀಶಿಯನ್ಸ)

೪) ಔಷಧೀ ವ್ಯಾಪಾರಸ್ಥರು (ಫಾರ್ಮಾಸಿಸ್ಟರು)

ಇದಲ್ಲದೆ ಆಪ್ಟೀಸಿಯನ್ಸ (ಕನ್ನಡಕ-ಚಾಳಿಸ್) ಔಷಧ ಮಾರಾಟದ ಪ್ರತಿನಿಧಿಗಳು ಮೊದಲಾದ ಅರೆ-ವೈದ್ಯಕೀಯ ವೃತ್ತಿಯವರು ಅನೇಕ ರಿದ್ದಾರೆ.

## ೧) ಸೂಲಗಿತ್ತಿಯರು

ಸೂಲಗಿತ್ತಿಯರ ವೃತ್ತಿ ಬಹು ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿದೆ. ಪ್ರತಿಯೊಂದು ಜನನದ ಹಿಂದೆ ಇವರ ಹಸ್ತ ಹಾಗೂ ಕೈಚಳಕ ಇದ್ದೇ ಇರುತ್ತದೆ. ಕೂಸು ಹುಟ್ಟುವ ಕಾಲಕ್ಕೆ ಪ್ರತಿ ಮನೆಯಲ್ಲಿ ಇವರಿಗೆ ಪ್ರವೇಶ ಇದ್ದೇ ಇರುತ್ತದೆ. ಇವರು ಕುಟುಂಬದ ಹಿರಿಯ ಅಜ್ಜಿಯಂದಿರಾಗಿರಬಹುದು; ಇಲ್ಲವೆ ಈ ಸೇವೆಯಲ್ಲಿ ಸಫಲತೆಯನ್ನು ಕಾಣುವ ಮನೋವೃತ್ತಿಯಿರುವ, ಓಣಿಯಲ್ಲಿಯ ಅಥವಾ ಊರಲ್ಲಿಯ ಹಿರಿಯ ಅನುಭವಿಕ ಮಹಿಳೆಯರೇ ಈ ಕೆಲಸವನ್ನು ಮಾಡುತ್ತಿರುವವರಾಗಿರಬಹುದು. ಆದರೆ ಈಗಿನಂತೆ ಶಾಸ್ತ್ರೀಯವಾಗಿ ವೈಜ್ಞಾನಿಕವಾಗಿ ತರಬೇತಿ ಪಡೆದ ಸೂಲಗಿತ್ತಿಯ ವೃತ್ತಿಯನ್ನು ಕೈಕೊಂಡವರು ಈ ಹಿಂದೆ ಇದ್ದಿಲ್ಲ. ಅಲ್ಲದೆ ಸಾರ್ವಜನಿಕ ಆರೋಗ್ಯ ರಕ್ಷಣೆಯ ಕಾರ್ಯಕ್ರಮವು ಸ್ವತಂತ್ರ ಭಾರತದಲ್ಲಿ ಸರಕಾರದ ದೃಷ್ಟಿಯಲ್ಲಿ ಆದ್ಯತೆ ಪಡೆದಾಗ ಹುಟ್ಟಿದ ಹಲವಾರು ಕಾರ್ಯಕ್ರಮಗಳಲ್ಲಿ ಇದೂ ಕೂಡ ಒಂದು. ಆದ್ದರಿಂದಲೇ ಈ ತರಬೇತಿ ಆಕಾಂಕ್ಷಿಗಳಿಗೆ ಸರಕಾರದವರು ಸಹಾಯಧನ (ಸ್ಟೈಪೆಂಡ) ನೀಡಿ ಪ್ರತಿ ಜಿಲ್ಲಾ ಸ್ಥಳಗಳಲ್ಲಿ ತರಬೇತಿ ಕೇಂದ್ರಗಳನ್ನು, ತರಬೇತಿ ಶಾಲೆಗಳನ್ನು ಪ್ರಾರಂಭಿಸಿದ್ದಾರೆ. ಈ ಸೂಲಗಿತ್ತಿಯ ವೃತ್ತಿಯ ತರಬೇತಿಯು ರಾಷ್ಟ್ರಕ್ಕೆ, ರಾಜ್ಯಕ್ಕೆ ಸಾಕಷ್ಟು ಪ್ರಯೋಜನಕರವಾಗಿದೆ ಆದ್ದರಿಂದಲೇ ಪ್ರಸವ ಸಮಯದಲ್ಲಿಯ ಮಾತೆಯರ, ಶಿಶುಗಳ ಮರಣದ ಪ್ರಮಾಣ ಕಡಿಮೆಯಾಗಿದೆಯೆನ್ನಬಹುದು.

ಈ ಹಿಂದೆ ಏಕತ್ರ ಕುಟುಂಬ ಪದ್ಧತಿ ಪ್ರಚಲಿತದಲ್ಲಿತ್ತು. ಮನೆಯ ಹಿರಿಯರೇ ಮನೆಯಲ್ಲಿಯೇ ಹೆರಿಗೆಯ ಕೆಲಸ ನೋಡಿಕೊಳ್ಳುತ್ತಿದ್ದರು. ಈಗಿನಂತೆ ಪ್ರತ್ಯೇಕವಾದ ಸುಸಜ್ಜಿತವಾದ ಹೆರಿಗೆ ದವಾಖಾನೆಯಾಗಲಿ ಆಸ್ಪತ್ರೆಯಾಗಲಿ ಇದ್ದಿಲ್ಲ. ಅಲ್ಲದೆ ಆಸ್ಪತ್ರೆಯಲ್ಲಿ ಹೆರಿಗೆ ಮಾಡಿಸಿಕೊಳ್ಳುವ ಪ್ರವೃತ್ತಿಯೂ ಇದ್ದಿಲ್ಲ, ಇಂದಿಗೂ ಸಹ ಪುರ-ಪಟ್ಟಣಗಳಲ್ಲಿಯೂ ಗ್ರಾಮೀಣ ಪ್ರದೇಶಗಳಲ್ಲಿಯೂ ಮನೆಯಲ್ಲಿಯೇ ಹೆರಿಗೆ ಮಾಡಿಸಿಕೊಳ್ಳುವವರ ಸಂಖ್ಯೆ ಸಾಕಷ್ಟಿದೆ. ಇದಕ್ಕೆ ಹಲವಾರು ಕಾರಣಗಳಿವೆ. ಇವುಗಳ

ವಿವರಣೆ ಇಲ್ಲಿ ಅನಗತ್ಯ. ಆದ್ದರಿಂದಲೆ ಸೂಲಗಿತ್ತಿಯರ ಅಗತ್ಯ ಹಾಗೂ ಮಹತ್ವ ಬಹಳಷ್ಟು ಇದೆ. ಇಷ್ಟೇ ಅಲ್ಲ, ಈ ಪ್ರಪಂಚ ಇರುವ ವರೆಗೂ ಇವರ ಮಹತ್ವ ಇದ್ದೇಇರುತ್ತದೆ. ಮೊದಲೇ ಇವರ ಅಗತ್ಯ ಬಹಳಷ್ಟು ಇರುವಾಗ ಈಗಂತೂ ಅವರು ಶಾಸ್ತ್ರೀಯವಾಗಿ ತರಬೇತಿ ಪಡೆದಿರುವಾಗ ಕೇಳಬೇಕೆ? ಆದಾಗ್ಯೂ ಎಲ್ಲ ಸೂಲಗಿತ್ತಿಯವರ ವೃತ್ತಿ ಚನ್ನಾಗಿ ನಡೆಯುತ್ತದೆ ಎಂದು ಹೇಳಲು ಬಾರದು. ಆದ್ದರಿಂದ ಫಲ ಜ್ಯೋತಿಷ್ಯದಲ್ಲಿ ಈ ವೃತ್ತಿ ಕೈಕೊಳ್ಳಲು ಜಾತಕ ಎಂತಿರಬೇಕು, ಕಾರಕ ಗ್ರಹ ಲಗ್ನ ಸ್ಥಾನ ರಾಶ್ಯಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕಕ ಗ್ರಹ :** ಪ್ರಸೂತಿ ತಜ್ಞ ವೈದ್ಯ ವೃತ್ತಿಯ ಕಾರಕ ಗ್ರಹಗಳಾದ ಮಂಗಳ, ರವಿ, ಶುಕ್ರ ಚಂದ್ರರೇ ಸೂಲಗಿತ್ತಿಯ ವೃತ್ತಿಗಳ ಕಾರಕ ಗ್ರಹಗಳು. ಆದ್ದರಿಂದ ಈ ನಾಲ್ಕೂ ಗ್ರಹಗಳು ಬಲಾಢ್ಯವಿರಲೇಬೇಕು.

**ಸ್ಥಾನ :** ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ತೃತೀಯ ಸ್ಥಾನವೇ ಕಾರಕವಿರುತ್ತದೆ. ಏಕೆಂದರೆ ಸೂಲಗಿತ್ತಿಯ ವೃತ್ತಿಯಲ್ಲಿ ಎಲ್ಲ ಕೆಲಸಗಳನ್ನು ಅವರೇ ಸ್ವತಃ ಮಾಡಬೇಕಾಗುವುದರಿಂದ ಜಾತಕದ ತೃತೀಯ ಸ್ಥಾನ, ತೃತೀಯೇಶ ಬಲಾಢ್ಯರಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗಲಾರರು. ತೃತೀಯದ ನಂತರ ಲಗ್ನ, ಲಗ್ನೇಶರ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ.

**ಲಗ್ನ :** ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ಕರ್ಕ, ಸಿಂಹ, ವೃಶ್ಚಿಕ, ಧನು ಈ ಲಗ್ನದವರೇ ಈ ವೃತ್ತಿಯಲ್ಲಿ ಅಧಿಕ ಪ್ರಮಾಣದಲ್ಲಿರುವುದು ಕಂಡುಬರುತ್ತದೆ.

**ರಾಶಿ :** ರಾಶಿದೃಷ್ಟಿಯಿಂದ ಪರಿಶೀಲಿಸಿದರೆ ಚಂದ್ರನು ಪುರುಷ ರಾಶಿಯಲ್ಲಿರಬೇಕು, ಇಲ್ಲದೆ ಬಲಾಢ್ಯನಾಗಿರಬೇಕು

## ಯೋಗಗಳು :

೧) ಅನೇಕ ಗ್ರಹಗಳು ಪುರುಷ ರಾಶಿಯಲ್ಲಿರಬೇಕು.

೨) ಲಗ್ನ, ಲಗ್ನೇಶ, ತೃತೀಯ, ತೃತೀಯೇಶರು ಬಲಾಢ್ಯರಿರಬೇಕು.

೩) ರವಿ–ಮಂಗಳರು ಬಲಾಢ್ಯರಿರಬೇಕು, ಕನಿಷ್ಟ ಪಕ್ಷ ದುರ್ಬಲ ರಿರಕೂಡದು.

೨) ದಾಯಿಯರು: ದಾಯಿಯರ ಉದ್ಯೋಗ ಸ್ವತಂತ್ರ ಉದ್ಯೋಗಸ್ಥರ ವೃತ್ತಿಯಲ್ಲಿ ಬರುವುದಿಲ್ಲ. ಸರಕಾರಿ ಇಲ್ಲವೆ ಸಹಕಾರಿ ಆಸ್ಪತ್ರೆಯಲ್ಲಿ ಯಾಗಲಿ ಖಾಸಗಿ ದವಾಖಾನೆಯಲ್ಲಿಯಾಗಲಿ ನೌಕರಿ ಮಾಡುವುದೇ ಹೆಚ್ಚು. ನೌಕರಿಯ ವಿಷಯವಾಗಿ ನಮ್ಮ ಉದ್ಯೋಗ ಜ್ಯೋತಿಷ್ಯ ಗ್ರಂಥದ ಮೊದಲನೇ ಭಾಗದಲ್ಲಿ ಪುಟ ೧೬೨ ರಿಂದ ೧೬೪ರ ವರೆಗೆ ವಿವರವಾಗಿ ವಿವರಿಸಿದೆ. ಇನ್ನು ಕೆಲವರು ನಿವೃತ್ತಿಯ ನಂತರ ಇಲ್ಲವೆ ನೌಕರಿಯಲ್ಲಿ ವ್ಯತ್ಯಯ ಉಂಟಾದಾಗ ಸೂಲಗಿತ್ತಿಯ ವೃತ್ತಿಯನ್ನು ಕೈಕೊಳ್ಳುವರು.

## ೨) ಫಿಜಿಯೋಥೆರಪಿಸ್ಟರು

ವೈದ್ಯಕೀಯ ವೃತ್ತಿಯ ಆಧಾರಿತ ವೃತ್ತಿಯಲ್ಲಿ (ಪ್ಯಾರಾ ಮೆಡಿಕಲ್) ಫಿಜಿಯೋಥೆರಪಿಸ್ಟರ ವೃತ್ತಿಗೆ ಇತ್ತೀಚೆಗೆ ಬಹಳ ಮಹತ್ವ ಬಂದಿದೆ, ಇದಕ್ಕೆ ಹಲವಾರು ಕಾರಣಗಳಿವೆ. ಮೊದಲನೇದಾಗಿ, ವೈದ್ಯಕೀಯ ಪದವೀಧರ ಕೋರ್ಸಿಗೆ ಪ್ರವೇಶ ದೊರೆಯದಿದ್ದಾಗ ಅಲ್ಪಾವಧಿಯ ಡಿಪ್ಲೋಮಾ ಕೋರ್ಸಿನ ಪೂರ್ತಿಗೆ ವೈದ್ಯರಂತೆ ಸ್ವತಂತ್ರವಾಗಿ ಈ ವೃತ್ತಿ ಕೈಕೊಳ್ಳಬಹುದಾಗಿದೆ. ಎರಡನೇದಾಗಿ, ಇತ್ತೀಚೆಗೆ. ಅಪಘಾತಗಳ ಸಂಖ್ಯೆ ಮೊದಲಿಗಿಂತಲೂ ಹೆಚ್ಚಾಗಿರುವುದರಿಂದ ಎಲವು–ಕೀಲುಗಳ ತಜ್ಞ ವೈದ್ಯರು ಇವರ ಸಹಾಯ-ಸಹಕಾರವನ್ನು ಬಯಸುತ್ತಿದ್ದಾರೆ. ಅಲ್ಲದೆ ಅರ್ಧಾಂಗ ವಾಯು (ಪ್ಯಾರಾಲಿಸಿಸ) ಮೊದಲಾದ ರೋಗಗಳಿಂದ ಬಳಲುತ್ತಿರುವ ರೋಗಿಗಳಿಗಂತೂ ಇವರ ಉಪಚಾರ ಬೇಕೇಬೇಕು. ಹೀಗಾಗಿ ಇವರ ವೃತ್ತಿ ಚನ್ನಾಗಿ ನಡೆಯುತ್ತದೆ. ಆದಾಗ್ಯೂ ಎಲ್ಲ ಫಿಜಿಯೋಥೆರಪಿಸ್ಟರ ವೃತ್ತಿ ಚನ್ನಾಗಿ ನಡೆಯುತ್ತದೆಯೆಂದು ಹೇಳಲು ಬಾರದು. ಆದ್ದರಿಂದ ಫಲಜ್ಯೋತಿಷ್ಯದಲ್ಲಿ ಈ ವೃತ್ತಿ ಕೈಕೊಳ್ಳಲು ಜಾತಕ ಎಂತಿರಬೇಕು. ಕಾರಕಗ್ರಹ–ಸ್ಥಾನ–ಲಗ್ನ–ರಾಶ್ಯಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ :** ಫಿಜಿಯೋಥೆರಪಿಸ್ಟರ ವೃತ್ತಿಯೆಂದರೆ ಒಂದು ರೀತಿಯ ವ್ಯಾಯಾಮ ಶಿಕ್ಷಕ ವೃತ್ತಿ ಇದ್ದಂತೆ. ಆದ್ದರಿಂದ ಶಿಕ್ಷಕ ವೃತ್ತಿಯ ಕಾರಕ ಗ್ರಹವಾದ ಗುರುವಂತೂ ಬಲಾಢ್ಯನಿರಬೇಕು. ಅಲ್ಲದೆ ವ್ಯಾಯಾಮ ಕಾರಕ ಗ್ರಹಗಳಾದ ರವಿ, ಮಂಗಳರೂ ಬಲಾಢ್ಯರಿರಬೇಕು.

**ಸ್ಥಾನ :** ಈ ವೃತ್ತಿಯಲ್ಲಿ ಯಶಸ್ವಿಯಾಗಲು ಜಾತಕನು ಸ್ವತಃ ಸದೃಢ ಪ್ರಕೃತಿಯವನಿರಬೇಕು. ಆದ್ದರಿಂದ ಫಿಜಿಯೋಥೆರಪಿಸ್ಟರ ತನು ಸ್ಥಾನ ಅಂದರೆ ಲಗ್ನ ಹಾಗೂ ಲಗ್ನೇಶರಂತೂ ಬಲಾಢ್ಯರಿರಬೇಕು. ಅಲ್ಲದೆ ಈ ವೃತ್ತಿಯವರು ಎಲ್ಲ ಕೆಲಸವನ್ನು ಸ್ವತಃ ಮಾಡಬೇಕಾಗುವುದರಿಂದ ತೃತೀಯ ಸ್ಥಾನ, ತೃತಿಯೇಶರು ಬಲಾಢ್ಯರಿರದೆ ಯಾರೂ ಈವೃತ್ತಿಯಲ್ಲಿ ಯಶಸ್ವಿಯಾಗರು.

**ಲಗ್ನ :** ಲಗ್ನದ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ಕರ್ಕ, ಸಿಂಹ, ವೃಶ್ಚಿಕ, ಧನು, ಮೀನ ಈ ಲಗ್ನದವರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

**ರಾಶಿ :** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ಮಿಥುನ. ಸಿಂಹ, ವೃಶ್ಚಿಕ, ಧನು ಮಕರ, ಕುಂಭ ಈ ರಾಶಿಯವರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

**ಯೋಗಗಳು :** ಅನೇಕ ಗ್ರಹಗಳು ಪುರುಷ ರಾಶಿಯಲ್ಲಿರಬೇಕು; ಚಂದ್ರನಂತೂ ಪುರುಷ ರಾಶಿಯಲ್ಲಿರಬೇಕು,

೨) ರವಿ-ಮಂಗಳ-ಗುರು ಬಲಾಢ್ಯರಿರಬೇಕು.

೩) ಲಗ್ನ, ಲಗ್ನೇಶ, ತೃತೀಯ, ತೃತೀಯೇಶರು ಬಲಾಢ್ಯರಿರಬೇಕು.

## ೩) ವಿವಿಧ ತಂತ್ರಜ್ಞರು (ಟೆಕ್ನೀಶಿಯನ್ಸ್)

ವೈದ್ಯಕೀಯ ವೃತ್ತಿಯ ಆಧಾರಿತ (ಪ್ಯಾರಾ ಮೆಡಿಕಲ್) ವೃತ್ತಿಯವರಲ್ಲಿ ಎಸ್. ಎಸ್. ಎಲ್. ಸಿ ಹಾಗೂ ಪಿ. ಯುಸಿಯಲ್ಲಿ. ವಿಜ್ಞಾನವಿಷಯಕ ಸಂಯೋಜನೆಯ ವಿಷಯಗಳನ್ನು ತೆಗೆದುಕೊಂಡು ಅರ್ಥಾತ್ ಅಲ್ಪಾ

ವಧಿಯ ಶಿಕ್ಷಣ ಪಡೆದ ವಿವಿಧ ತಂತ್ರಜ್ಞರು ಅನೇಕರಿರುತ್ತಾರೆ. ಆದರೆ ಅವರಲ್ಲಿ ಬಹು ಜನರು ವೈದ್ಯಕೀಯ ಇಲ್ಲವೆ ಆರೋಗ್ಯ ಖಾತೆಯಲ್ಲಿ ಯಾಗಲಿ, ಸಹಕಾರಿ ಇಲ್ಲವೆ ಖಾಸಗೀ ಆಸ್ಪತ್ರೆಯಲ್ಲಿಯಾಗಲಿ ನೌಕರಿ ಮಾಡುವುದೇ ಹೆಚ್ಚು. ಆದಾಗ್ಯೂ ಡೆಂಟಲ್, ಮೆಕ್ಯಾನಿಕ್, ಆಪ್ಟೀಸಿಯನ್ಸ್, ಫೆಥಾಲಜಿ ಟೆಕ್ನೀಶಿಯನ್ ಮೊದಲಾದ ಕೆಲವೆ ತಂತ್ರಜ್ಞನರು ಮಾತ್ರ ಸ್ವತಂತ್ರ ವೃತ್ತಿಯನ್ನು ಕೈಕೊಳ್ಳುತ್ತಾರೆ. ಆದ್ದರಿಂದ ಈ ವಿಧ ಸ್ವತಂತ್ರ ವೃತ್ತಿಯ ತಂತ್ರಜ್ಞಾನದ ಕಾರಕ ಗ್ರಹ, ಲಗ್ನ, ಸ್ಥಾನ, ಇತ್ಯಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ :** ಈ ಬಗೆಯ ತಂತ್ರಜ್ಞರಲ್ಲಿಗೆ ರೋಗಿಗಳು ನೇರ ವಾಗಿ ಬರುವುದು ಕಡಿಮೆ. ತಮ್ಮ ಕುಟುಂಬ ವೈದ್ಯರ ಸಲಹೆ-ಸೂಚನೆಯ ಮೇರೆಗೆ ಆಗಲಿ, ವಿವಿಧ ರೋಗಗಳ ತಜ್ಞರ (ಸ್ಪೆಶಾಲಿಸ್ಟರ) ನಿರ್ದೇಶನದ ಮೇಲೆಯಾಗಲಿ ಇವರ ಬಳಿಗೆ ಬರುತ್ತಾರೆ. ಇಂತು ಇವರದು ಸಂಪೂರ್ಣ ಸ್ವತಂತ್ರ ವೃತ್ತಿ ಇರುವುದಿಲ್ಲ. ಆದ್ದರಿಂದ. ಶನಿಯೇ ಈ ವೃತ್ತಿಯ ಕಾರಕನು. ತನಗೆ ಒಪ್ಪಿಸಿದ ಕೆಲಸವನ್ನು ಕೈಕೊಳ್ಳುವ ಪ್ರವೃತ್ತಿಯು ಶನಿಯ ಗುಣ ಧರ್ಮವು. ಆದ್ದರಿಂದ ಶನಿಯೆ ಈ ವೃತ್ತಿಯ ಕಾರಕ ಗ್ರಹ. ಶನಿಯ ತರುವಾಯ ಬುಧನು ಈ ವೃತ್ತಿಯ ಕಾರಕ ಗ್ರಹ. ಶನಿ-ಬುಧರು ಬಲಾಢ್ಯ ರಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು.

**ಕಾರಕ ಸ್ಥಾನ :** ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ತೃತೀಯ ಸ್ಥಾನವೆ ಕಾರಕ ಸ್ಥಾನವು. ಏಕೆಂದರೆ ತಂತ್ರಜ್ಞರು ಎಲ್ಲ ಕೆಲಸಗಳನ್ನು ಸ್ವತಃ ಮಾಡಬೇಕಾಗುತ್ತದೆ. ಅಲ್ಲದೆ ಕರ್ಮಶಾಲೆಯಲ್ಲಿಯ (ಲೆಬೋರೇಟರಿಯ) ಕೆಲಸಕ್ಕೆ ತೃತೀಯ ಸ್ಥಾನವೇ ಕಾರಕವು. ಆದ್ದರಿಂದ ತೃತೀಯ ಸ್ಥಾನ, ತೃತಿಯೇಶರು ಬಲಾಢ್ಯರಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು.

**ಲಗ್ನ :** ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಕರ್ಕ, ಕನ್ಯಾ, ತುಲಾ, ಮಕರ, ಮೀನ ಈ ಲಗ್ನದವರೇ ಈ ವೃತ್ತಿಯಲ್ಲಿ ಹೆಚ್ಚಾಗಿರುವುದು ಕಂಡುಬರುತ್ತದೆ.

**ರಾಶಿ :** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ, ಕರ್ಕ, ಕನ್ಯಾ, ಮೀನ ಈ ರಾಶಿಯವರೇ ಈ ವೃತ್ತಿಯಲ್ಲಿ ಹೆಚ್ಚಾಗಿರುವುದು ಕಂಡುಬರುತ್ತದೆ.

**ಯೋಗಗಳು :** (೧) ಅನೇಕ ಗ್ರಹಗಳು ಸ್ತ್ರೀ ರಾಶಿಯಲ್ಲಿರುತ್ತವೆ. ಚಂದ್ರನಂತೂ ಸ್ತ್ರೀ ರಾಶಿಯಲ್ಲಿರಲೇಬೇಕು.

(೨) ತೃತೀಯ ಸ್ಥಾನ, ತೃತೀಯೇಶ, ಶನಿ, ಬುಧ ಈ ನಾಲ್ಕರಲ್ಲಿ ಎರಡಾದರೂ ಪೂರಕವಿರಬೇಕು.

## ೪) ಔಷಧಿ ವ್ಯಾಪಾರಸ್ಥರು(ಫಾರ್ಮಾಕಾಲಾಜಿಸ್ಟರು)

ಔಷಧ ವ್ಯಾಪಾರ ವೃತ್ತಿಯ ಬಗೆಗೆ ವ್ಯಾಪಾರಸ್ಥರ ವಿಷಯವಾಗಿ ಇದೇ ಗ್ರಂಥದ ೬ನೇ ಅಧ್ಯಾಯದಲ್ಲಿ ಬರೆಯಲಾಗುತ್ತದೆ. ಔಷಧಿ ವ್ಯಾಪಾರಸ್ಥರ ವೃತ್ತಿಯಬಗೆಗೂ ಕೂಡ ಅದೇ ಅಧ್ಯಾಯದಲ್ಲಿ ಬರೆಯಬಹುದಾಗಿತ್ತು. ಆದರೆ ಔಷಧೀ ವ್ಯಾಪಾರಸ್ಥರ ವೃತ್ತಿಯು ವೈದ್ಯಕೀಯ ವೃತ್ತಿಯ ಆಧಾರಿತ ವೃತ್ತಿಯಲ್ಲಿ ಬರುವುದರಿಂದ ಅದನ್ನು ಇದೇ ಅಧ್ಯಾಯದಲ್ಲಿ ಬರೆಯಲಾಗಿದೆ. ಇದು ಅಲ್ಲದೆ ಔಷಧ ವ್ಯಾಪಾರವು ಉಳಿದ ವ್ಯಾಪಾರಕ್ಕಿಂತ ಭಿನ್ನವಿದೆ. ಕಿರಾಣಿ, ಕಾಯಿಪಲ್ಲೆ, ಸ್ಟೇಶನರಿ, ಬಟ್ಟೆ ಮೊದಲಾದ ವ್ಯಾಪಾರದಂತೆ ಯಾರು ಬೇಕಾದರು ಈ ವ್ಯಾಪಾರ ಮಾಡಲಾರರು. ಬಿ-ಫಾರ್ಮಾ ಇಲ್ಲವೆ ಡಿ-ಫಾರ್ಮಾದ ಶಿಕ್ಷಣ ಕೋರ್ಸನ್ನು ಮುಗಿಸಿದ ಜನರು ಮಾತ್ರ ಔಷಧ ವ್ಯಾಪಾರ ಮಾಡಲು ಅರ್ಹತೆ ಪಡೆಯುತ್ತಾರೆ.

ಔಷಧೀ ವ್ಯಾಪಾರಿಯು ಮೇಲೆ ಬಹು ದೊಡ್ಡ ಜವಾಬುದಾರಿ ಇರುತ್ತದೆ. ಆವನು ತನ್ನಿಚ್ಛೆಯಂತೆ ಬೇಕಾದ ಔಷಧವನ್ನು ಬೇಕಾದ ಹಾಗೆ ಮಾರಲಾರನು. ಹಲವು ಔಷಧಿಗಳಲ್ಲಿ ಜನರ ಜೀವನ-ಮರಣದ ಸಮಸ್ಯೆ ಅಡಕವಾಗಿರುತ್ತದೆ. ಅಂತೆಯೇ ಬಿ-ಫಾರ್ಮಾ ಇಲ್ಲವೆ ಡಿ-ಫಾರ್ಮಾ ಶಿಕ್ಷಣ ಪಡೆದವರು ಮಾತ್ರ ಔಷಧ ವ್ಯಾಪಾರ ಮಾಡಲು ಅರ್ಹತೆ ಪಡೆಯುತ್ತಾರೆ.

ಈ ವೃತ್ತಿಯು ಜನಸಾಮಾನ್ಯರಿಗೆ ಬಹು ಉಪಯುಕ್ತವಿರುವುದಲ್ಲದೆ ಗೌರವಪೂರ್ಣವೂ ಆಗಿರುತ್ತದೆ. ಇದು ಜನತೆಯ ಕಲ್ಯಾಣ ಹಾಗೂ ಆರೋಗ್ಯದ ಹೊಣೆಗಾರಿಕೆಯುಳ್ಳದ್ದೂ ಇರುತ್ತದೆ. ಹೀಗೆ ಜನತಾ ಜನಾರ್ದನ ಸೇವೆ ಮಾಡುವ ಸುದೈವಿಗಳೆಂದರೆ ಈ ವೃತ್ತಿಯವರು; ಅಂತೆಯೇ ಔಷಧೀ ವ್ಯಾಪಾರಸ್ಥರ ವೃತ್ತಿಗೆ ಬಹಳ ಮಹತ್ವ ಬಂದಿದೆ. ಇದಕ್ಕೆ ಹಲವಾರು ಕಾರಣಗಳಿವೆ. ಮೊದಲನೇದಾಗಿ ವೈದ್ಯಕೀಯ ಪದವೀಧರ ಕೋರ್ಸಿಗೆ ಪ್ರವೇಶ ದೊರೆಯದಿದ್ದಾಗ ಈ ಕೋರ್ಸನ್ನಾದರೂ ಪೂರ್ತಿಗೊಳಿಸಿ ಸ್ವತಂತ್ರ ವೃತ್ತಿ ಕೈಕೊಳ್ಳಬೇಕೆಂಬವರು ಕೆಲವರಿರುತ್ತಾರೆ. ಆನುವಂಶಿಕವಾಗಿ ಬಂದ ಔಷಧ ವ್ಯಾಪಾರವನ್ನು ಮುಂದುವರಿಸಿಕೊಂಡು ಹೋಗಬೇಕೆಂಬ ಅಭಿಲಾಷಿಗಳೂ ಹಲವರಿರುತ್ತಾರೆ. ಉಳಿದೆಲ್ಲ ವ್ಯಾಪಾರಕ್ಕಿಂತ ಔಷಧಿ ವ್ಯಾಪಾರವು ಹೆಚ್ಚು ಲಾಭದಾಯಕವಾದದ್ದು. ಏಕೆಂದರೆ ಔಷಧ ಸೇವಿಸಬೇಕೆಂಬ ಬಳಸಬೇಕೆಂಬ ಪ್ರವೃತ್ತಿ ಈಗ ಜನರಲ್ಲಿ ಹೆಚ್ಚಾಗಿದೆ. ಅಂತೆಯೇ ಅನೇಕರು ಔಷಧ ವ್ಯಾಪಾರ ಮಾಡಲು ಬಯಸುತ್ತಾರೆ. ಎಲ್ಲ ಔಷಧ ವ್ಯಾಪಾರಸ್ಥರ ವ್ಯಾಪಾರ ಚನ್ನಾಗಿ ನಡೆಯುತ್ತಿದೆಯೆಂದು ಹೇಳಲು ಬಾರದು. ಆದ್ದರಿಂದ ಫಲಜ್ಯೋತಿಷ್ಯದಲ್ಲಿ ಔಷಧ ವ್ಯಾಪಾರದ ಕಾರಕ ಗ್ರಹ, ಲಗ್ನ, ಸ್ಥಾನ, ಇತ್ಯಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ :** ಔಷಧಿ ವ್ಯಾಪಾರಸ್ಥರ ಕಾರಕ ಗ್ರಹಗಳೆಂದರೆ ಚಂದ್ರ, ಶನಿ, ಬುಧ ಈ ಮೂರು ಗ್ರಹಗಳು ಬಲಾಢ್ಯರಿರದೆ ಯಾರೂ ಈ ವ್ಯಾಪಾರದಲ್ಲಿ ಯಶಸ್ವಿಯಾಗರು. ಏಕೆಂದರೆ ವನಸ್ಪತಿ ಹಾಗೂ ಔಷಧಿಗೆ ಚಂದ್ರನು, ಔಷಧಿ ಶಾಸ್ತ್ರಕ್ಕೆ ಶನಿ-ಚಂದ್ರರೂ ಕಾರಕರು. ಇದರಂತೆ ಯಾವುದೇ ವ್ಯಾಪಾರ ಮಾಡಲು ಬುಧನ ಬಲಾಬಲವನ್ನಂತೂ ಪರಿಶೀಲಿಸಲೇ ಬೇಕಾಗುತ್ತದೆ.

**ಕಾರಕ ಲಗ್ನ :** ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಮಕರ, ಮೀನ ಈ ಲಗ್ನದವರು ಹೆಚ್ಚಾಗಿರುವುದು ಕಂಡುಬರುತ್ತದೆ.

**ಸ್ಥಾನ :** ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ನೈಸರ್ಗಿಕ ವಸ್ತುಗಳ ಉದ್ಯೋಗದ ಸ್ಥಾನವಾದ ದಶಮವನ್ನಂತೂ ಪರಿಶೀಲಿಸಬೇಕು; ಅಲ್ಲದ

ವ್ಯಾಪಾರಿಯ ಸ್ಥಾನವಾದ ದ್ವಿತೀಯ ಸ್ಥಾನವನ್ನು ಪರಿಶೀಲಿಸಬೇಕು. ಆದ್ದರಿಂದ ದಶಮ, ದಶಮೇಶ, ದ್ವಿತೀಯ,ದ್ವಿತೀಯೇಶರು ಬಲಾಢ್ಯರಿರದೆ ಯಾರೂ ಯಶಸ್ವಿಯಾಗರು.

**ರಾಶಿ :** ರಾಶಿ ದೃಷ್ಟಿಯಿಂದ ನೋಡಿದರೆ ಮಿಥುನ, ತುಲಾ, ಕುಂಭ ರಾಶಿಯವರು ಆ ನಂತರ ವೃಷಭ, ಕರ್ಕ, ಕನ್ಯಾ, ಮೀನ ರಾಶಿಯವರು ಯಶಸ್ವಿಯಾಗುತ್ತಾರೆ.

## ೩) ವಾಸ್ತುಶಿಲ್ಪಿ (ಆರ್ಕಿಟೆಕ್ಟ)

ಮಾನವನ ಮೂಲಭೂತ ಅವಶ್ಯಕತೆಗಳಾದ ಅನ್ನ–ಆಹಾರ–ವಸ್ತ್ರಗಳ ನಂತರ ವಸತಿ ಅತಿ ಮುಖ್ಯವಾದ ವಿಷಯವಾಗಿದೆ. ಫಲಜ್ಯೋತಿಷ್ಯವನ್ನು ಕಥನ ಮಾಡುವ ಫಲಜ್ಯೋತಿಷಿಗಳಿಗೂ ವಸತಿಯ ವಿಷಯವಾಗಿ ಅನೇಕ ಪ್ರಕಾರದ ಪ್ರಶ್ನೆ-ಸಮಸ್ಯೆಗಳಿಗೆ ಉತ್ತರ ಕೊಡಬೇಕಾದ ಪ್ರಸಂಗ ಬರುತ್ತದೆ. ಬಾಡಿಗೆ ಮನೆ ಯಾವಾಗ ಸಿಗುತ್ತದೆ ಎಂಬುದು ಸರ್ವೇ ಸಾಮಾನ್ಯವಾಗಿ ಅನೇಕರ ಪ್ರಶ್ನೆಯಾಗಿರುತ್ತದೆ; ಅದರಲ್ಲಿಯೂ ಮುಂಬಯಿ-ಬೆಂಗಳೂರು-ಧಾರವಾಡ-ಹುಬ್ಬಳ್ಳಿಗಳಂಥ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ವಾಸಿಸುತ್ತಿರುವವರ ನಿತ್ಯದ ಪ್ರಶ್ನೆಯಾದರೆ ಬಾಡಿಗೆದಾರ–ಮಾಲೀಕರ ಪರಸ್ಪರ ದೋಷಾರೋಪಣೆಯ ಪ್ರಶ್ನೆಗಳನ್ನು ಅನೇಕರು ಕೇಳುತ್ತಾರೆ. ಮತ್ತೆ ಕೆಲವರು ಈಗಿದ್ದ ಮನೆ ತಮಗೆ ಓಂ ಇದೆಯೋ ಅಥವಾ ಯಾರಿಂದಾದರೂ ತೊಂದರೆಯಾಗುವದೆ ಎಂದು ವಿಚಾರಿಸುವವರೂ ಇದ್ದಾರೆ. ಮತ್ತೆ ಕೆಲವರು ತಾವು ಕಟ್ಟಿಸಿದ ಮನೆ ಇಲ್ಲವೆ ಅಂಗಡಿಗೆ ಯೋಗ್ಯ ಬಾಡಿಗೆದಾರರು ಸಿಗುವರೆ ಎಂದು ವಿಚಾರಿಸುವವರು ಕೆಲವರಿದ್ದಾರೆ. ಇದ್ದ ಬಾಡಿಗೆದಾರ ಯಾವಾಗ ಬಿಡುತ್ತಾರೆ ಎಂದು ಹಲವರು ವಿಚಾರಿಸುತ್ತಾರೆ. ಮನೆ ಕೊಳ್ಳುವ ಇಲ್ಲವೆ ಕಟ್ಟುವ ಯೋಗ ತಮ್ಮ ಭಾಗ್ಯದಲ್ಲಿ (ಜಾತಕದಲ್ಲಿ) ಇದೆಯೋ ಇದ್ದರೆ ಯಾವ ವರುಷದಲ್ಲಿ ಎಂದು ವಿಚಾರಿಸುವವರು ಅನೇಕರು. ಅದರಲ್ಲಿಯೂ ಪ್ರತಿಯೊಬ್ಬ ಗೃಹಿಣಿಯೂ, ತನ್ನದೇ ಆದ ಸ್ವತಂತ್ರ ಮನೆ ಬಯಸುತ್ತಿರುವದು ಸ್ವಾಭಾವಿಕ. ಇನ್ನು ಕೆಲವರು ತೊಂದರೆಯಿಂದ ಅರ್ಧಕ್ಕೇ ನಿಂತ ಕಟ್ಟಡ ಯಾವಾಗ ಪೂರ್ತಿಯಾಗುತ್ತದೆ ಎಂದು ವಿಚಾರಿಸುತ್ತಾರೆ. ಹೀಗೆ ವಸತಿಗೆ ಸಂಬಂಧಿಸಿದ ಪ್ರಶ್ನೆ-ಸಮಸ್ಯೆಗಳಿಗೆ ಉತ್ತರ ಕೊಡಬೇಕಾಗು

ತ್ತದೆ. ಈ ಎಲ್ಲ ಪ್ರಶ್ನೆ ಮಾಲಿಕೆಗಳಿಗೆ ಹೇಗೆ ಉತ್ತರ ಕೊಡಬೇಕು ಎಂಬುದು ಈ ಗ್ರಂಥದ, ಈ ಪ್ರಕರಣದ ಉದ್ದೇಶವಿರುವದಿಲ್ಲ, ಹಾಗೂ ಈ ಪುಸ್ತಕದ ವ್ಯಾಪ್ತಿಗೂ ಬರುವುದಿಲ್ಲ. ಆದರೆ ಯಾರೊಬ್ಬರು ಯಾವುದೊಂದು ಕಟ್ಟಡ ಕಟ್ಟುವ ಪೂರ್ವದಲ್ಲಿ ಅದರಲ್ಲಿಯೂ ವಾಸಿಸುವುದಕ್ಕಾಗಿ ಮನೆಯನ್ನು ಕಟ್ಟುವ ಪೂರ್ವದಲ್ಲಿ ವಾಸ್ತುಶಿಲ್ಪಿಗಳ ಸಲಹೆ ಪಡೆಯುವದಕ್ಕೂ ಪೂರ್ವ ದಲ್ಲಿ ಜ್ಯೋತಿಷಿಗಳ ಸಲಹೆ ಪಡೆಯುವರು. ನೂತನ ಗೃಹನಿರ್ಮಾಣ ಮಾಡುವಾಗ ಇಲ್ಲವೆ ಯಾವುದೊಂದು ಕಟ್ಟಡ ವಿಷಯವಾಗಿ ಮನೆಯ ಯಜಮಾನರು ಎರಡು ಮುಖ್ಯ ಪ್ರಶ್ನೆಗಳನ್ನು ವಿಚಾರಿಸುತ್ತಾರೆ.

(೧) ಕಟ್ಟಡದ ಪಾಯಾ ತೆಗೆಯಲು ಹಾಗೂ ಚೌಕಟ್ಟು ಇಡಲು ಶುಭ ದಿನ ಹಾಗೂ ಕಟ್ಟಡ ಪೂರ್ತಿಯಾದ ಬಳಿಕ ಗೃಹಪ್ರವೇಶ ಹಾಗೂ ವಾಸ್ತು ಶಾಂತಿಗಾಗಿ ಶುಭ ದಿನ ಅರ್ಥಾತ್ ಮುಹೂರ್ತಗಳ ವಿಚಾರವನ್ನು ಎಲ್ಲ ಪಂಚಾಂಗಗಳಲ್ಲಿ ಬರೆದಿರುತ್ತಾರೆ; ಹಾಗೂ ಫಲಜ್ಯೋತಿಷಿಗಳು ಈ ಪ್ರಶ್ನೆಗೆ ಸುಲಭವಾಗಿ ಉತ್ತರ ಕೊಡುತ್ತಾರೆ.

(೨) ಕಟ್ಟಡ ಕಟ್ಟುವಾಗ ಯಾವ ಯಾವ ದಿಕ್ಕಿಗೆ ಯಾವ ಯಾವ ಕೋಣೆಗಳನ್ನು ನಿರ್ಮಿಸಬೇಕು? ಉದಾಹರಣೆಗೆ: ಮನೆಯ ಮುಂದಿನ ಬಾಗಿಲು ಯಾವ ದಿಕ್ಕಿಗೆ ಇರಬೇಕು, ಅಡುಗೆಮನೆ ಹಾಗೂ ದೇವರಮನೆ ಯಾವ ದಿಕ್ಕಿಗೆ ಇರಬೇಕು ಮೊದಲಾದ ಪ್ರಶ್ನೆಗಳನ್ನು ವಿಚಾರಿಸುತ್ತಾರೆ.

ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ಮನೆ ಹೇಗೆ ಕಟ್ಟಬೇಕು ಎಂಬುವಕ್ಕೆ ಕೆಲ ನಿಯಮಗಳಿದ್ದು ಅವುಗಳ ವಿವರಣೆ ಈ ಕೆಳಗಿನಂತಿದೆ.

(೧) ಮನೆಯ ಮುಂಬಾಗಿಲು ದಕ್ಷಿಣ ದಿಕ್ಕಿನ ಹೊರತಾಗಿ ಉಳಿದ ಯಾವುದೇ ದಿಕ್ಕಿಗಿದ್ದರೂ ಶುಭವು. ಒಂದುವೇಳೆ ದಕ್ಷಿಣ ದಿಕ್ಕಿಗೇ ಮನೆಯ ಮುಂಬಾಗಿಲು ಇಡುವುದು ಅನಿವಾರ್ಯವಿದ್ದಲ್ಲಿ ತುಸು ಬಲಗಡೆ ಇಲ್ಲವೆ ಎಡಗಡೆಯ ಮಗ್ಗಲಿನಿಂದ ಓಡಾಡುವಂತೆ ಮಾಡಬೇಕು. ಅಲ್ಲದೆ ಎದುರಿನ ಸಾಲಿನಲ್ಲಿ ಎದುರುಗಡೆ ಮನೆ, ಅಂಗಡಿ ಇಲ್ಲವೆ ಯಾವುದೇ ಕಟ್ಟಡವಿದ್ದು ದಾದರ ದಕ್ಷಿಣ ದಿಕ್ಕಿನ ದೋಷ ಪರಿಹಾರವಾಗುತ್ತದೆ.

(೨) ಉತ್ತರ ಹಾಗೂ ಪೂರ್ವದ ಮಧ್ಯದಲ್ಲಿ ಅಂದರೆ ಈಶಾನ್ಯ ದಿಕ್ಕಿಗೆ ದೇವರ ಮನೆ ಇರಬೇಕು.

(೩) ಪೂರ್ವ ಹಾಗೂ ದಕ್ಷಿಣ ದಿಕ್ಕಿನ ಮಧ್ಯವೆಂದರೆ ಆಗ್ನೇಯ ದಿಕ್ಕಿಗೆ ಅಡುಗೆಮನೆ, ಕೋಠಿಕೋಣೆ (ಸ್ಟೋರ ರೂಮು), ನೀರಿನಸಂಗ್ರಹ ವಿರಬೇಕು.

ಉತ್ತರ ಹಾಗೂ ಪಶ್ಚಿಮದ ಮಧ್ಯದಲ್ಲಿ ಅಂದರೆ ವಾಯವ್ಯ ದಿಕ್ಕಿಗೆ ಮನೆಯ ಯಜಮಾನರ ಕೋಣೆ, ಬೆಲೆಯುಳ್ಳ ವಸ್ತು-ಒಡವೆ ಇಡುವ (ಟ್ರೆಜರಿ ಇಡುವ) ಖೋಲಿ ಇರಬೇಕು.

(೪) ದಕ್ಷಿಣ ಹಾಗೂ ಪಶ್ಚಿಮದ ನಡುವೆ ಅಂದರೆ ನೈಋತ್ಯದ ಕಡೆಗೆ ಗೋಡೆ ಇಲ್ಲವೆ ಖೋಲಿ ಅಥವಾ ಮನೆಯ ಮಗ್ಗಲು ಮುಂದೆ ಹಾದಿರಬೇಕು (ಪ್ರೊಜೆಕ್ಷನ್), ಅಂದರೆ ನೈಋತ್ಯದ ಕಡೆಗೆ ಮನೆಯ ಪ್ರಾಮುಖ್ಯತೆ ಇರಬೇಕು.

(೫) ಅಡುಗೆಮನೆ ಗೋಡೆ ಒಳಗೆ ಇರಬೇಕು.

(೬) ಐಮೂಲಿ ಮನೆ ಇರಬಾರದು.

ಮೇಲೆ ಬರೆದ ಆರೂ ಸಂಗತಿಗಳಿಗೆ ಅನುಗುಣವಾಗಿ ಮನೆ ಕಟ್ಟಿದರೆ ಮನೆಯ ಯಜಮಾನರಿಗೆ ಗೃಹಸೌಖ್ಯ ಸಿಗುತ್ತದೆ, ಹಾಗೂ ಕಟ್ಟಿದಕ್ಕೆ ಯಾವ ತೊಂದರೆ ಬರುವುದಿಲ್ಲ. ಇದಲ್ಲದೆ ಆಯಾ ಕಟ್ಟಡದ ಗೃಹದಾಯವನ್ನು ತೆಗೆದು ಹೊಸ ಕಟ್ಟಡವನ್ನು ಕಟ್ಟಬೇಕು ಗೃಹದಾಯಹನ್ನು ಹೇಗೆ ತೆಗೆಯಬೇಕೆಂಬುದನ್ನು ಪಂಚಾಂಗ ವಿವರಿಸುತ್ತದೆ.

ಇದು, ಹೊಸದಾಗಿ ಮನೆ ಕಟ್ಟುವವರು ಯಾವ ಯಾವ ದಿಕ್ಕಿಗೆ ಯಾವ ಯಾವ ಕೋಣೆಗಳ ಬಾಗಿಲುಗಳನ್ನು ಏರ್ಪಡಿಸಬೇಕು ಎಂಬುದರ ಕುರಿತು ವಿವರಿಸಿದ್ದಾಯಿತು. ಆದರೆ ಕೆಲವರು ಕಟ್ಟಿದ ಮನೆಯನ್ನೇ ಕೊಳ್ಳುವದುಂಟು. ಅದಲ್ಲದೆ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಹಲವರು ೨-೩ ಕೋಣೆಗಳ, ೧-೨ ಕೋಣೆಗಳ ಸಣ್ಣಸಣ್ಣ ಮನೆಯಲ್ಲಿ ವಾಸಿಸುವರು. ಯಾವುದೇ ಮನೆಯ ಈಶಾನ್ಯ ದಿಕ್ಕಿಗೆ ಇಲ್ಲವೆ ಪೂರ್ವಕ್ಕೆ, ಉತ್ತರಕ್ಕೆ

ದೇವರ ಮನೆ, ಆಗ್ನೆಯ ಅಡುಗೆ ಮನೆ, ವಾಯುವ್ಯ ದಿಕ್ಕಿಗೆ ಬೆಲೆಯುಳ್ಳ ವಸ್ತುಗಳನ್ನಿಡುವ ಕಪಾಟ–ಟ್ರೆಜರಿ ಇಟ್ಟರೂ ನಡೆಯುತ್ತದೆ.

ಈ ವರೆಗೆ ವಾಸಿಸುವದಕ್ಕೆ ಕಟ್ಟಬೇಕಾದ ಮನೆಯ ವಿಷಯವಾಗಿ ವಿವರಿಸಿದ್ದಾಯಿತು. ಆದರೆ ಗಿರಣಿ, ಕಾರಖಾನೆ, ವರ್ಕಶಾಪ್, ಮಶೀನ ಶಾಪ್, ಗ್ಯಾರೇಜ, ಅಂಗಡಿ, ಹೊಟೇಲ, ಬೋರ್ಡಿಂಗ್, ಲಾಜಿಂಗ್ ಮೊದಲಾದ ಉದ್ಯಮಗಳಿಗಾಗಿ ಕಟ್ಟಬೇಕಾಗಿರುವ ಕಟ್ಟಡಗಳವಿಷಯವಾಗಿ ವಿವೇಚಿಸುವಾ.

ಯಾವದೊಂದು ಉದ್ಯಮದ ಕಟ್ಟಡದಲ್ಲಿ, ಆದರಲ್ಲಿಯೂ ಕಾರಖಾನೆ ಕಟ್ಟಡದಲ್ಲಿ ನಾಲ್ಕು ವಿಭಾಗಗಳಿರುತ್ತವೆ,

೧ ಆಡಳಿತ ವಿಭಾಗದ ಕೋಣೆ,
೨ ಕಚ್ಚಾ ಸಾಮಗ್ರಿಗಳ (ಸ್ಟೋರ ರೂಮ) ಕೋಣೆ,
೩ ಉತ್ಪಾದನಾ, (ಪ್ರೊಡಕ್ಷನ್) ಕೋಣೆ),
೪ ಮಾರಾಟಕ್ಕೆ ತಯಾರಾದ ವಸ್ತುಗಳ ಸಂಗ್ರಹದ ಕೋಣೆ,

ಈ ನಾಲ್ಕು ಮುಖ್ಯ ಕೋಣೆಗಳ ಕಟ್ಟಡವಿರುತ್ತದೆ.

ಇವಲ್ಲದೆ ಲೆಬೋರೇಟರಿ ಕೋಣೆ, ಸಂಶೋಧನಾ ಹಾಗೂ ಅಭಿವೃದ್ಧಿ ವಿಭಾಗದ ಕೋಣೆ, ಹಣಕಾಸಿನ ವಿಲೇವಾಟಿನ ಟ್ರೇಜರಿ ಕೋಣೆ ಹೀಗೆ ವಿಶಿಷ್ಟ ಉದ್ದೇಶದ ಕೋಣೆಗಳು ಬೇರೆ ಬೇರೆ ಇದ್ದು, ಅವುಗಳ ಬಾಗಿಲು ಯಾವ ಯಾವ ದಿಕ್ಕಿಗೆ ಇದ್ದರೆ ಶುಭ ಎಂಬುದನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

೧ ಆಡಳಿತ ವಿಭಾಗದ ಇಲ್ಲವೆ ಮಾಲಕರು ಇಲ್ಲವೆ ವರಿಷ್ಠ ಅಧಿಕಾರಿ ಇರುವ ಕೋಣೆಯು ಪೂರ್ವಕ್ಕೆ ಇದ್ದರೆ ಶುಭವು,

೨ ಉತ್ಪಾದನೆಗೆ ಸಂಬಂಧಿಸಿದ ಮಶಿನರಿ ಇಡುವ ಸ್ಥಳ ಉತ್ತರಕ್ಕೆ ಇದ್ದರೆ ಶುಭವು.

೩ ಯಾವನೊಂದು ಮಶಿನರಿ ಶಾಪ, ರಿಪೇರಿಯ ಕೆಲಸ ಇಲ್ಲವೆ

ವರ್ಕ ಶಾಪ, ಮಶೀನ ಶಾಪ ಪಶ್ಚಿಮ ಇಲ್ಲವೆ ದಕ್ಷಿಣ ದಿಕ್ಕಿಗೆ ಇದ್ದರೆ ಶುಭವು.

೪ ಮಾರಾಟಕ್ಕೆ ತಯಾರಾದ ವಸ್ತುಗಳ ಸಂಗ್ರಹದ ಕೋಣೆಗೆ ಗೋಡೌನ ಪೂರ್ವ ಇಲ್ಲವೆ ಉತ್ತರಕ್ಕೆ ಇರಬೇಕು.

ಇವು ಸಾಮಾನ್ಯ ನಿಯಮಗಳು, ಇದಲ್ಲದೆ ಆಯಾ ವ್ಯಕ್ತಿಗಳ ಜಾತಕ ಗಳಿಗೆ ಶುಭಾಶುಭ ದಿಕ್ಕುಗಳು ಇರುತ್ತವೆ. ಉದಾಹರಣೆಗೆ : ಮೇಷ, ಸಿಂಹ, ಧನು ಈ ಮೂರು ರಾಶಿಗಳು ಪೂರ್ವದಿಕ್ಕಿಗೂ, ವೃಷಭ, ಕನ್ಯಾ, ಮಕರ ದಕ್ಷಿಣ ದಿಕ್ಕಿಗೂ, ಮಿಥುನ, ತುಳಾ ಕುಂಭ, ಪಶ್ಚಿಮ ದಿಕ್ಕಿಗೂ, ಕರ್ಕ, ವೃಶ್ಚಿಕ, ಮೀನ ಉತ್ತರ ದಿಕ್ಕಿಗೂ ಬಲಿಷ್ಠವಿರುತ್ತವೆ. ಲಗ್ನ ಕುಂಡಲಿಯಲ್ಲಿ ಚತುರ್ಥ ಸ್ಥಾನವು ಬಲಾಢ್ಯವಿರುವ ರಾಶಿಯ ದಿಕ್ಕಿನ ಕಡೆ ಜಾತಕನ ಉದ್ಯೋಗ ಕೈಕೊಳ್ಳಬೇಕು, ಇಲ್ಲವೆ ಚತುರ್ಥ ಸ್ಥಾನವಿರುವ ರಾಶಿಯ ದಿಕ್ಕಿನ ಕಡೆ ಉದ್ಯಮದ ಮಾಲಕನು ಆಡಳಿತದ ಕಚೇರಿಯನ್ನು ಪ್ರಾರಂಭಿಸಬೇಕು.

ಹೀಗೆ ಜ್ಯೋತಿಷಿಗಳ ಸಲಹೆ ಪಡೆದು ಇದರಂತೆ ಗೃಹ ನಿರ್ಮಾಣದ ನಕ್ಷೆ ತಯಾರಿಸಲು ವಾಸ್ತುಶಿಲ್ಪಿಗಳನ್ನು ಕೇಳಿಕೊಳ್ಳುತ್ತಾರೆ.

ಬುದ್ಧಿಜೀವಿಗಳ ವೃತ್ತಿಗಳಲ್ಲಿ ಡಾಕ್ಟರ, ವಕೀಲಿ ವೃತ್ತಿಗಳ ತರುವಾಯ ವಾಸ್ತುಶಿಲ್ಪಿಗಳ ವೃತ್ತಿಗೆ ಇತ್ತೀಚೆಗೆ ಬಹಳ ಪ್ರಾಮುಖ್ಯತೆ ಬಂದಿದೆ. ಇದಕ್ಕೆ ಅನೇಕ ಕಾರಣಗಳಿವೆ. ಮೊದಲನೇದಾಗಿ ನಮ್ಮ ದೇಶದಲ್ಲಿ ಜನಸಂಖ್ಯೆಗನು ಗುಣವಾದಿ ವಸತಿ ಸೌಲಭ್ಯ ಇರುವದಿಲ್ಲ. ಅಲ್ಲದೆ ಈ ಹಿಂದೆ ಏಕತ್ರ ಕುಟುಂಬ ಪದ್ಧತಿ ಪ್ರಚಲಿತದಲ್ಲಿತ್ತು. ಕುಟುಂಬದಲ್ಲಿಯ ಎಲ್ಲರೂ ಒಂದೇ ಮನೆಯಲ್ಲಿ ವಾಸಿಸುತ್ತಿದ್ದರು. ಮನೆಯ ಯಜಮಾನರೇ (ಹಿರಿಯರೇ) ವಾಸ್ತುಶಿಲ್ಪಿಗಳಾಗಿದ್ದರು. ಒಂದಿಷ್ಟು ಜಾಗೆ ತುಸು ಹಣ ದೊರೆತರೆ ಸಾಕು, ಅವರು ತಮ್ಮದೇ ಆದ ನಕ್ಷೆಯನ್ನು ತಯಾರಿಸಿ ಊರೊಳಗಿನ ಉಪ್ಪಾರರನ್ನು ಗೌಂಡಿ–ಮೇಸ್ತ್ರಿ ಬಡಿಗರನ್ನು ಕರೆತಂದು ಈ ಮನೆ ಹೀಗೆ ಕಟ್ಟಬೇಕು, ಆ ಖೋಲಿ ಈ ದಿಕ್ಕಿಗೆ ಹೀಗಿರಬೇಕು ಎಂದು ನಿರ್ದೇಶಿಸುತ್ತಿದ್ದರು. ಇಂದು

ಕಾಲ ಬದಲಾಗಿದೆ. ಏಕತ್ರ ಕುಟುಂಬ ನೋಡಲು ಸಿಗುವುದೇ ಅಪರೂಪ. ಇಷ್ಟೇ ಅಲ್ಲ, ಮದುವೆಯಾದ ಕೂಡಲೇ ಮಕ್ಕಳೆಲ್ಲ ಪ್ರತ್ಯೇಕ ಮನೆ ಬಯಸು ತ್ತಿದ್ದಾರೆ. ಇರುವ ಜಾಗದಲ್ಲಿಯೇ ಹೊಸದಾಗಿ ಮನೆ ಕಟ್ಟಬೇಕಾಗುತ್ತದೆ; ಇಲ್ಲವೆ ಬೆಳೆಸಬೇಕಾಗುತ್ತದೆ. ಅಂತೆಯೇ ವಾಸ್ತುಶಿಲ್ಪಿಗಳ ಸಹಾಯ-ಸಹಕಾರ ಮೊದಲಿಗಿಂತ ಈಗ ಹೆಚ್ಚಾಗಿರುತ್ತದೆ. ಹಾಗೆ ನೋಡಿದರೆ ಕಳೆದ ೨೦-೩೦ ವರುಷಗಳಿಗಿಂತಲೂ ಈಗ ವಸತಿ ನಿರ್ಮಾಣಕರ ಸಂಖ್ಯೆ ಹೆಚ್ಚಾಗಿದೆ. ಅದ ಕ್ಕಾಗಿಯೇ ಪ್ರತ್ಯೇಕವಾದ ನಿಗಮ, ಖಾತೆಗಳನ್ನು ರಾಜ್ಯ ಸರಕಾರದವರು ಕೇಂದ್ರ ಸರಕಾರದವರು ರಚಿಸಿದ್ದಾರೆ. ದೇಶದಲ್ಲಿ ಅಸಂಖ್ಯ ಗೃಹನಿರ್ಮಾಣ ಮಂಡಳಿಗಳು, ಗೃಹಸಹಕಾರಿ ಸಂಸ್ಥೆಗಳು ತಲೆಯೆತ್ತಿವೆ. ವಸತಿಹೀನ ದುರ್ಬಲ ವರ್ಗದವರಿಗೆ ಉಚಿತ ಮನೆಗಳನ್ನು ಉಚಿತ ನಿವೇಶನಗಳನ್ನು ಹಂಚಲಾಗು ತ್ತದೆ. ಪುರ-ಪಟ್ಟಣಗಳಲ್ಲಿ ಹೊಸ ಹೊಸ ಬಡಾವಣೆಗಳು ನಿರ್ಮಾಣ ವಾಗಹತ್ತಿವೆ.

೨೧ನೇ ಶತಮಾನದತ್ತ ದಾಪುಗಾಲು ಹಾಕುತ್ತಿರುವ ಸಂದರ್ಭದಲ್ಲಿ ವಸತಿ ಕೊರತೆಯನ್ನು ನೀಗಲು ೧೯೮೭ನೇ ವರುಷವನ್ನು ವಸತಿ ವರುಷ (Year of Shelter) ವೆಂದು ಘೋಷಿಸಲಾಗಿದೆ. ಅದಕ್ಕಾಗಿ ಪ್ರತ್ಯೇಕ ವಾದ ಬ್ಯಾಂಕನ್ನು ತೆರೆಯುವವರಿದ್ದಾರೆ. ಮನೆ ಕಟ್ಟುವವರಿಗೆ ಸಾಲಸೌಲಭ್ಯ ವನ್ನು ಹೆಚ್ಚಿಸಿದ್ದಾರೆ. ಒಂದೇ ಶಬ್ದದಲ್ಲಿ ಹೇಳಬೇಕೆಂದರೆ ಯುದ್ಧೋಪಾದಿ ಯಲ್ಲಿ ಕೆಲಸವನ್ನು ಹಮ್ಮಿಕೊಂಡಿದ್ದಾರೆ. ಅಂತೆಯೇ ವಾಸ್ತುಶಿಲ್ಪಿಗಳ ಪಾತ್ರ ಅತ್ಯಂತ ಮಹತ್ವದ್ದಾಗಿದೆ.

ವಸತಿ ನಿರ್ಮಾಣ ಒಂದು ಕಲೆಯಾಗಿ ಬೆಳೆದುಬಂದಿದೆ. ನಲ, ನೀಲ, ಮಯಾ, ವಿಶ್ವಕರ್ಮರಂಥ ಪುರಾಣಪುರುಷರು ವಾಸ್ತುಶಿಲ್ಪಿಗಳೆಂದು ವಿಖ್ಯಾತ ರಾಗಿದ್ದಾರೆ. ವಾಸ್ತುಶಿಲ್ಪಿ ತನ್ನ ಅನುಭವವೇದ್ಯವಾದ ಪಾಂಡಿತ್ಯದಿಂದ ಮನೆ ಕಟ್ಟುವವರ ಆರ್ಥಿಕ ಸ್ಥಿತಿ, ದೊರೆಯುವ ಸ್ಥಳಾವಕಾಶ, ಪರಿಸರದ ಕೂಲಂಕುಷ ವಿಶ್ಲೇಷಣೆ ಮಾಡಿ ಯೋಗ್ಯವಾದ ವಿನ್ಯಾಸದ ನಕ್ಷೆ ತಯಾರಿಸಿ ಮೇಲ್ವಿಚಾರಣೆ ಮಾಡಿ ಸೂಕ್ತ ಸಲಹೆಗಳನ್ನಿತ್ತು ಸಾಧನಮೂಲಗಳ ಸದುಪ ಯೋಗ ಮಾಡುತ್ತಾನೆ.

ಭರದಿಂದ ಬೆಳೆಯುತ್ತಿರುವ ಅವಶ್ಯಕತೆಗಳಾದ ವಿದ್ಯಾಲಯಗಳು, ಯಂತ್ರಾಗಾರಗಳು (ಗಿರಣಿ-ಕಾರಖಾನೆಗಳು), ಗುಡಿ-ಗೋಪುರಗಳು, ಶೈತ್ಯಾಗಾರಗಳು, ಕಲ್ಯಾಣಮಂಟಪಗಳು, ಹಾಟೇಲಗಳು ಮನರಂಜನೆಗೋಸ್ಕರ ಸಿನೇಮಾ ಮಂದಿರಗಳು,ಕ್ರೀಡಾಂಗಣಗಳು ಇವುಗಳ ನಿರ್ಮಾಣ ಕೆಲಸದಲ್ಲೂ ವಾಸ್ತುಶಿಲ್ಪಿಗಳ ಪಾತ್ರ ಬಹಳಷ್ಟಿದೆ.

ಯಾವುದೊಂದು ಕಟ್ಟಡ ನಿರ್ಮಾಣಕ್ಕೆ ಮೊಟ್ಟ ಮೊದಲು ಬೇಕಾಗುವುದು ಭೂಮಿ. ನಮ್ಮ ದೇಶದಲ್ಲಿ ಜನಸಂಖ್ಯೆಗೆ ಅನುಗುಣವಾಗಿ ಭೂಮಿ ಸಾಕಷ್ಟಿಲ್ಲ. ಈ ಭೂಮಿಯ ಕೊರತೆಯನ್ನು ನೀಗಲು ಇರುವ ಸ್ಥಳದ ಪರಮಾವಧಿ ಉಪಯೋಗ ಮಾಡಲು ಇಂದು ಗಗನಚುಂಬಿ ಕಟ್ಟಡಗಳು ಬರಹತ್ತಿವೆ. ಈ ಕಟ್ಟಡಗಳನ್ನು ಯೋಗ್ಯ ಸ್ಥಳದಲ್ಲಿ ಕಟ್ಟಬೇಕಾಗುತ್ತದೆ. ನೀರು ಹಾಗೂ ನಾಗರಿಕ ಅವಶ್ಯಕತೆಗಳನ್ನು ಒದಗಿಸಲು ನಗರ ಯೋಜನೆಗಳ ಮೇರೆಗೆ ನಡೆಯಬೇಕು. ಈ ಬೃಹತ್ ಗಾತ್ರದ ಕಾರ್ಯಕ್ರಮದಲ್ಲಿ ವಾಸ್ತುಶಿಲ್ಪಿಗಳ ಮಹತ್ವ ಬಹಳಷ್ಟಿದೆ. ಅಂತೆಯೇ ಅನೇಕರು ವಾಸ್ತುಶಿಲ್ಪಿಗಳ ವೃತ್ತಿಯನ್ನು ಕೈಕೊಳ್ಳಲು ಬಯಸುತ್ತಾರೆ. ಆದಾಗ್ಯೂ ಎಲ್ಲ ವಾಸ್ತುಶಿಲ್ಪಿಗಳ ವೃತ್ತಿ ಚನ್ನಾಗಿರುತ್ತದೆ ಎಂದು ಹೇಳಲುಬಾರದು. ಆದ್ದರಿಂದ ಫಲ ಜ್ಯೋತಿಷ್ಯದಲ್ಲಿ ವಾಸ್ತುಶಿಲ್ಪಿ ವೃತ್ತಿ ಕೈಕೊಳ್ಳಲು ಜಾತಕ ಎಂತಿರಬೇಕು, ಕಾರಕ ಗ್ರಹ-ಲಗ್ನ-ಸ್ಥಾನ-ರಾಶ್ಯಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ :** ವಾಸ್ತುಶಿಲ್ಪ ವೃತ್ತಿಯ ಕಾರಕಗ್ರಹಗಳೆಂದರೆ ಶುಕ್ರ, ಚಂದ್ರ, ಬುಧ, ಕುಜ, ಶನಿ ಗ್ರಹಗಳು. ಏಕೆಂದರೆ ಈ ವೃತ್ತಿಯವರ ಮುಖ್ಯ ಕೆಲಸವೆಂದರೆ ಕಟ್ಟಡಗಳ ನಕ್ಷೆ ತಯಾರಿಸುವಿಕೆ (Design of Houses and orientation),ಸ್ಥಳ ಗೊತ್ತುಪಡಿಸುವಿಕೆ, ಅಂದಾಜ ಪತ್ರ ತಯಾರಿಸುವಿಕೆ, ನಗರ ಯೋಜನಾ ರೂಪರೇಷೆಗಳನ್ನು ಪರಿಶೀಲಿಸುವಿಕೆ (TownPlanning) ಇವು ಮುಖ್ಯ ಕೆಲಸವಿರುವದರಿಂದ ಶುಕ್ರ, ಚಂದ್ರ, ಬುಧ, ಶನಿ, ಕುಜರು ಬಲಾಢ್ಯರಿರಲೇಬೇಕು. ಅದರಲ್ಲಿಯೂ ಶುಕ್ರ-ಚಂದ್ರರಂತೂಬಲಾಢ್ಯರಿರಲೇಬೇಕು. ಏಕೆಂದರೆ ವಾಸ್ತುಶಿಲ್ಪಿಗಳು ಒಂದು ರೀತಿಯಿಂದ

ಕಲಾಕಾರರಿದ್ದಂತೆ. ಆದ್ದರಿಂದ ಕಲಾ ಕಾರಕಗ್ರಹವಾದ ಶುಕ್ರನ ಬಲಾಬಲಾವನ್ನಂತೂ ಪರಿಶೀಲಿಸಬೇಕು. ಇದಲ್ಲದೆ ಚಂದ್ರನು ಮನಸ್ಸಿನ ಕಾರಕನು, ಭಾವನಾ ಕಾರಕನು. ವಾಸ್ತುಶಿಲ್ಪಿಗಳು ಭಾವುಕರಿದ್ದು ವಿಭಿನ್ನ ವಾಸ್ತುಶಿಲ್ಪಿಗಳ ನಕ್ಷೆಯಲ್ಲಿ ಯೋಜನಾ ರೂಪರೇಷೆಗಳು ವಿಭಿನ್ನವಿರುತ್ತವೆ. ಶುಕ್ರ-ಚಂದ್ರರ ತರುವಾಯ ಬುಧ-ಮಂಗಳರ ಬಲಾಬಲವನ್ನು ಪರಿಶೀಲಿಸಬೇಕು. ಏಕೆಂದರೆ ಶುಕ್ರ-ಚಂದ್ರರು ಬಲಾಢ್ಯರಿದ್ದವರು ಕಟ್ಟಡಗಳ ನಕ್ಷೆ ತಯಾರಿಸುವಲ್ಲಿ ಹಾಗೂ ಸ್ತರ ಗೊತ್ತುಪಡಿಸುವುದರಲ್ಲಿ ಸಿದ್ಧಹಸ್ತರಿರುತ್ತಾರೆ, ಕಟ್ಟಡ ಅಂದಾಜಪತ್ರ ತಯಾರಿಸುವ ಗುಣಧರ್ಮವು ಬುಧನದು. ಬುಧನು ಬಲಾಢ್ಯನಿರದೆ ಯಾರೂ ಯೋಗ್ಯ ಅಂದಾಜಪತ್ರಿಕೆ ತಯಾರಿಸಲಾರರು. ಬುಧನ ತರುವಾಯ ಕುಜಶನಿ ಇವರ ಬಲಾಬಲವನ್ನು ಪರಿಶೀಲಿಸಬೇಕು. ಏಕೆಂದರೆ ಯಾವುದೇ ಇಂಜಿನೀಯರ ವೃತ್ತಿಗೆ ಶನಿ-ಕುಜರು ಬಲಾಢ್ಯರಿರಬೇಕಾಗುತ್ತದೆ. ವಾಸ್ತುಶಿಲ್ಪಿಗಳು ಸಿವಿಲ್ ಇಂಜನೀಯರ ಕಾರ್ಯವನ್ನು ಮಾಡಬೇಕಾಗುತ್ತದೆ. ಯಾವುದೊಂದು ಕಟ್ಟಡ ಗಟ್ಟಿಮುಟ್ಟು ಅಂದರೆ ಭದ್ರತೆಯ ವಿಷಯದಲ್ಲಿ ಸಿವಿಲ್ ಇಂಜನೀಯರ ಕೆಲಸವಿದ್ದರೆ ಅದರ ವಿನ್ಯಾಸ, ಕಟ್ಟಡದ ಅಂದ ಚಂದಸುಂದರವಾಗಿ ಕಾಣುವಂತೆ ಮಾಡುವದು ವಾಸ್ತುಶಿಲ್ಪಿಗಳ ಗುಣಧರ್ಮವಿರುತ್ತದೆ. ಶುಕ್ರ-ಚಂದ್ರರು ಯಾವುದೊಂದು ಕಟ್ಟಡ ಅಂದಚಂದವಾಗಿ ಕಾಣುವ ಗುಣಧರ್ಮದವರಿದ್ದರೆ ಶನಿ-ಕುಜರು ಕಟ್ಟಡದ ಭದ್ರತೆಗೆ ಕಾರಕರು. ಹೀಗೆ ಶುಕ್ರ-ಚಂದ್ರ-ಶನಿ-ಕುಜ-ಬುಧರು ಬಲಾಢ್ಯರಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು. ಆದರೆ ಒಂದು ಸಂಗತಿ; ಶುಕ್ರ-ಚಂದ್ರರು ಸ್ಥಾನಬಲದವರೂ ರಾಶಿ ಬಲದವರೂ ಯೋಗಕಾರಕರೂ ಇದ್ದರೆ, ಶನಿ-ಕುಜ-ಬುಧರು ಕೇವಲ ರಾಶಿಬಲದವರಿರುತ್ತಾರೆ.

**ಲಗ್ನ :** ಲಗ್ನದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಕರ್ಕ, ತುಲಾ, ಮಕರ, ಕುಂಭ ಈ ಲಗ್ನದವರೇ ಈ ವೃತ್ತಿಯಲ್ಲಿ ಹೆಚ್ಚಾಗಿರುವುದು ಕಂಡುಬರುತ್ತದೆ.

**ಸ್ಥಾನ :** ಸ್ಥಾನದೃಷ್ಟಿಯಿಂದ ಪರಿಶೀಲಿಸಿದರೆ ಲಗ್ನ, ಚತುರ್ಥ, ತೃತೀಯ ಸ್ಥಾನಗಳೇ ಈ ವೃತ್ತಿಯ ಕಾರಕ ಸ್ಥಾನಗಳಿದ್ದು ಈ ಸ್ಥಾನಗಳು

ಹಾಗೂ ಈ ಸ್ಥಾನಾಧೀಶರು ಬಲಾಢ್ಯರಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು.

**ರಾಶಿ :** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಮಿಥುನ, ತುಲಾ, ಕುಂಭ ರಾಶಿಯವರೂ ಇವರ ನಂತರ ವೃಷಭ, ಕರ್ಕ, ಕನ್ಯಾ, ಮೀನ ಈ ರಾಶಿಯವರೂ ವಾಸ್ತುಶಿಲ್ಪಿ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

## ೪) ಚಾರ್ಟರ್ಡ ಅಕೌಂಟಂಟರು

ಬುದ್ಧಿಜೀವಿಗಳ ವೃತ್ತಿಯಲ್ಲಿ ಡಾಕ್ಟರ, ವಕೀಲ, ವಾಸ್ತುಶಿಲ್ಪಿಗಳ ತರುವಾಯ ಚಾರ್ಟರ್ಡ ಅಕೌಂಟಂಟರ ವೃತ್ತಿಗೆ ಇತ್ತೀಚೆಗೆ ಬಹಳ ಮಹತ್ವ ಬಂದಿದೆ. ಏಕೆಂದರೆ ವ್ಯಾಪಾರ ಉದ್ಯಮ ರಂಗದಲ್ಲಿ ಭರದಿಂದ ಪ್ರಗತಿ ಯಾಗುತ್ತಿರುವ ಇಂದಿನ ಕಾಲದಲ್ಲಿ ಬಗೆಬಗೆಯ ಗಿರಣಿ, ಕಾರಖಾನೆ ಗಳು ತಲೆಯೆತ್ತುತ್ತಿರುವುದು ಸ್ವಾಭಾವಿಕವು. ಈ ವ್ಯಾಪಾರ ಉದ್ಯಮಗಳು ಸಾರ್ವಜನಿಕ ಸ್ವರೂಪದವಿರಲಿ,ಖಾಸಗಿ ಸಂಘ-ಸಂಸ್ಥೆಗಳದವಿರಲಿ, ಸಹಕಾರಿ ಸಂಸ್ಥೆ ಇಲ್ಲವೆ ಸೊಸೈಟಿಯವಾಗಿರಲಿ, ಲಿಮಿಟೆಡ್ ಕಂಪನಿಯವಾಗಿರಲಿ, ಪಾಲುಗಾರಿಕೆಯ ವ್ಯವಸ್ಥೆಯವಾಗಿರಲಿ ಯಾವುದೇ ಪ್ರಕಾರದ, ಯಾವುದೇ ರಂಗದ, ಯಾವುದೇ ಉದ್ದೇಶದ,ಯಾವುದೇ ಸ್ವರೂಪದವಿದ್ದರೂ ಚಾರ್ಟರ್ಡ ಅಕೌಂಟಂಟರಿಂದ ತಮ್ಮ ಲೆಕ್ಕ ಪರಿಶೀಲಿಸಿಕೊಳ್ಳುವುದು ಅತ್ಯಗತ್ಯವಿರುತ್ತದೆ. ಇಷ್ಟೇ ಏಕೆ, ಸಾರ್ವಜನಿಕ ದೇವಸ್ಥಾನಗಳ ಕಮೀಟಿ ಯಾಗಿರಲಿ, ಶಾಲೆಕಾಲೇಜುಗಳನ್ನು ನಡೆಸುತ್ತಿರುವ ಶೈಕ್ಷಣಿಕ ಸಂಸ್ಥೆ, ಗೃಹನಿರ್ಮಾಣ ಮೊದಲಾದ ಸಹಕಾರಿ ಸಂಘ-ಸೊಸೈಟಿ ಸಂಸ್ಥೆಯಾಗಿರಲಿ ವಿವಿಧೋದ್ದೇಶಗಳ ಟ್ರಸ್ಟುಗಳಿದ್ದರೂ ಕೂಡ ಚಾರ್ಟರ್ಡ ಅಕೌಂಟಂಟ ರಿಂದಲೇ ತಮ್ಮ ಲೆಕ್ಕಪತ್ರಗಳನ್ನು ಪರಿಶೀಲಿಸಿಕೊಂಡು ಅವರ ಶಿಫಾರಸ ಪತ್ರ ಪಡೆಯಲೇಬೇಕೆಂಬ ಕಡ್ಡಾಯವಿರುತ್ತದೆ. ಇದಲ್ಲದೆ ದೇಶದಲ್ಲಿ ಎಲ್ಲ ಪ್ರಕಾರದ ಬ್ಯಾಂಕುಗಳು ಕೂಡ ತಮ್ಮ ಲೆಕ್ಕಪತ್ರಗಳನ್ನು ಚಾರ್ಟರ್ಡ

ಅಕೌಂಟಂಟರಿಂದಲೇ ಪರಿಶೀಲಿಸಿಕೊಳ್ಳಬೇಕಾಗುತ್ತದೆ. ಇಂದಬಳಿಕ ಚಾರ್ಟರ್ಡ್ ಅಕೌಂಟಂಟರ ವೃತ್ತಿಯ ಘನತೆ, ವ್ಯಾಪ್ತಿ, ಮಹತ್ವ ಎಷ್ಟು ಎಂಬುದರ ಕಲ್ಪನೆ ಬಾರದಿರದು. ಅದಾಗ್ಯೂ ಎಲ್ಲ ಚಾರ್ಟರ್ಡ ಅಕೌಂಟಂಟರ ವೃತ್ತಿ ಚೆನ್ನಾಗಿ ನಡೆಯುತ್ತಿದೆ ಎಂದು ಹೇಳಲು ಬಾರದು. ಆದ್ದರಿಂದ ಫಲಜ್ಯೋತಿಷ್ಯದ ಪ್ರಕಾರ ಈ ವೃತ್ತಿಯಲ್ಲಿ ಯಶಸ್ಸು ಸಾಧಿಸಲು ಜಾತಕ ಹೇಗಿರಬೇಕು, ಈ ವೃತ್ತಿಯ ಕಾರಕ ಗ್ರಹ ಲಗ್ನ ಸ್ಥಾನಾದಿಗಳಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ**— ಈ ವೃತ್ತಿಯ ಕಾರಕ ಗ್ರಹವೆಂದರೆ ಬುಧನು, ಬುಧನು ಬಲಾಢ್ಯನಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು ಏಕೆಂದರೆ ಈ ವೃತ್ತಿಯವರ ಮುಖ್ಯ ಕೆಲಸವೆಂದರೆ ಜಮಾಖರ್ಚಿನ ಲೆಕ್ಕ, ಆಢಾವೆ ಪತ್ರಿಕೆಯ ತಯಾರಿಕೆ, ಲೆಕ್ಕ ತಪಾಸಣೆ, ಲೆಕ್ಕ ಪರಿಶೋಧನೆ, ಕರಾಕರಣೆ, ಆರ್ಥಿಕ ಸಂಶೋಧನೆ ಮತ್ತು ಪುನರ್ ವಿಮರ್ಶೆ ಟ್ರಸ್ಟಿಶಿಪ್ - ಕಂಪನಿ ಕಾಯಿದೆ, ತೆರಿಗೆ ಮೊದಲಾದ ವಿಷಯಗಳಿಗೆ ಸಂಬಂಧಿಸಿದ ಕೆಲಸಗಳಿರುತ್ತವೆ. ಈ ಎಲ್ಲ ವಿಷಯಗಳಿಗೆ ಬುಧನು ಕಾರಕನು.

ಬುಧನ ತರುವಾಯ ಗುರುವಿನ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ. ಏಕೆಂದರೆ ಚಾರ್ಟರ್ಡ ಅಕೌಂಟಂಟರ ಕೆಲಸದಲ್ಲಿ ಲೆಕ್ಕದ ಆಢಾವೆಪತ್ರಿಕೆಯನ್ನು ತಯಾರಿಸುವುದಕ್ಕಿಂತ ಲೆಕ್ಕ ತಪಾಸಣೆಯು ಮುಖ್ಯವಿರುತ್ತದೆ. ಲೆಕ್ಕ ತಯಾರಿಸುವಿಕೆಯು ಅಕೌಂಟಂಟರ ಕೆಲಸವಿದ್ದರೆ, ಲೆಕ್ಕ ತಪಾಸಣೆಯ ಕೆಲಸ ಚಾರ್ಟರ್ಡ ಅಕೌಂಟಂಟರದಿರುತ್ತದೆ. ಇದಲ್ಲದೆ ಇವರ ವೃತ್ತಿಯಲ್ಲಿ ಸಲಹೆಗಾರಿಕೆಯ ಕೆಲಸ ಬಹಳವಿರುತ್ತದೆ. ಯಾವುದೆ ಸಲಹೆಗಾರಿಕೆಯ ವೃತ್ತಿಗೆ ಗುರುವು ಕಾರಕನು. ಬುಧ-ಗುರುಗಳ ತರುವಾಯ ಶನಿಯು ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ. ಏಕೆಂದರೆ ಚಾರ್ಟರ್ಡ ಅಕೌಂಟರ ವೃತ್ತಿಯ ಕೆಲಸದಲ್ಲಿ ಕಂಬಹುನಾ ಕಾಯ್ದೆ ವಿಷಯ ವಿರುತ್ತದೆ. ಯಾವುದೇ ಪ್ರಕಾರದ ಕಾಯ್ದೆ ವಿಷಯದಲ್ಲಿ ತಜ್ಞತೆ ಪಡೆಯಲು

ಶನಿಯು ಬಲಾಢ್ಯನಿರಲೇಬೇಕು. ಇದಲ್ಲದೆ ಈ ವೃತ್ತಿಯವರ ಪ್ರಮುಖ ಪಕ್ಷಗಾರ (ಗ್ರಾಹಕ) ರಲ್ಲಿ ನಾಲ್ಕು ಪ್ರಕಾರದವರಿರುತ್ತಾರೆ.

೧) ಎಲ್ಲ ಪ್ರಕಾರದ ವ್ಯಾಪಾರಸ್ಥರು, ಉದ್ಯಮದಾರರು
೨) ಎಲ್ಲ ಪ್ರಕಾರದ ಬ್ಯಾಂಕು, ಸೊಸೈಟಿಗಳು
೩) ಎಲ್ಲ ಪ್ರಕಾರದ ಸಂಸ್ಥೆಗಳು ಹಾಗೂ ಟ್ರಸ್ಟಿಗಳು
೪) ಮಾರಾಟ ಹಾಗೂ ವರವಮಾನ ತೆರಿಗೆ ಸಲಹೆಗಾರಿಕೆ ಕೆಲಸ.

ಇದರಲ್ಲಿ ಎಲ್ಲ ಪ್ರಕಾರದ ವ್ಯಾಪಾರ, ಬ್ಯಾಂಕ, ಸೊಸೈಟಿಯ ಕೆಲಸಕ್ಕೆ ಬುಧನು ಕಾರಕನಿದ್ದರೆ, ಯಾವುದೇ ಪ್ರಕಾರದ ಸಹಕಾರಿ ಉದ್ಯಮ ಸೋಸಾಯಿಟಿಗೆ, ಹಾಗೂ ಸಂಸ್ಥೆಗಳಿಗೆ ಬುಧ-ಶನಿಯರು ಕಾರಕರು. ಇದರಂತೆ ಯಾವುದೇ ಪ್ರಕಾರದ ಶಾಲಾ-ಕಾಲೇಜ ಶಿಕ್ಷಣ ಸಂಸ್ಥೆಗಳಿಗೆ ದೇವಸ್ಥಾನಗಳಿಗೆ, ಟ್ರಸ್ಟಗಳಿಗೆ, ಗುರುವು ಕಾರಕನು. ಇದರಂತೆ ಮಾರಾಟ-ವರಮಾನ ತೆರಿಗೆ ವಿಷಯಕ್ಕೆ ಸಲಹೆ ನೀಡುವುದಕ್ಕಾಗಿ ಸಲಹೆಗಾರರ ಜಾತಕದಲ್ಲಿ ಬುಧ-ರವಿಯರು ಬಲಾಢ್ಯರಿರಬೇಕಾಗುತ್ತದೆ. ಆದ್ದರಿಂದ ಬುಧ, ಗುರು, ಶನಿಯರು ಚಾರ್ಟರ್ಡ ಅಕೌಂಟಂಟ ವೃತ್ತಿಗೆ ಕಾರಕರು. ಅದರ ಬುಧನು ರಾಶಿ ಬಲದವನು. ಸ್ಥಾನ ಬಲದವನು. ಯೋಗಕಾರಕನು ಇದ್ದರೆ ಗುರು-ಶನಿಯರು ಕೇವಲ ರಾಶಿಬಲದವರಿರುತ್ತಾರೆ.

ಸ್ಥಾನ—ಸ್ಥಾನ ದೃಷ್ಟಿಯಿಂದ ಪರೀಶಿಲಿಸಿದರೆ ತೃತೀಯ, ಪಂಚಮ, ಷಷ್ಠ, ನವಮ ಈ ಸ್ಥಾನಗಳನ್ನು ಪರೀಶಿಲಿಸಬೇಕಾಗುತ್ತದೆ. ಏಕೆಂದರೆ ಉದ್ಯಮ ಸ್ಥಾನವಾದ ಪಂಚಮ ಲೆಕ್ಕಪತ್ರದ ಸ್ಥಾನವಾದ ತೃತೀ-ಯಿಯೂ ವೃತ್ತಿಯ ಸ್ಥಾನವಾದ ಷಷ್ಠವೂ ಬಲಾಢ್ಯವಿರಲೇಬೇಕು. ಅಲ್ಲದೆ ಸ್ಪರ್ಧಾತ್ಮಕ ಪರಿಕ್ಷೆಯಲ್ಲಿ ಯಶ ಸಾಧಿಸುವ ಸ್ಥಾನವಾದ ನವ-ಮವು ಬಲಾಢ್ಯವಿರಬೇಕು. ಏಕೆಂದರೆ ಚಾರ್ಟರ್ಡ ಅಕೌಂಟಂಟರ ಪರೀಕ್ಷೆಯಂತೂ ಬಹಳ ಕಠಿಣವಿರುತ್ತದೆ. ನಮ್ಮ ದೇಶದ ಇಂದಿನ ಪರಿಕ್ಷಾ ವಿಧಾನಗಳಲ್ಲಿ ಆಯ್. ಎ. ಎಸ್, ಆಯ್. ಪಿ. ಎಸ್., ಆಯ್. ಎಫ್.

ಎಸ್. ಪರೀಕ್ಷೆಗಳಂಥ ಪಬ್ಲಿಕ್ ಸರ್ವೀಸ್ ಕಮೀಶನ್‌ಗಳಿಂದ ನಡೆಯುವ ಸ್ಪರ್ಧಾತ್ಮಕ ಪರೀಕ್ಷೆಗಳು, ಮೆಡಿಕಲ್‌ದಲ್ಲಿ ಎಂ. ಡಿ. ಹಾಗೂ ಎಂ. ಎಸ್. ಪರೀಕ್ಷೆಗಳು, ವಾಣಿಜ್ಯದಲ್ಲಿ ಚಾರ್ಟರ್ಡ ಅಕೌಂಟಂಟ ಪರೀಕ್ಷೆಗಳು ಬಹಳ ಕಠಿಣವಿದ್ದು ಈ ಪರೀಕ್ಷೆಗಳಲ್ಲಿ ತೇರ್ಗಡೆಯಾಗಲು ನವಮ ಸ್ಥಾನ ಬಲಾಢ್ಯ ವಿರಲೇಬೇಕು. ಅದರಲ್ಲಿಯೂ ಚಾರ್ಟರ್ಡ ಅಕೌಂಟಂಟರ ಪರೀಕ್ಷೆ ಬಹಳ ಕಠಿಣವಿರುತ್ತದೆ. ಏಕೆಂದರೆ ಈ ಪರೀಕ್ಷೆಗೆ ಕಟ್ಟುವ ವಿದ್ಯಾರ್ಥಿಗಳು ನೇರವಾಗಿ ಪರೀಕ್ಷೆಗೆ ಕೂಡ್ರಲು (ಕಟ್ಟಲು) ಬಾರದೆ ನಾಲ್ಕು ವರ್ಷಗಳ ಕಾಲ ಯಾವುದೇ ರಜಿಸ್ಟರ್ಡ ಚಾರ್ಟರ್ಡ ಅಕೌಂಟಂಟರ ಬಳಿ "ಆರ್ಟಿಕಲ್ಡ ಕ್ಲಾರ್ಕ" ಎಂದು ಕೆಲಸಮಾಡಬೇಕಾಗುತ್ತದೆ. ಹಾಗೂ ಈ ಅವಧಿಯಲ್ಲಿ ಲೆಕ್ಕ ತಪಾಸಣೆ, ಆಢಾವೆಪತ್ರಿಕೆ ಲೆಕ್ಕ ತಯಾರಿಕೆ, ಮೊದಲಾದ ಕಾರ್ಯದಲ್ಲಿ ತೊಡಗಿ ಪ್ರಾಯೋಗಿಕ ಹಾಗೂ ಪ್ರಾತ್ಯಕ್ಷಿಕ ಅನುಭವವನ್ನು ಪಡೆಯಬೇಕಾಗುತ್ತದೆ. ಆದ್ದರಿಂದ ನವಮ ಸ್ಥಾನ, ನವಮೇಶರು ಬಲಾಢ್ಯರಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು.

**ಲಗ್ನ :** ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಮಿಥುನ, ಕರ್ಕ, ಕನ್ಯಾ, ಧನು, ಮಕರ, ಮೀನ ಈ ಲಗ್ನದವರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

**ರಾಶಿ :** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಮಿಥುನ, ತುಲಾ, ಕುಂಭ ಈ ರಾಶಿಯವರು ಈ ವೃತ್ತಿಯಲ್ಲಿ ಪಳಗಿದವರು; ಇವರ ನಂತರ ವೃಷಭ, ಕರ್ಕ, ಕನ್ಯಾ, ಮೀನ ಈ ರಾಶಿಯವರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

**ಯೋಗಗಳು :**

೧) ಬುಧ-ಗುರು, ಚಂದ್ರ- ಶನಿಯರು ಬಲಾಢ್ಯರಿದ್ದ ಜಾತಕರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

೨) ಬುಧನ ಸಂಗಡ ರವಿ-ಗುರುಗಳು ಬಲಾಢ್ಯರಿದ್ದ ಜಾತಕನಿಗೆ ದೊಡ್ಡ ದೊಡ್ಡ ಕಂಪನಿಗಳ ಬ್ಯಾಂಕುಗಳ ದೊಡ್ಡ ಕಾರಖಾನೆಗಳ ಕೆಲಸ ಬರುತ್ತದೆ.

೩) ಬುಧ-ಶನಿಯರು ಬಲಾಢ್ಯರಿದ್ದ ಜಾತಕನಿಗೆ ವ್ಯಾಪಾರಸ್ಥರ, ಸಹಕಾರಿ ಸಂಸ್ಥೆಗಳ ಕೆಲಸ ಬಹಳ.

೪) ಬುಧ-ಗುರು ಬಲಾಢ್ಯರಿದ್ದ ಜಾತಕನಿಗೆ ಶೈಕ್ಷಣಿಕ ಸಂಸ್ಥೆಗಳ ದೇವಸ್ಥಾನಗಳ ಟ್ರಸ್ಟುಗಳ ಕೆಲಸ ಬಹಳ.

೫) ಬುಧ-ರವಿಯರು ಬಲಾಢ್ಯರಿದ್ದ ಜಾತಕನಿಗೆ ರಾಜಕೀಯ ಸಂಸ್ಥೆಗಳ, ರಾಜಕಾರಣಿಗಳ ಕೆಲಸ ಬಹಳ. ಬುಧ, ರವಿಯುವರು ಬಲಾಢ್ಯ ಜಾತಕರಿಗೆ ಮಾರಾಟಕರ, ವರಮಾನ ತೆರಿಗೆ ಕೆಲಸಗಳು ಬಹಳ.

## ೫) ಕಾಸ್ಟ ಅಕೌಂಟಂಟರು

ಚಾರ್ಟರ್ಡ ಅಕೌಂಟಂಟರಂತೆ ಕೈತುಂಬ ಸಂಪಾದನೆ ಮಾಡುವ ವೃತ್ತಿಯವರೆಂದರೆ ಕೊಸ್ಟ ಅಕೌಂಟಂಟರು. ಚಾರ್ಟರ್ಡ ಅಕೌಂಟಂಟರಿಗೆ ಲೆಕ್ಕ ತಪಾಸಣೆಯ ಕೆಲಸವೇ ಮುಖ್ಯವಿದ್ದರೆ ಕೊಸ್ಟ ಅಕೌಂಟಂಟರಿಗೆ ಉತ್ಪಾದನೆಯ ವೆಚ್ಚವನ್ನು ಹೇಗೆ ನಿಯಂತ್ರಣದಲ್ಲಿಡಬೇಕೆಂಬುದನ್ನು ಸೂಚಿಸುವ ಕೆಲಸವಿರುತ್ತದೆ. ಚಾರ್ಟರ್ಡ ಅಕೌಂಟಂಟರಂತೆ ಕಾಸ್ಟ ಅಕೌಂಟಂಟರು ಸ್ವತಂತ್ರ ಉದ್ಯೋಗಸ್ಥರು ಹೌದು, ನೌಕರಸ್ಥರು ಹೌದು. ಆದರೆ ಚಾರ್ಟರ್ಡ ಅಕೌಂಟಂಟರು ನೌಕರರಂತೆ ಸ್ವತಂತ್ರ ಉದ್ಯೋಗ ಮಾಡುವುದೇ ಹೆಚ್ಚಾಗಿದ್ದರೆ ಕೊಸ್ಟ ಅಕೌಂಟಂಟರು ಸ್ವತಂತ್ರ ಉದ್ಯೋಗಸ್ಥರಿಗಿಂತ ಯಾವುದಾದರೊಂದು ಗಿರಣಿ-ಕಾರಖಾನೆ ಮೊದಲಾದ ಉದ್ಯಮಗಳಲ್ಲಿ ನೌಕರಿ ಮಾಡುವುದೇ ಹೆಚ್ಚು. ಆದರೆ ಇತ್ತೀಚಿನ ವರುಷಗಳಲ್ಲಿ ಔದ್ಯೋಗಿಕ ಕ್ಷೇತ್ರ ಬಹುವಾಗಿ ಪ್ರಾಧಾನ್ಯತೆ ಪಡೆಯಲಾರಂಭಿಸಿರುವುದರಿಂದ ಅನೇಕರು ಸ್ವತಂತ್ರ ಉದ್ಯೋಗವನ್ನೇ ಕೈಕೊಳ್ಳುತ್ತಿದ್ದಾರೆ, ಇದಕ್ಕೆ ಕಾರಣಗಳಿದ್ದರೂ, ಪ್ರಮುಖ ಕಾರಣವೆಂದರೆ ಗಿರಣಿ, ಕಾರಖಾನೆ ಮೊದಲಾದ ಸ್ವತಂತ್ರ ಉದ್ಯಮ ಕೈಕೊಳ್ಳಲು ಸರಕಾರದವರು ಶೆಡ್ (ಕಟ್ಟಡ) ಸಾಲ, ಸಹಾಯಧನ ಮೊದಲಾದ ಎಲ್ಲ ರೀತಿಯ ಪ್ರೋತ್ಸಾಹ ಕೊಡುವುದರಿಂದ

ಅನೇಕರು ತಮ್ಮದೇ ಆದ ಸ್ವತಂತ್ರ ಉದ್ದಿಮೆಯನ್ನು ಕೈಕೊಳ್ಳುತ್ತಿದ್ದಾರೆ. ಆದರೆ ಒಂದೇ ಪ್ರಕಾರದ ವಸ್ತುಗಳನ್ನು ಉತ್ಪಾದಿಸುವ ಸಂಸ್ಥೆ, ಕಾರಖಾನೆಗಳು (ಉದ್ಯಮ) ಅನೇಕವಿದ್ದರೆ ಅವುಗಳಲ್ಲಿ ತೀಕ್ಷ್ಣ ಸ್ಪರ್ಧೆ ನಡೆಯುವದು ಸ್ವಾಭಾವಿಕವು. ಉತ್ಪಾದಿಸಿದ ವಸ್ತುಗಳ ಮಾರಾಟ ಹೆಚ್ಚಾಗಬೇಕಾದರೆ ವಸ್ತುಗಳ ಬೆಲೆ ಸ್ಪರ್ಧಾತ್ಮಕವಾಗಿರಬೇಕು. ವಸ್ತುಗಳ ಬೆಲೆ ಸ್ಪರ್ಧಾತ್ಮಕವಾಗಿರಬೇಕಾದರೆ ಉತ್ಪಾದನೆಯ ಪ್ರತಿಯೊಂದು ಘಟ್ಟದಲ್ಲಿ ಮಟ್ಟವನ್ನು ಕಾಯ್ದುಕೊಂಡು ವೆಚ್ಚವನ್ನು ಹಿಡಿತದಲ್ಲಿಟ್ಟುಕೊಂಡರೆ ಮಾತ್ರ ಮಾರಾಟ ದರವನ್ನು ಆಕರ್ಷಕವಾಗಿ ಇಟ್ಟುಕೊಳ್ಳಲು ಸಾಧ್ಯ. ಆದಕ್ಕಾಗಿ ಕೊಸ್ಟ ಅಕೌಂಟಂಟರ ಸಲಹೆ-ಸೂಚನೆ-ಮಾರ್ಗದರ್ಶನ ಅತ್ಯವಶ್ಯವಿರುತ್ತವೆ.

ಏಕೆಂದರೆ ಈ ಕಾಸ್ಟ ಅಕೌಂಟಂಟರು ಯಾವುದೊಂದು ಉದ್ಯಮದ ಉತ್ಪಾದನಾ ವೆಚ್ಚವನ್ನು ಪ್ರತಿಯೊಂದು ಘಟ್ಟದಲ್ಲಿ ತೂಗಿ ನೋಡಿ ಕಚ್ಚಾ ಸಾಮಗ್ರಿಗಳ ಬೆಲೆಯನ್ನು ಗುಣವನ್ನು ನಿರ್ಧರಿಸಿ ಸಾಮಗ್ರಿಗಳ ಅಪವ್ಯಯವಾಗುವದನ್ನು ತಡೆದು ಉತ್ಪಾದನೆಯ ಕೊರತೆಯನ್ನು ಕಂಡು ಹಿಡಿಯುವದರಲ್ಲದೆ. ಕಚೇರಿಗಳ (ಸಿಬ್ಬಂದಿಗಳ) ವ್ಯವಸ್ಥೆ, ಕಾರ್ಮಿಕರ ಕಾರ್ಯಕ್ಷಮತೆ ಹಾಗೂ ಅವರ ವೇತನ, ಮಾರಾಟದಲ್ಲಿಯ ಲೋಪದೋಷ ಎಲ್ಲವನ್ನು ಕೂಲಂಕಷವಾಗಿ ಅಭ್ಯಸಿಸಿ ಯೋಗ್ಯ ಸಲಹೆ-ಸೂಚನೆಗಳನ್ನು ಕೊಡುವುದೇ ಇವರ ಕೆಲಸ. ಒಂದೇ ಶಬ್ದದಲ್ಲಿ ಹೇಳಬೇಕೆಂದರೆ ಹೇಗೆ ವಕೀಲರು ತಮ್ಮ ಪಕ್ಷಗಾರರ ಹಿತರಕ್ಷಣೆ ಮಾಡುವರೋ ಹಾಗೆ ಕಾಸ್ಟ ಅಕೌಂಟಂಟರು ಉದ್ಯಮದಾರರ ಉದ್ಯಮದಲ್ಲಿಯ ಉತ್ಪಾದನೆ ಮಾರಾಟಗಳಲ್ಲಿಯ ಲೋಪದೋಷಗಳನ್ನು ಕಂಡುಹಿಡಿದು ಅವನ್ನು ಸರಿಪಡಿಸಲು ಯಾವ ಯಾವ ಕ್ರಮ ಕೈಕೊಂಡರೆ ಉದ್ಯಮವು ಲಾಭದಾಯಕವಾಗುತ್ತದೆ ಎಂಬುದರ ಕುರಿತು ಸಲಹೆ-ಸೂಚನೆ ಕೊಡುತ್ತಾರೆ. ಅಂತೆಯೇ ಉದ್ಯಮದಾರರು ತಮ್ಮ ಉದ್ಯಮದ ಉತ್ಕರ್ಷಕ್ಕೆ ಇವರ ಸಹಾಯ, ಸಲಹೆಗಳನ್ನು ಪಡೆಯುವದರಲ್ಲಿ ಆಶ್ಚರ್ಯವಿಲ್ಲ. ಆದ್ದರಿಂದಲೇ ಇವರ ವೃತ್ತಿಗೆ ಹೆಚ್ಚಿನ ಬೇಡಿಕೆ ಬಂದಿದೆ. ಆದಾಗ್ಯೂ ಎಲ್ಲ ಕಾಸ್ಟ ಅಕೌಂಟಂಟರ ವೃತ್ತಿ ಬಹು ಚೆನ್ನಾಗಿ ನಡೆಯುತ್ತಿದೆ ಎಂದು ಹೇಳಲು ಬಾರದು. ಆದ್ದರಿಂದ

ಫಲಜ್ಯೋತಿಷದಲ್ಲಿ ಈ ವೃತ್ತಿ ಕೈಕೊಳ್ಳುವವರ ಜಾತಕ ಹೇಗಿರುತ್ತದೆ, ಕಾರಕ ಗ್ರಹ ಸ್ಥಾನ ಲಗ್ನ ಇತ್ಯಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ,

**ಕಾರಕ ಗ್ರಹ :** ಈ ವೃತ್ತಿಯ ಕಾರಕ ಗ್ರಹಗಳೆಂದರೆ ಬುಧ-ಗುರುಗಳು ಏಕೆಂದರೆ ಈ ವೃತ್ತಿಯವರ ಮುಖ್ಯ ಕೆಲಸವೆಂದರೆ ಉದ್ಯಮೆದಾರರು ಉತ್ಪಾದಿಸುವ ವಸ್ತುಗಳ ಮಾರಾಟ ಲಾಭದಾಯಕವಾಗಿ ಉತ್ಪಾದನೆಯ ವೆಚ್ಚವನ್ನು ನಿಯಂತ್ರಣದಲ್ಲಿ ಇಟ್ಟುಕೊಳ್ಳಲು ಹಾಗೂ ಉತ್ಪಾದನಾ ವ್ಯವಸ್ಥೆಯಲ್ಲಿಯ ದೋಷ ಕಂಡುಹಿಡಿಯುವ ಕೆಲಸ ಬುಧನ ಗುಣಧರ್ಮ.

ಆದ್ದರಿಂದ ಬುಧನು ಜಾತಕದಲ್ಲಿ ಬಲಾಢ್ಯನಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು. ಬುಧನ ತರುವಾಯ ಗುರುವಿನ ಬಲಾಬಲವನ್ನು ಪರೀಶೀಲಿಸಬೇಕು. ಏಕೆಂದರೆ ಕಾಸ್ಟ ಅಕೌಂಟಂಟರ ಕೆಲಸ ಸಲಹೆಗಾರಿಕೆಯ ವೃತ್ತಿಯಲ್ಲಿ ಬರುತ್ತದೆ. ಯಾವುದೊಂದು ಉದ್ಯಮದ ಉತ್ಪಾದನೆಯಲ್ಲಿ ಹೇಗೆ ಹಾನಿಯಾಗುತ್ತದೆ, ಎಲ್ಲಿ ಹಾನಿಯಾಗುತ್ತದೆ, ಯಾವ ಘಟ್ಟದಲ್ಲಿ ಯಾವ ಮಟ್ಟದಲ್ಲಿ ಕುಂದು ಕೊರತೆಗಳಾವವು, ಅವವ್ಯ ಯಾವವನ್ನು ಹೇಗೆ ತಡೆಯಬೇಕು ಇವೇ ಮೊದಲಾದ ವಿಷಯಗಳ ಕುರಿತು ಸಲಹೆ-ಸೂಚನೆ ಕೊಡುವದು ಮಾತ್ರ ಇವರ ಕೆಲಸವಿರುವದರಿಂದ, ಸಲಹೆಗಾರಿಕೆ ಕಾರಕಗ್ರಹವಾದ ಗುರುವು ಜಾತಕದಲ್ಲಿ ಬಲಾಢ್ಯನಿರಲೇಬೇಕು. ಬುಧ-ಗುರುಗಳ ತರುವಾಯ ಶನಿ-ಮಂಗಳರ ಬಲಾಬಲವನ್ನು ಪರಿಶೀಲಿಸಬೇಕು. ಏಕೆಂದರೆ ಇವರ ವೃತ್ತಿಯ ಸಂಬಂಧವು ಗಿರಣಿ, ಕಾರಖಾನೆ ಮೊದಲಾದ ಉದ್ದಿಮೆದಾರರೊಂದಿಗೆ ಹಾಗೂ ಉದ್ಯಮಗಳೊಂದಿಗೆ ಬರುತ್ತದೆ. ಆದ್ದರಿಂದ ಕಾರಖಾನೆಯ ಕಾರಕ ಗ್ರಹವಾದ ಶನಿಯು, ಮಶಿನರಿಯ ಕಾರಕ ಗ್ರಹವಾದ ಮಂಗಳನ ಬಲಾಬಲವನ್ನು ಪರಿಶೀಲಿಸಬೇಕು. ಆದರೆ ಬುಧ-ಗುರುಗಳು ರಾಶಿ ಬಲದವರು ಸ್ಥಾನ ಬಲದವರೂ ಯೋಗ ಬಲದವರೂ, ಯೋಗ ಕಾರಕರೂ ಇರಬೇಕು. ಶನಿ-ಮಂಗಳರು ಕೇವಲ ರಾಶಿ ಬಲದವರು ಇದ್ದರೆ ಸಾಕು, ಅರ್ಥಾತ್ ದುರ್ಬಲರಿರಕೂಡದು.

**ಸ್ಥಾನ :** ಸ್ಥಾನದ ದೃಷ್ಟಿಯಿಂದ ಪರಿಶೀಲಿಸಿದರೆ ಸಲಹೆಗಾರಿಕೆಯು ಸ್ಥಾನವಾದ ಪಂಚಮ ಸ್ಥಾನವು, ಪಂಚಮಾಧೀಶರು ಬಲಾಢ್ಯರಿರಬೇಕು. ಪಂಚಮದ ನಂತರ ಉದ್ಯಮದ ಸ್ಥಾನವಾದ ಚತುರ್ಥ, ದಶಮ ಸ್ಥಾನಗಳನ್ನು ಪರಿಶೀಲಿಸಬೇಕು.

**ಲಗ್ನ :** ಲಗ್ನದ ದೃಷ್ಟಿಯಿಂದ ಪರೀಶಿಲಿಸಿದರೆ ಸಲಹೆಗಾರಿಕೆಯು ವೃತ್ತಿಯು ಪೂರಕ ಲಗ್ನಗಳಾದ ಮೇಷ, ಮಿಥುನ, ಸಿಂಹ, ವೃಶ್ಚಿಕ, ಧನು, ಮೀನ ಈ ಲಗ್ನಗಳೂ, ನಂತರ ವೃಷಭ, ಕನ್ಯಾ ಲಗ್ನಗಳೂ ಪೂರಕವಿರುತ್ತವೆ.

**ರಾಶಿ :** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ವಾಯು ರಾಶಿಗಳು ಸಲಹೆಗಾರಿಕೆಯು ವೃತ್ತಿಗೆ ಪೂರಕವಿರುತ್ತವೆ. ಆದ್ದರಿಂದ ಮಿಥುನ, ತುಲಾ, ಕುಂಭ ರಾಶಿಯವರು ಕೊಸ್ಟ ಅಕೌಂಟಂಟ ವೃತ್ತಿಯಲ್ಲಿ ನಿಷ್ಣಾತರು. ಈ ರಾಶಿಗಳ ನಂತರ ವೃಷಭ, ಕರ್ಕ, ಮೀನ ಈ ರಾಶಿಯವರು ಈ ವೃತ್ತಿಯಲ್ಲಿ ಪಳಗಿದವರು.

**ಯೋಗ :** ಬುಧ-ಗುರುಗಳು ವಾಯು ರಾಶಿಯಲ್ಲಿರಬೇಕು, ಇಲ್ಲವೆ ಗುರುವು ಕರ್ಕ, ಧನು,ಮೀನ ರಾಶಿಯವನಿರಬೇಕು, (೨) ಬುಧನು ಪೃಥ್ವಿ ಹಾಗೂ ವಾಯು ರಾಶಿಯವನಿರಬೇಕು.

## ೬) ತೆರಿಗೆ ( ಕರ) ಸಲಹೆಗಾರರು

ತೆರಿಗೆ – ಕರ ಹೇರುವದು, ವಸೂಲ ಮಾಡುವದು ಇದು ಬಹು ಪುರಾತನ ಕಾಲದಿಂದಲೂ ರೂಢಿಯಲ್ಲಿದೆ. ಇದು ಸಮಾಜದಲ್ಲಿಯ ಪ್ರತಿಯೊಬ್ಬ ವ್ಯಕ್ತಿ ಸಮಾಜ ವ್ಯವಸ್ಥೆಗೆ, ಸ ರ ಕಾ ರ ಕ್ಕೆ ಸಲ್ಲಿಸಲೇ ಬೇಕಾದ ಋಣ ಎಂದು ಪರಿಗಣಿಸಲ್ಪಟ್ಟದೆ. ಸುಮಾರು ೨,೩೦೦ ವರುಷಗಳ ಹಿಂದೆ ಮೌರ್ಯ ಕಾಲದಲ್ಲಿ ಕರ ಆಕರಣೆ, ವಸೂಲ ಪದ್ಧತಿ ಹೇಗಿತ್ತು ಎಂಬುದು

ಕೌಟಿಲ್ಯನ ಅರ್ಥಶಾಸ್ತ್ರದಿಂದ ತಿಳಿದುಬರುತ್ತದೆ. ಚತುರ ಚಾಣುಕ್ಯನು ಕರಾಕರಣೆ ಹೇಗಿರಬೇಕು, ಕರವಸೂಲ ಎಂತಿರಬೇಕು ಎಂಬಿವೇ ಮೊದಲಾದ ಕರ ಪದ್ಧತಿಯ ಬಗೆಗೆ ಅನೇಕ ಮಹತ್ವದ ತತ್ವಗಳನ್ನು ಹೇಳಿದ್ದಾನೆ. ಆತನ ಅರ್ಥಶಾಸ್ತ್ರವು ಇಂದಿಗೂ ಮಾರ್ಗದರ್ಶನ ನೀಡಬಲ್ಲ ಸೂತ್ರ ಗ್ರಂಥವಾಗಿದೆ. ಅದೇಕೆ, ಅದಕ್ಕೂ ಪೂರ್ವದಲ್ಲಿ ಅಂದರೆ ರಾಮಾಯಣ-ಮಹಾಭಾರತಗಳಲ್ಲಿ ಸಹ ರಾಜಸತ್ತೆಗೆ ಪ್ರತಿಯೊಬ್ಬ ಪ್ರಜೆಯು ಸಲ್ಲಿಸಬೇಕಾದ ಕರ ಋಣದ ಬಗೆಗೆ ಉಲ್ಲೇಖವಿರುವದು ಕಂಡುಬರುತ್ತದೆ. ಆದರೆ ಈಗಿನಂತಹ ಕರಾಕರಣೆ ಆಗ ಇದ್ದಿಲ್ಲ, ಹಾಗೂ ಕರಸಂದಾಯ ಈಗಿನಂತೆ ಆಗ ಸಮಸ್ಯೆಯಾಗಿರಲಿಲ್ಲ.

ತೆರಿಗೆ-ಕರ ಸಲಹೆಗಾರರ ಸಹಾಯವಿಲ್ಲದೆ ನಾಗರಿಕನು ನೇರವಾಗಿ ಸರಕಾರಕ್ಕೆ ಕರಸಂದಾಯ ಮಾಡುವದು ಕ್ಲಿಷ್ಟವೂ ಸಮಸ್ಯೆಯೂ ಆಗಿರುವುದಕ್ಕೆ ಅನೇಕ ಕಾರಣಗಳಿದ್ದರೂ ಮುಖ್ಯವಾಗಿ ಎರಡು ಕಾರಣಗಳಿವೆ.

೧) ಕರಗಳ ಬಗೆಗೆ ಜನರಿಗೆ ಸರಿಯಾದ ತಿಳುವಳಿಕೆ ಇಲ್ಲದಿರುವಿಕೆ, ಹಾಗೂ ದಿನನಿತ್ಯದ ವ್ಯವಹಾರದಲ್ಲಿ ಸಮಯದ ಅಭಾವ ಒಂದು ಕಾರಣವಾಗಿದೆ,

೨) ತೆರಿಗೆ-ಕರಗಳ ಸಂಖ್ಯೆ ಪ್ರಕಾರಗಳು ಹಾಗೂ ಜಟಿಲತೆ ಹೆಚ್ಚಾಗಿರುವುದು ಎರಡನೇ ಮುಖ್ಯ ಕಾರಣವು.

ಸಾಕ್ಷರತೆಯ ಪ್ರಮಾಣ ಮೊದಲೇ ಕಡಿಮೆಯಿರುವ ನಮ್ಮ ದೇಶದಲ್ಲಿ ಕಾನೂನುಗಳು ಹಾಗೂ ಆಡಳಿತದ ವ್ಯವಹಾರ ಇಂಗ್ಲಿಷದಲ್ಲಿದೆ. ಇತ್ತೀಚೆಗೆ ಕನ್ನಡದಲ್ಲಿ, ಆಯಾ ನಾಡಿನ ಪ್ರಾದೇಶಿಕ ಭಾಷೆಯಲ್ಲಿ ಆಡಳಿತ ನಡೆಯಬೇಕೆಂಬ ಒತ್ತಾಯ ಬರಹತ್ತಿರುವುದು ಶುಭ ಸೂಚನೆಯಾದರೂ ಕಾನೂನುಗಳು ಪ್ರಾದೇಶಿಕ ಭಾಷೆಗಳಲ್ಲಿ ಸಾಕಷ್ಟಿರುವುದಿಲ್ಲ. ಇದಲ್ಲದೆ ಇಂದಿನ ಚಲೆವಳಿಕೆಯ ದಿನದಲ್ಲಿ ವೃತ್ತಿ-ಉದ್ಯೋಗ-ವ್ಯವಸಾಯ-ನೌಕರಿಯಲ್ಲಿ ಸಾಕಷ್ಟು ಸಮಯ ವ್ಯಯವಾಗುವುದರಿಂದ ತೆರಿಗೆ-ಕರಗಳ ಬಗೆಗೆ ವಿಚಾರ ಮಾಡಲು

ಕೂಡ ಸಮಯಾಭಾವವಿರುತ್ತದೆ. ಎರಡನೇ ಮುಖ್ಯ ಕಾರಣವೆಂದರೆ, ವರ್ಷದಿಂದ ವರ್ಷಕ್ಕೆ ಸರಕಾರಕ್ಕೆ ಸಲ್ಲಿಸಬೇಕಾದ ಕರದ ಕುರಿತು ಸರಕಾರದ ನೀತಿ ಹೆಚ್ಚು ಹೆಚ್ಚು ಜಟಿಲ-ವಿಸ್ತಾರವಾಗಹತ್ತಿದ್ದು ನಾನಾ ವಿಧದ ಕಾಯ್ದೆ ಕಾನೂನುಗಳು ರಚಿತವಾಗಿ ಅವು ಈಗ ಬೃಹದಾಕಾರದಲ್ಲಿ ಬೆಳೆದು ನಿಂತಿವೆ. ಸದ್ಯದ ಮಟ್ಟಿಗೆ ಹೇಳಬೇಕೆಂದರೆ ಸರ್ವಸಾಧಾರಣವಾಗಿ ೧೮,೦೦೦ ರೂ. ವಾರ್ಷಿಕ ನಿವ್ವಳ ಆದಾಯವಿರುವ ಒಬ್ಬ ಕೆಳ ಮಧ್ಯಮ ವರ್ಗದ ನಾಗರಿಕ ತನ್ನ ಉದ್ಯೋಗ, ವೃತ್ತಿ, ವ್ಯಾಪಾರಗಳಿಗನುಸಾರವಾದಿ ನಾನಾ ವಿಧದ ಕರ ಕಾಯ್ದೆಗಳಿಗನುಸಾರವಾಗಿ ವಿಚಾರಮಾಡಿ ನಿರ್ಣಯ ತೆಗೆದುಕೊಂಡು ಅದಕ್ಕೆ ಅನುಗುಣವಾದಿ ತನ್ನ ಆರ್ಥಿಕ ಮಟ್ಟವನ್ನು ಕಾಯ್ದುಕೊಳ್ಳಲು ಹಾಗೂ ಅದನ್ನು ಅಭಿವೃದ್ಧಿ ಪಡಿಸಿಕೊಳ್ಳಲು ಹೆಣಗಾಡಬೇಕಾಗುತ್ತದೆ. ಇದು ಸರ್ವ ಸಾಮಾನ್ಯ ಪರಿಸ್ಥಿತಿಯಾದರೆ, ಬೃಹತ್ ಉದ್ಯಮದ ಉದ್ಯೋಗಗಳು, ದೊಡ್ಡದೊಡ್ಡ ಗಿರಣಿ–ಕಾರಖಾನೆಗಳ ಮಾಲೀಕರು, ಸಿನೇಮಾ–ನಾಟಕ ಗೃಹಗಳ ಒಡೆಯರು, ಹೋಟೆಲ ಮಾಲಿಕರು, ಆಮದು–ರಫ್ತುಗಳ ವ್ಯಾಪಾರಿಗಳು, ಅಧಿಕ ಸಂಬಳ ಪಡೆಯುತ್ತಿರುವ ಅಧಿಕಾರಿಗಳು ಹಾಗೂ ನೌಕರರು ಇವರಿಗೆ ಕರ ಋಣ ನಿತ್ಯದ ಸಮಸ್ಯೆಯಾಗಿದ್ದು ತೆರಿಗೆ (ಕರ) ಕಾಯಿದೆ ಸಲಹೆಗಾರರ ಸಹಾಯವಿಲ್ಲದೆ ಕರಸಂದಾಯ ಮಾಡುವದು ದುಸ್ಸಾಧ್ಯವಾಗಹತ್ತಿದೆ.

ಏಕೆಂದರೆ ಇಂದು ತೆರಿಗೆ-ಕರಗಳ ಸಂಖ್ಯೆ ಹಾಗೂ ಪ್ರಕಾರಗಳು ವಿಚಿತ್ರ ರೀತಿ ಬೆಳೆದಿದ್ದು ಸದ್ಯದ ಪರಿಸ್ಥಿತಿಯಲ್ಲಿ ಸ್ಥೂಲವಾದಿ ಈ ಕೆಳಗೆ ಕಾಣಿಸಿದ ಕರಗಳ ವ್ಯವಸ್ಥೆ ಇರುತ್ತದೆ,

ಕರಗಳಲ್ಲಿ ಮುಖ್ಯವಾಗಿ ಎರಡು ಪ್ರಕಾರಗಳು,

೧) ಪ್ರತ್ಯಕ್ಷ ಕರ
೨) ಅಪ್ರತ್ಯಕ್ಷ ಕರ

ಪ್ರತ್ಯಕ್ಷ ಕರದಲ್ಲಿ ಮತ್ತೆ ಮೂರು ಪ್ರಕಾರಗಳಿವೆ.

೧) ಆದಾಯ ಕರ

೨) ಆಸ್ತಿಕರ

೩) ಭಕ್ಷೀಸ ಕರ

ಇದಲ್ಲದೆ ಈ ಹಿಂದೆ ವಾರಸಾ ತೆರಿಗೆ ಎಂಬ ಕರ ವಿಧಿಸಲಾಗಿತ್ತು, ಇದನ್ನು ೧೯೮೬ರಿಂದ ರದ್ದುಪಡಿಸಿದ್ದಾರೆ.

ಇನ್ನು ಅಪ್ರತ್ಯಕ್ಷ ಕರಗಳಲ್ಲಿ ಅನೇಕ ಪ್ರಕಾರಗಳಿದ್ದರೂ ಸ್ಥೂಲವಾಗಿ ೮ ಪ್ರಕಾರಗಳಿವೆ.

೧) ಮಾರಾಟ ತೆರಿಗೆ

೨) ಅಬಕಾರಿ ತೆರಿಗೆ

೩) ಆಮದು-ರಫ್ತು ತೆರಿಗೆ

೪) ವ್ಯಾಪಾರ ಮೊತ್ತದ ಟರ್ನಓವರ ಮೇಲಿನ ವಹಿವಾಟ ತೆರಿಗೆ

೫) ಪ್ರವೇಶ ತೆರಿಗೆ

೬) ವೃತ್ತಿ ತೆರಿಗೆ

೭) ಮನರಂಜನಾ ತೆರಿಗೆ

೮) ವಾಹನ ತೆರಿಗೆ ಮೊದಲಾದವು.

ಇನ್ನು ಈ ಕರಗಳಿಗೆ ಸಂಬಂಧಪಟ್ಟ ಕಾಯಿದೇ ಕಾನೂನುಗಳ, ಸಮಸ್ಯೆ, ಲೆಕ್ಕ- ಪತ್ರಗಳನ್ನು ಇಡುವ ಪದ್ಧತಿ, ಕಾಯಿದೆಗಳಿಗನುಗುಣವಾಗಿ ಸರಕಾರಕ್ಕೆ ಸಲ್ಲಿಸಬೇಕಾದ ಕರ ವಿವರ ಪತ್ರಿಕೆ (ರಿಟರ್ನ) ಮೊದಲಾದವುಗಳನ್ನು ತಯಾರಿಸುವುದು, ಅವಶ್ಯ ಸಂದರ್ಭದಲ್ಲಿ ಸಂಬಂಧಿಸಿದ ಅಧಿಕಾರಿಗಳೊಂದಿಗೆ ಚರ್ಚಿಸುವದು, ಕರ ವಿವರಣಾ ಪತ್ರಿಕೆ ಸ್ವೀಕೃತವಾದರೆ ಅದರ ಬಗೆಗೆ ಕೆಲಸ ಕೈಕೊಳ್ಳುವುದು, ಅಸ್ವೀಕೃತವಾದರೆ ಮೇಲ್ಮನವಿ ಸಲ್ಲಿಸುವಿಕೆ, ಮರುವಿಚಾರಣೆಗಾಗಿ ವಿನಂತಿಸಿಕೊಳ್ಳುವಿಕೆ ಮೊದಲಾದವು ಜನಸಾಮಾನ್ಯರಿಗೆ ಅತಿ ಕಠಿಣವಾದ ಸಮಸ್ಯೆಯಾಗುತ್ತವೆ. ಹೀಗಾಗಿ ಈ ಎಲ್ಲ

ಕಾರ್ಯಗಳಿಗೆ ಕರ ಸಲಹೆಗಾರರ ಸಹಾಯ ಅತ್ಯವಶ್ಯವಿರುತ್ತದೆಂಬುದು ಇದರಿಂದ ವಿದಿತವಾಗುತ್ತದೆ.

ಆದ್ದರಿಂದ ಕರ ಸಲಹೆಗಾರರ ವೃತ್ತಿಯ ಮಹತ್ವ ಹಾಗೂ ಈ ವೃತ್ತಿಯವರ ಕೊರತೆ ಎಷ್ಟು ಎಂಬುದು ತಿಳಿಯುತ್ತದೆ. ಆದಾಗ್ಯೂ ಎಲ್ಲ ಕರ ಸಲಹೆಗಾರವೃತ್ತಿಚನ್ನಾಗಿ ನಡೆಯುತ್ತದೆ ಎಂದು ಹೇಳಲುಬಾರದು.ಆದ್ದರಿಂದ ಫಲ ಜ್ಯೋತಿಷ್ಯದಲ್ಲಿ ಈ ವೃತ್ತಿ ಕೈಕೊಳ್ಳಲು ಜಾತಕವೆಂತಿರಬೇಕು. ಕಾರಕ ಗ್ರಹ ಸ್ಥಾನ ಲಗ್ನ ರಾಶ್ಯಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

ಕಾರಕ ಗ್ರಹ : ಕರ ಸಲಹೆಗಾರ ವೃತ್ತಿ ಕೈಕೊಳ್ಳುವವರ ಕಾರಕ ಗ್ರಹ ಯಾವುದೆಂಬುದನ್ನು ತಿಳಿಯುವ ಮೊದಲು ತೆರಿಗೆ ಸಲಹೆಗಾರಿಕೆ ವೃತ್ತಿ ಕೈಕೊಳ್ಳುವದರಲ್ಲಿಯ ಪ್ರಕಾರಗಳನ್ನು ತಿಳಿಯುವುದು ಅತಿ ಅವಶ್ಯವು. ತೆರಿಗೆ ಸಲಹೆಗಾರಿಕೆ ವೃತ್ತಿ ಕೈಕೊಳ್ಳುವವರು ಮೂರು ವರ್ಗದವರಿರುತ್ತಾರೆ.

೧) ವಕೀಲರು

೨) ಚಾರ್ಟರ್ಡ ಅಕೌಂಟಂಟರು

೩) ಅಧಿಕೃತವಾಗಿ ನೋಂದಾಯಿಸಲ್ಪಟ್ಟಂಥ (ರಜಿಸ್ಟರ್ಡ) ಪ್ರ್ಯಾಕ್ಟಿಶನರ್ಸ.

ಇವರು ಹೆಚ್ಚಾಗಿ ವಾಣಿಜ್ಯ ಶಾಸ್ತ್ರದ ಪದವೀಧರರಾಗಲಿ, ಸರಕಾರದಿಂದ ಮನ್ನಣೆ ಪಡೆದ ಕೋರ್ಸಿನ ತರಬೇತಿ ಪಡೆದವರಾಗಲಿ ಇರುತ್ತಾರೆ. ಆವರ ಫಲಜ್ಯೋತಿಷ್ಯ ಶಾಸ್ತ್ರದ ಪ್ರಕಾರ ಯಾವುದೇ ವರ್ಗದವರಾದರೂ ಬುಧನು ಬಲಾಢ್ಯನಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು. ಏಕೆಂದರೆ ಈ ವೃತ್ತಿಯವರ ಮುಖ್ಯ ಕೆಲಸವೆಂದರೆ ಅರ್ಥಶಾಸ್ತ್ರದ ತತ್ವಗಳ ಮೇರೆಗಿನ ಕರಾಕರಣೆ ಯೋಜನೆ, ಲೆಕ್ಕ-ಪತ್ರ ಬರೆಯುವ ಪದ್ಧತಿ, ಕಾಯಿದೇ ಜ್ಞಾನ ಇವು ಮುಖ್ಯ ವಿಷಯಗಳಾಗಿದ್ದು, ಈ ಎಲ್ಲ ವಿಷಯಗಳಿಗೆ ಬುಧನು ಕಾರಕನು.

ಬುಧನ ತರುವಾಯ ಶನಿಯ ಬಲಾಬಲವನ್ನು ಪರಿಶೀಲಿಸಬೇಕು. ಏಕೆಂದರೆ ಯಾವುದೇ ಕಾಯಿದೆ ಜ್ಞಾನದಲ್ಲಿ ತಜ್ಞತೆ ಪಡೆಯಲು ಶನಿಯ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ. ಬುಧ-ಶನಿಯರ ತರುವಾಯ ಗುರುವಿನ ಬಲಾಬಲವನ್ನು ಪರಿಶೀಲಿಸಬೇಕು. ಏಕೆಂದರೆ ತೆರಿಗೆ ಸಲಹೆಗಾರಿಕೆ ವೃತ್ತಿಯ ಮುಖ್ಯ ಕೆಲಸವೆಂದರೆ ತೆರಿಗೆ ಸಂಬಂಧಿಸಿದ ಕೆಲಸವಲ್ಲದೆ ವಕೀಲಿಕೆಯ ಕೆಲಸವೂ ಇರುವುದಲ್ಲದೆ ಸಲಹೆಗಾರಿಕೆಯ ವೃತ್ತಿಯೂ ಸಹ ಇರುತ್ತದೆ. ಯಾವುದೇ ಸಲಹೆಗಾರಿಕೆ ವೃತ್ತಿಗೆ ಗುರು ಬಲಾಢ್ಯನಿರಬೇಕಾಗುತ್ತದೆ. ಯಾವುದೇ ವಕೀಲಿ ವೃತ್ತಿಗೆ ಶನಿಯು ಕಾರಕನು. ಯಾವುದೇ ಪ್ರಕಾರದ ತೆರಿಗೆಗೆ ಅರ್ಥಶಾಸ್ತ್ರಕ್ಕೆ ಲೆಕ್ಕ ಪತ್ರದ ವಿಷಯಕ್ಕೆ ಬುಧನು ಕಾರಕನು. ಆದರೆ ಇಲ್ಲಿ ಮಹತ್ವದ ಸಂಗತಿ ಎಂದರೆ ಬುಧನು ರಾಶಿಬಲದವನೂ ಸ್ಥಾನಬಲದವನೂ ಯೋಗಕಾರಕನೂ ಇದ್ದರೆ ಶನಿ-ಗುರುಗಳು ಕೇವಲ ರಾಶಿಬಲದವರಿರುತ್ತಾರೆ.

**ಸ್ಥಾನ :** ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಸಲಹೆಗಾರಿಕೆಯ ಸ್ಥಾನವಾದ ಪಂಚಮವೂ ಲೆಕ್ಕ ಪತ್ರದ ಸ್ಥಾನವಾದ ತೃತೀಯವೂ ಬಲಾಢ್ಯವಿದ್ದು ಈ ಮೂರು ಸ್ಥಾನಗಳೂ, ಈ ಸ್ಥಾನಾಧೀಶರೂ ಬಲಾಢ್ಯರಿದ್ದ ಜಾತಕನು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾನೆ.

**ಕಾರಕ ಲಗ್ನ :** ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ, ಕರ್ಕ, ಕನ್ಯಾ, ತುಳಾ, ಧನು, ಮಕರ, ಮೀನ ಈ ಲಗ್ನದವರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

**ರಾಶಿ :** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಮಿಥುನ, ತುಳಾ, ಕುಂಭ ಈ ಮೂರು ರಾಶಿಯವರು ತೆರಿಗೆ ಸಲಹೆಗಾರಿಕೆ ವೃತ್ತಿಯಲ್ಲಿ ನಿಷ್ಣಾತರು. ಇವರ ತರುವಾಯ ವೃಷಭ, ಕರ್ಕ, ಕನ್ಯಾ, ಮೀನ ರಾಶಿಯವರು ಈ ವೃತ್ತಿಯಲ್ಲಿ ಪಳಗುತ್ತಾರೆ.

**ಯೋಗಗಳು :**

೧ ಬುಧ, ಶನಿ, ಗುರು ಈ ಮೂರು ಗ್ರಹಗಳು ಬಲಾಢ್ಯವಿದ್ದ ಜಾತಕನು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾನೆ.

೨) ಬುಧ- ಶನಿ, ಬುಧ - ಗುರು ಬಲಾಢ್ಯರಿದ್ದ ಜಾತಕನು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾನೆ.

೩) ಬುಧನು ದುರ್ಬಲವಿರುವ ಜಾತಕನು ಈ ವೃತ್ತಿ ಕೈಕೊಳ್ಳದಿರುವದೇ ಲೇಸು.

೪) ಬುಧನೊಂದಿಗೆ ರವಿಯು ಬಲಾಢ್ಯನಿದ್ದ ಜಾತಕನಿಗೆ ಸರಕಾರಿ ಅಧಿಕಾರಿಗಳ ಹಾಗೂ ತೆರಿಗೆ ಸಂಬಂಧಿಸಿದ ಅಧಿಕಾರಿಗಳ ಸಹಾಯ-ಸಹಕಾರ ಸಾಕಷ್ಟು ಸಿಗುತ್ತದೆ.

## ೭) ಟ್ಯುಟೋರಿಯಲ್ (ಕೋಚಿಂಗ)ಕ್ಲಾಸುಗಳ ಹಾಗೂ ವಿಶಿಷ್ಟ ಪರಿಕ್ಷಾ ವಿಷಯುಗಳ ತರಬೇತಿ ಕೋರ್ಸುಗಳು

ಟ್ಯುಟೋರಿಯಲ್, ಕೋಚಿಂಗ ಕ್ಲಾಸುಗಳನ್ನು ನಡೆಯಿಸಿ, ಇಲ್ಲವೆ ಯಾವುದೊಂದು ವಿಷಯದ, ಕಲೆಯ ಕ್ಲಾಸುಗಳನ್ನು ನಡೆಯಿಸಿ,ಇಲ್ಲವೆ ಮನೆಯಲ್ಲಿಯೇ ಮಕ್ಕಳಿಗೆ ವಿದ್ಯಾರ್ಥಿಗಳಿಗೆ ಪಾಠ ಹೇಳಿ ಉಪಜೀವನ ಮಾಡುವ ಪದ್ಧತಿ ಬಹು ಪುರಾತನ ಕಾಲದಿಂದಲೂ ಇದೆ. ವೇದಾಧ್ಯಯನ-ವಾದ್ಯ-ನೃತ್ಯ-ಸಂಗೀತ ಮೊದಲಾದ ವಿಷಯುಗಳನ್ನು ಮನೆಯಲ್ಲಿ, ಮಠಗಳಲ್ಲಿ ಕಲಿಸುವ ಗುರುಕುಲ ಪದ್ಧತಿ ಮೊದಲಿನಿಂದಲೂ ಇದೆ. ಆದರೆ ಶಿಕ್ಷಕ ವೃತ್ತಿ ಈಗಿನಂತೆ ವ್ಯಾಪಾರೀ ವೃತ್ತಿಯಾಗಿದ್ದಿಲ್ಲ.

ಶಾಲೆ-ಕಾಲೇಜುಗಳ ಹೊರತಾಗಿ ಟ್ಯುಶನ್ ಹೇಳಿಸಿಕೊಂಡು ತೇರ್ಗಡೆ

ಯಾಗುವುದು ತಮ್ಮ ವ್ಯಕ್ತಿತ್ವಕ್ಕೆ ಕುಂದು ಎಂದು ವಿದ್ಯಾರ್ಥಿಗಳು ತಿಳಿದು ಕೊಳ್ಳುವ ಕಾಲವೊಂದಿತ್ತು; ಇದರಂತೆ ಮನೆಯಲ್ಲಿ ಪ್ರತ್ಯೇಕ ಟ್ಯೂಶನ್ ಹೇಳುವುದು ಕೂಡ ಶಿಕ್ಷಕ ವೃತ್ತಿಯ ಘನತೆಗೆ ಕುಂದು ಎಂದು ತಿಳಿಯುವ ಕಾಲವೂ ಇತ್ತು. ಜ್ಞಾನ ಸಂಪಾದನೆಗಾಗಲಿ ಪರೀಕ್ಷೆಗಳಲ್ಲಿ ತೇರ್ಗಡೆ ಯಾಗುವದಕ್ಕಾಗಲಿ ಟ್ಯೂಶನ್ ಹೇಳಿಸಿಕೊಳ್ಳುತ್ತಿದ್ದರು. ಈಗ ಹಾಗಿಲ್ಲ, ಪರೀಕ್ಷೆಯಲ್ಲಿ ಹೆಚ್ಚಿನ ಗುಣ ಸಂಪಾದನೆಗೋಸ್ಕರ ಟ್ಯೂಶನ್ ಹೇಳಿಸಿ ಕೊಳ್ಳುವ ಪ್ರಸಂಗವಿದೆ, ಅಷ್ಟೇ ಏಕೆ, ಟುಶನ್ ಹೇಳಿಸಿಕೊಳ್ಳದ ಪರೀಕ್ಷೆ ಗಳಲ್ಲಿ ಹೆಚ್ಚಿನ ಗುಣ ಸಂಪಾದಿಸುವುದು ಕಠಿಣವೆಂಬ ಪರಿಸ್ಥಿತಿ ನಿರ್ಮಾಣ ವಾಗಿದೆ. ಇದಕ್ಕೆ ಅನೇಕ ಕಾರಣಗಳಿವೆ. ಅವುಗಳಲ್ಲಿ ಪ್ರಮುಖವಾದ ಮೂರು ಕಾರಣಗಳಿವೆ.

ಮೊದಲನೇ ಹಾಗೂ ಮುಖ್ಯ ಕಾರಣವೆಂದರೆ, ಈ ಹಿಂದೆ ವಿದ್ಯಾರ್ಥಿ ಗಳು ಮೊದಲನೆಯ ವರ್ಗದಲ್ಲಿ ತೇರ್ಗಡೆಯಾದರೆ ಸಾಕು, ಇಂಜನೀಯ ರಿಂಗ್ ಮೆಡಿಕಲ್ ಮೊದಲಾದ ಕೋರ್ಸುಗಳಿಗೆ ಪ್ರವೇಶ ದೊರೆಯು ತ್ತಿತ್ತು. ಈಗ ಹಾಗಿಲ್ಲ, ೧೦೦ಕ್ಕೆ ೮೦ ರ ಮೇಲೆ ಗುಣ ಸಂಪಾದಿಸಿದರೂ ಪ್ರವೇಶ ದೊರೆಯುವದಿಲ್ಲ, ಎರಡನೆಯದಾಗಿ ಟುವಿಶನ್ ಇಲ್ಲದೆ ಶಾಲೆ ಕಾಲೇಜುಗಳಲ್ಲಿ ಅಧ್ಯಯನ ಮಾಡಿ ಹೆಚ್ಚಿನ ಗುಣ ಸಂಪಾದಿಸುವುದು ಅಸಾಧ್ಯ ವಾಗಿದೆ. ಇದಕ್ಕೆ ಅನೇಕ ಕಾರಣಗಳಿವೆ. ಶಾಲೆ ಕಾಲೇಜುಗಳಲ್ಲಿ ವಿದ್ಯಾ ರ್ಥಿಗಳ ಸಂಖ್ಯೆ ಮೊದಲಿಗಿಂತಲೂ ಹೆಚ್ಚಾಗಿರುವುದರಿಂದ ವೈಯಕ್ತಿಕವಾಗಿ ವಿದ್ಯಾರ್ಥಿಗಳ ಕಡೆಗೆ ಲಕ್ಷ ಕೊಡುವುದು ಶಿಕ್ಷಕರಿಗೆ ಶಕ್ಯವಿಲ್ಲ. ಮೂರ ನೆಯದಾಗಿ ಯೋಗ್ಯ ಶಿಕ್ಷಕರಿಲ್ಲದಿರುವುದು ಕೂಡ ಶಿಕ್ಷಣ ಗುಣಮಟ್ಟ ಇಳಿ ಯುವುದಕ್ಕೆ ಕಾರಣ. ಹೀಗಾಗಿ ವಿದ್ಯಾರ್ಥಿಗಳಿಗೆ ಟ್ಯುಟೋರಿಯಲ್ ಕ್ಲಾಸಿಗೆ ಹೋಗುವದು ಅನಿವಾರ್ಯವಷ್ಟೇ ಅಲ್ಲ ಅತ್ಯವಶ್ಯವೂ ಹೌದು. ಅಂತೆಯೇ ಟ್ಯುಟೋರಿಯಲ್ ಕ್ಲಾಸಗನ್ನು ನಡೆಸುತ್ತಿರುವ ಶಿಕ್ಷಕರ ವೃತ್ತಿ ಚೆನ್ನಾಗಿ ನಡೆಯುತ್ತಿದೆ.

ಇದರಂತೆ ಆಯ್. ಎ. ಎಸ್., ಬ್ಯಾಂಕಿಂಗ್ ಮೊದಲಾದ ಸ್ಪರ್ಧಾ ತ್ಮಕ ಪರೀಕ್ಷೆಗಳಲ್ಲಿ ಮೇಲ್ನಂಬರ ಪಡೆದು ತೇರ್ಗಡೆಯಾಗುವದಕ್ಕೆ

ಕೋಚಿಂಗ್ ಕ್ಲಾಸುಗಳಲ್ಲಿ ತರಬೇತಿ ಹೊಂದಬೇಕಾಗುತ್ತದೆ. ಇದರಿಂದಾಗಿ ಈವೃತ್ತಿಯು ಚನ್ನಾಗಿ ನಡೆಯುತ್ತದೆ. ಇದಲ್ಲದೆ ಸಂಗೀತ, ವಾದ್ಯ, ನೃತ್ಯ, ಚಿತ್ರ, ಶಿಲ್ಪ ಮೊದಲಾದ ಲಲಿತ ವಿದ್ಯೆಗಳನ್ನು ಮನೆಯಲ್ಲಿಯೇ ಪಾಠ ಹೇಳುವ ಶಿಕ್ಷಕ್ಷ ವೃತ್ತಿ ಕೂಡ ಚೆನ್ನಾಗಿ ನಡೆಯುತ್ತದೆ. ಆದಾಗ್ಯೂ ಟ್ಯುಟೋರಿಯಲ್ ಕ್ಲಾಸುಗಳಲ್ಲಿ ನಡೆಸುತ್ತಿರುವ ಶಿಕ್ಷಕರೇ ಆಗಲಿ, ವ್ಯಕ್ತಿ ಶಿಕ್ಷಣ ನಡೆಸುತ್ತಿರುವ ವೃತ್ತಿಯವರೇ ಆಗಲಿ, ತರಬೇತಿ ಶಿಕ್ಷಣ ವೃತ್ತಿಯ ವರೇ ಆಗಲಿ ಸಂಗೀತ ವೊದಲಾದ ಲಲಿತ ಕಲೆಗಳ ವರ್ಗವನ್ನು ಪ್ರಾರಂಭಿಸಿದವರೇ ಇರಲಿ, ಎಲ್ಲರ ವೃತ್ತಿ ಚೆನ್ನಾಗಿ ನಡೆಯುತ್ತದೆ ಎಂದು ಹೇಳಲು ಬಾರದು. ಶಿಕ್ಷಕ ವೃತ್ತಿಯ ಕಾರಕ ಗ್ರಹ ಬಲಾಢ್ಯವಿರದೆ ಯಾರೂ ಯಶಸ್ವಿಯಾಗಲಾರರು. ಆದ್ದರಿಂದ ಫಲ ಜ್ಯೋತಿಷ್ಯದಲ್ಲಿ ಈ ವೃತ್ತಿಯ ಕಾರಕ ಗ್ರಹ ಸ್ಥಾನ ರಾಶ್ಯಾದಿಗಳಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ :** ಬಾಲವಾಡಿ ಶಿಕ್ಷಕರಿರಲಿ, ಪ್ರಾಥಮಿಕ ಶಾಲೆಯ ಶಿಕ್ಷಕರೇ ಇರಲಿ, ಪ್ರೌಢ ಶಾಲೆಯ, ಹೈಸ್ಕೂಲಿನ ಶಿಕ್ಷಕರೇ ಇರಲಿ, ಕಾಲೇಜ-ವಿಶ್ವವಿದ್ಯಾಲಯಗಳ ಅಧ್ಯಾಪಕರೇ ಇರಲಿ, ಟ್ಯುಟೋರಿಯಲ್ ಕ್ಲಾಸ ನಡೆಸುತ್ತಿರುವವರೇ ಇರಲಿ, ಕೋಚಿಂಗ ಕ್ಲಾಸ ನಡೆಸುತ್ತಿರುವವರೇ ಇರಲಿ, ವೃತ್ತಿ ತರಬೇತಿಯ ಶಿಕ್ಷಕರೇ ಇರಲಿ, ಸಂಗೀತ - ವಾದ್ಯ-ನೃತ್ಯ-ವೇದಾಧ್ಯಯನದ ಶಿಕ್ಷಕರೇ ಇರಲಿ, ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ವಿದ್ಯಾರ್ಥಿಗಳಿಗೆ ಯಾರು ಪಾಠವನ್ನು ಹೇಳಿ ಕೊಡುವರೋ ಅವರೆಲ್ಲ ಶಿಕ್ಷಕರು. ಅವರು ಶಾಲೆ ಕಾಲೇಜುಗಳಲ್ಲಿ ಕಲಿಸಲಿ, ಮನೆ ಪಾಠಗಳಲ್ಲಿ ಕಲಿಸಲಿ, ಸರಕಾರದ ಖಾಸಗಿ ಸಂಘ-ಸಂಸ್ಥೆಗಳಲ್ಲಿಯೆ ಇರಲಿ, ಖಾಸಗಿಯಾಗಿ ತಮ್ಮ ಮನೆಯಲ್ಲಿಯೇ ಕಲಿಸಲಿ, ಗುರುವಿನ ಗುರುತ್ವವಿರದೆ ಯಾರೂ ಗುರುವಾಗಲಾರರು; ಅರ್ಥಾತ್ ಈ ವೃತ್ತಿಗೆ ಗುರುವು ಕಾರಕನು.

ಗುರುವಿನ ತರುವಾಯ ಬುದ್ಧಿ ಗ್ರಹವಾದ ಬುಧನು ಕೆಲ ಮಟ್ಟಿಗೆ ಕಾರಕನು. ಗುರು-ಬುಧರ ತರುವಾಯ ಆಯಾ ವಿಷಯಗಳ

ಕಾರಕ ಗ್ರಹಗಳ ಬಲಾಬಲವನ್ನು ಪರಿಶೀಲಿಸಬೇಕು. ಉದಾಹರಣೆಗೆ: ಮನೆಯಲ್ಲಿ ಸಂಗೀತ ಕಲಿಯುವ ವಿದ್ಯಾರ್ಥಿಗಳಿಗೆ ಸಂಗೀತ ಪಾಠಗಳ ವರ್ಗ ವನ್ನು ಪ್ರಾರಂಭಿಸುವ ಶಿಕ್ಷಕರಿಗೆ ಗುರುವಿನೊಂದಿಗೆ ಶುಕ್ರನ ಬಲಾಬಲ ವನ್ನು ಪರಿಶೀಲಿಸಬೇಕು. ಇದರಂತೆ ಕ್ರಿಕೆಟ ಕೋಚಿಂಗ ವೃತ್ತಿಯನ್ನು ಪ್ರಾರಂಭಿಸುವ ಶಿಕ್ಷಕರಿಗೆ ಗುರುವಿನೊಂದಿಗೆ ರವಿ-ಮಂಗಳರ ಬಲಾಬಲ ವನ್ನು ಪರಿಶೀಲಿಸಬೇಕು. ಇದರಂತೆ ಬ್ಯಾಂಕಿಂಗ್ ಪರೀಕ್ಷೆ, ಆಯ್.ಎ. ಎಸ್.ಗಳಂಥ ಸ್ಪರ್ಧಾತ್ಮಕ ಪರೀಕ್ಷೆಗಳ ಕೋಚಿಂಗ್ ವರ್ಗ ತೆರೆಯಲು ಗುರು ವಿನೊಂದಿಗೆ ರವಿ-ಬುಧರ ಬಲಾಬಲವನ್ನು ಪರಿಶೀಲಿಸಬೇಕು. ಹೀಗೆ ಆಯಾ ವೃತ್ತಿಗಳ, ಆಯಾ ವಿಷಯಗಳ ಕಾರಕ ಗ್ರಹಗಳ ಬಲಾಬಲವನ್ನು ಪರಿಶೀಲಿಸಬೇಕು. ಆದರೆ ಒಂದು ಸಂಗತಿ ಗುರುವು ರಾಶಿ ಬಲದ ವನೂ ಸ್ಥಾನ ಬಲದವನೂ ಯೋಗಕಾರಕನೂ ಇದ್ದರೆ, ಆಯಾ ವಿಷಯಗಳ ಆಯಾ ವೃತ್ತಿಗಳ ಗ್ರಹಗಳು ಕೇವಲ ರಾಶಿ ಬಲದವಿರುತ್ತವೆ.

**ಸ್ಥಾನ :** ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಶಿಕ್ಷಕ ವೃತ್ತಿಗೆ ನಿಶ್ಚಿತವಾದ ಸ್ಥಾನ ಕಾರಕವಿರುತ್ತವೆ. ಕಲಿಯುವದು, ಮತ್ತು ಕಲಿಸುವುದು ಇವುಗಳಲ್ಲಿ ಅಂತರವಿದೆ. ಪಂಡಿತ, ವಿದ್ವಾಂಸರೆಲ್ಲರೂ ಯಶಸ್ವಿ ಶಿಕ್ಷಕ ರಾಗಲಾರರು. ಬೋರ್ಡ, ವಿಶ್ವವಿದ್ಯಾಲಯಗಳ ಪರೀಕ್ಷೆಗಳಲ್ಲಿ ಮೇಲು ದರ್ಜೆ (ಶ್ರೇಣಿ)ಯಲ್ಲಿ ತೇರ್ಗಡೆಹೊಂದಿ ಪ್ರಶಸ್ತಿ, ಪದಕಗಳನ್ನು ಪಡೆದವ ರೆಲ್ಲರೂ ಯಶಸ್ವಿ ಶಿಕ್ಷಕರಾಗುತ್ತಾರೆ ಎಂದು ಹೇಳಲು ಬಾರದು. ಉತ್ತಮ ಗಾಯಕನೆಂದು ಹೆಸರು ಪಡೆದವ ಉತ್ತಮ ಸಂಗೀತ ಶಿಕ್ಷಕನಾಗುವನೆಂದು ಹೇಳಲಾಗದು. ಅದರಲ್ಲಿಯೂ ಟ್ಯುಟೋರಿಯಲ್ ಕ್ಲಾಸುಗಳನ್ನು ಖಾಸಗಿ ಯಾಗಿ ಮನೆಯಲ್ಲಿ ಪ್ರಾರಂಭಿಸುವವರಿಗೆ ಶಿಕ್ಷಕ ವೃತ್ತಿಗೆ ಸ್ಥಾನ ಬಲಾಢ್ಯ ವಿರಬೇಕು. ಶಿಕ್ಷಕ ವೃತ್ತಿಯ ಸ್ಥಾನವೆಂದರೆ ದ್ವಿತೀಯ-ಪಂಚಮ- ತೃತೀಯ ಸ್ಥಾನಗಳು ಕಾರಕವಿದ್ದು, ಈ ಸ್ಥಾನಗಳೂ ಈ ಸ್ಥಾನಾಧೀಶರೂ ಬಲಾಢ್ಯರಿರದೆ, ಅದರಲ್ಲಿಯೂ ದ್ವಿತೀಯ-ಪಂಚಮ ಸ್ಥಾನಗಳೂ ಸ್ಥಾನಾ ಧೀಶರೂ ಬಲಾಢ್ಯರಿರದೆ ಯಾರೂ ಯಶಸ್ವಿಯಾಗರು.

**ಲಗ್ನ :** ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಶಿಕ್ಷಕ ವೃತ್ತಿಗೆ

ನಿರ್ದಿಷ್ಟ ಲಗ್ನಗಳೇ ಇರಬೇಕೆಂಬ ನಿಯಮವಿದ್ದು, ಮೇಷ, ವೃಷಭ, ಮಿಥುನ, ಸಿಂಹ, ಕನ್ಯಾ, ಧನು, ವೃಶ್ಚಿಕ,ಮೀನ ಈ ಲಗ್ನದವರೇ ಹೆಚ್ಚಾಗಿ ರುತ್ತಾರೆ.

**ರಾಶಿ :** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಮಿಥುನ, ತುಳಾ, ಕುಂಭ, ಈ ರಾಶಿಯವರು ತದನಂತರ ಮೇಷ, ಸಿಂಹ, ಕರ್ಕ, ಮೀನ ಈ ರಾಶಿಯವರು ಯಶಸ್ವಿ ಶಿಕ್ಷಕರಾಗುತ್ತಾರೆ.

## ೮) ದಸ್ತು ಬರೆಹಗಾರರು (ಬಾಂಡ ರೈಟರ್ಸ್)

ದಸ್ತು ಬರೆಹಗಾರರ ( ಬಾಂಡ ರೈಟರ್ಸ ) ವೃತ್ತಿಗೆ ಇತ್ತೀಚೆಗೆ ಬಹಳ ಮಹತ್ವ ಬಂದಿದೆ. ಏಕೆಂದರೆ ಖರೀದಿ-ವಿಕ್ರಿಪತ್ರಗಳನ್ನಾಗಲಿ, ವತ್ತಿಪತ್ರ ಗಳನ್ನಾಗಲಿ,ಮೃತ್ಯು ಪತ್ರಗಳನ್ನಾಗಲಿ,ವಿಭಾಗ(ವಾಟಣಿ)ಪತ್ರಗಳನ್ನಾಗಲಿ, ದತ್ತಕ-ದಾನ-ಭಕ್ಷೀಸಪತ್ರ ಮೊದಲಾದ ವ್ಯವಹಾರದ ಮಹತ್ವದ ದಾಖಲೆ ಪತ್ರಗಳನ್ನಾಗಲಿ ನೋಂದಣಿ ಖಾತೆ (ಸಬ್‌ರಜಿಸ್ಟ್ರಾರ) ಯಲ್ಲಿ ನೋಂದಾಯಿ ಸಲು ಕಾಯಿದೆಗನುಗುಣವಾದ (ಡ್ರಾಫ್ಟ) ತಯಾರಿಸಿ ಬರೆಯಬೇಕಾಗುವ್ರ ದರಿಂದ ದಸ್ತು ಬರೆಹಗಾರರ ಸಹಾಯ ಬೇಕಾಗುತ್ತದೆ. ಅಂತೆಯೇ ಈ ದಸ್ತು ಬರೆಹಗಾರರ ವೃತ್ತಿಗೆ ಬಹಳ ಮಹತ್ವ ಬಂದಿದೆ. ಆದಾಗ್ಯೂ ಎಲ್ಲ ದಸ್ತು ಬರೆಹಗಾರರ ವೃತ್ತಿ ಚನ್ನಾಗಿ ನಡೆಯುತ್ತಿದೆಯೆಂದು ಹೇಳಲು ಬಾರದು. ಆದ್ದರಿಂದ ಫಲ ಜ್ಯೋತಿಷ್ಯದಲ್ಲಿ ಈ ವೃತ್ತಿ ಕೈಕೊಳ್ಳಲು ಜಾತಕವೆಂತಿರಬೇಕು, ಕಾರಕ ಗ್ರಹ ಸ್ಥಾನ ಲಗ್ನ ರಾಶ್ಯಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ —** ದಸ್ತು ಬರೆಹಗಾರರ ವೃತ್ತಿ ಕೈಕೊಳ್ಳುವವರ ಕಾರಕಗ್ರಹ ಯಾವವು ಎಂಬುದನ್ನು ತಿಳಿಯುವ ಪೊದಲು ದಸ್ತು ಬರೆಹ ಗಾರರಲ್ಲಿಯ ಪ್ರಕಾರಗಳನ್ನು ತಿಳಿಯುವುದು ಅತ್ಯಾವಶ್ಯವು. ಈ ವೃತ್ತಿ ಯನ್ನು ಕೈಕೊಳ್ಳುವವರು ಮುಖ್ಯವಾಗಿ ನಾಲ್ಕು ವರ್ಗದವರು.

೧) ವಕೀಲರು

೨) ಕಂದಾಯ ಖಾತೆಯ ನಿವೃತ್ತ ನೌಕರರು
೩) ನೋಂದಣಿ ಖಾತೆಯ ನಿವೃತ್ತ ನೌಕರರು
೪) ಸರಕಾರದಿಂದ ಅಧಿಕೃತವಾಗಿ ಮನ್ನಣೆ ಪಡೆದ ವ್ಯಕ್ತಿಗಳು

ಇವರು ಹೆಚ್ಚಾಗಿ ಬರೆಹಗಾರಿಕೆಯ ಪರೀಕ್ಷೆಯಲ್ಲಿ ತೇರ್ಗಡೆಯಾದವರು. ಆದರೆ ಫಲಜ್ಯೋತಿಷ್ಯ ಶಾಸ್ತ್ರದ ಪ್ರಕಾರ ಯಾವುದೆ ವರ್ಗದವರಿದ್ದರೂ ಬುಧ, ಗುರು, ಶನಿಯರು ಬಲಾಢ್ಯರಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು. ಏಕೆಂದರೆ ಛಾಪಾ ( ಸ್ಟಾಂಪ ) ಕಾಗದದ ಮೇಲೆ ಬರೆಯುವ ವೃತ್ತಿಯ ಮೇಲೆ ಬುಧನ ಪ್ರಭುತ್ವವಿರುವುದಲ್ಲದೆ ಖರೀದಿ, ವಿಕ್ರಿ, ವತ್ತಿ, ಮೊದಲಾದ ವ್ಯವಹಾರವು ಬುಧನ ಗುಣಧರ್ಮದ್ದು. ಆದ್ದರಿಂದ ಬುಧನು ಈ ವೃತ್ತಿಗೆ ಕಾರಕನು. ಬುಧನ ತರುವಾಯ ಗುರುವು ಕೂಡ ಈ ವೃತ್ತಿಗೆ ಕಾರಕನು. ಏಕೆಂದರೆ ಮೃತ್ಯು ಪತ್ರ, ದಾನ (ಭಕ್ಷಿಸು ಪತ್ರ,) ವಿಭಾಗಣಿ ಪತ್ರ ಮೊದಲಾದ ವ್ಯವಹಾರಗಳು ಗುರುವಿನ ಗುಣಧರ್ಮದವು. ಬುಧ-ಗುರುಗಳ ತರುವಾಯ ಶನಿಯ ಬಲಾಬಲವನ್ನು ಪರಿಶೀಲಿಸಬೇಕು. ಏಕೆಂದರೆ ದಸ್ತು ಬರೆಹಗಾರರಿಗೆ ಕಾಯಿದೆ-ಕಾನೂನುಗಳ ಜ್ಞಾನವು ಅವಶ್ಯವಿರುತ್ತದೆ. ಅಲ್ಲದೆ ಹೊಸದಾಗಿ ರಚಿಸಲ್ಪಟ್ಟ, ಪರಿಷ್ಕೃತವಾದ, ಪರಿಷ್ಕರಿಸಲ್ಪಟ್ಟ, ಪರೀಕ್ಷಿಸಲ್ಪಟ್ಟ ( ರಿವಾಯಿಜ್ಡ ) ಇಲ್ಲವೆ ತಿದ್ದುಪಡಿಯಾದ ಮಸೂದೆಗಳ ಜ್ಞಾನವು ಸಹ ಇರಬೇಕಾಗುತ್ತದೆ. ಯಾವುದೆ ಪ್ರಕಾರದ ಕಾಯಿದೆ-ಕಾನೂನಗಳಲ್ಲಿ ತಜ್ಞತೆ ಪಡೆಯಲು ಶನಿಯು ಬಲಾಢ್ಯನಿರಬೇಕಾಗುತ್ತದೆ. ಬುಧ-ಗುರು-ಶನಿಯರ ತರುವಾಯ ರವಿಯ ಬಲಾಬಲವನ್ನು ಪರಿಶೀಲಿಸಬೇಕು. ಏಕೆಂದರೆ ರವಿಯು ಬಲಾಢ್ಯನಿದ್ದರೆ ಸರಕಾರಿ ಅಧಿಕಾರಿಗಳ ಸಹಾಯ-ಸಹಕಾರ ಲಭಿಸುತ್ತದೆ. ದಸ್ತು ಬರೆಹಗಾರರಿಗೆ ಸರಕಾರಿ ಅಧಿಕಾರಿಗಳ ನಿಕಟ ಸಂಬಂಧ ಬರುತ್ತದೆ.

ಇದರಲ್ಲಿ ಒಂದು ಮಹತ್ವದ ಸಂಗತಿಯೆಂದರೆ ಬುಧನು ರಾಶಿಬಲದವನೂ ಸ್ಥಾನಬಲದವನೂ ಯೋಗಕಾರಕನೂ ಇದ್ದರೆ, ಗುರು-ಶನಿ-ರವಿಯುವರು ಕೇವಲ ರಾಶಿಬಲದವರಿದ್ದರೆ ಸಾಕು.

**ಸ್ಥಾನ :—** ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಬರೆಹದ ಹಾಗು ಆ ವೃತ್ತಿಯು ಸ್ಥಾನವಾದ ತೃತೀಯವೂ ಡ್ರಾಫ್ಟ (ಮಸೂದೆ) ಸ್ಥಾನವಾದ ಪಂಚಮವೂ ವಾಕ್ ಸ್ಥಾನವಾದ ದ್ವಿತೀಯವೂ ಕಾರಕವಿದ್ದು ಈ ಸ್ಥಾನಗಳು ಹಾಗೂ ಈ ಸ್ಥಾನಾಧಿಪರು ಬಲಾಢ್ಯರಿರಬೇಕು.

**ಕಾರಕಲಗ್ನ :** ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ, ಕನ್ಯಾ, ಮಕರ ಲಗ್ನದವರು ಅನಂತರ ಮೇಷ, ಸಿಂಹ, ಧನು ಲಗ್ನದವರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

**ರಾಶಿ :** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಮಿಥುನ, ತುಲಾ, ಕುಂಭ ರಾಶಿಯವರು ತದನಂತರ ವೃಷಭ, ಕರ್ಕ, ಕನ್ಯಾ, ಮೀನ ಈ ರಾಶಿಯವರು ದಸ್ತು ಬರೆಹಗಾರ ವೃತ್ತಿಯಲ್ಲಿ ನಿಷ್ಣಾತರು.

## ೯) ಲೇಖಕ ( ಗ್ರಂಥಕರ್ತ - ಸಂಪಾದಕ ) ವೃತ್ತಿ

ಕವಿಗಳು ನಿರಂಕುಶರು, ಕವಿಗಳು " ಅನಭಿಷಿಕ್ತಶಾಸಕರು " ಎಂಬ ಮಾತು ಸರ್ವಶೃತವಿದೆ. ಇದರ ಅರ್ಥ ಕವಿಯ ಅರ್ಥಾತ್ ಸಾಹಿತಿ-ಲೇಖಕನ ಕಲ್ಪನೆಯಂತೆ, ಮುನ್ನೋಟದಂತೆ ಮಾನವ ಸಮಾಜದ ಆಗು ಹೋಗುಗಳು ನಡೆಯಬೇಕೆಂದಿರುತ್ತದೆ. ಸಾಹಿತಿಗಳು, ಲೇಖಕರು ಭಾವೀ ಜೀವನದ ಆದರ್ಶವನ್ನು ಒದಗಿಸಬಲ್ಲ ಚೇತನ ಶಕ್ತಿಯಾಗಿರುತ್ತಾರೆ. ಇಂತು, ವಿಚಾರಮಾಡನೆಗೆ ಅದರ ಅಭಿವ್ಯಕ್ತಿಗೆ, ಪ್ರಕಟನೆಗೆ ಸ್ವಾತಂತ್ರ್ಯವಿದೆ ಲೇಖಕರ ಮಾನಸ ಪುಷ್ಪ ಫಲಕಾರಿಯಾದಾಗ ಆದರ್ಶ ಜೀವನ ರೂಪ ಗೊಂಡು ಮಾನವ ಕುಲದ ಆವಿರ್ಭಾವಕ್ಕೆ ನಾಂದಿಯಾಗುತ್ತದೆ. ಹೀಗಾಗಿ ಸಾಹಿತ್ಯ ನವ್ಯ-ಭವ್ಯ ಜೀವನಕ್ಕೆ ದಾರಿದೀಪ. ರವಿ ಕಾಣದುದನ್ನು ಅವರು ಕಾಣಬಲ್ಲರು. ಅಂತೆಯೇ ಅವರು ನವಮಾನವ ಸಮಾಜದ ನಿರ್ಮಾಪಕರು. ಇದಕ್ಕೆ ನಿದರ್ಶನವೆಂದರೆ ಫ್ರಾನ್ಸಿನ ಕ್ರಾಂತಿಗೆ ಮೂಲ ಕಾರಣನಾದ ರುಸೋ, ರಶಿಯಾದ ಕ್ರಾಂತಿಗೆ ಉತ್ತೇಜನ ಕೊಟ್ಟ ಟಾಲಸ್ಟಾಯ್ಯ ಮೊದಲಾದವರನ್ನು ಉದಾಹರಿಸಬಹುದು. ಅಷ್ಟೇ ಏಕೆ, ನಿಯತಕಾಲಿಕ

ವೃತ್ತಪತ್ರಗಳಲ್ಲಿಯ ಲೇಖನಗಳಿಂದಲೂ ಸಿನೇಮಾ ಸಾಹಿತ್ಯದಿಂದಲೂ ರಾಜಕೀಯ-ಸಾಮಾಜಿಕ ಬದಲಾವಣೆಗಳು ಆದ ಬಗೆಗೆ ಸಾಕಷ್ಟು ಉದಾಹರಣೆಗಳಿವೆ. ಅಷ್ಟೇ ಏಕೆ, ಅವರು ಜನ ಜೀವನದ ಮೇಲೆ ಸಾಕಷ್ಟು ಪ್ರಭಾವ ಬೀರುತ್ತಾರೆ, ಅದನ್ನು ಅವರು ಪರಿವರ್ತಿಸುತ್ತಾರೆ.

ಇದರಿಂದಾಗಿ ಜೀವನದ ಬಗೆಗೆ ಉತ್ತಮ ಕಲ್ಪನೆಗಳನ್ನು ತಳೆಯುವ ಎಲ್ಲರೂ ಲೇಖಕ-ಸಾಹಿತಿಗಳಾಗಬೇಕೆಂಬ ಬಯಕೆ ಹೊಂದಿರುವುದರಲ್ಲಿ ಅಸ್ವಾಭಾವಿಕವೇನೂ ಇರುವುದಿಲ್ಲ. ಅಲ್ಲದೆ ಲೇಖಕರಿಗೆ ಸಾಹಿತಿಗಳಿಗೆ ಸಮಾಜದಲ್ಲಿ ದೊರೆಯುವ ಗೌರವ - ಮಾನ - ಸನ್ಮಾನ - ಆದರ ಭಾವನೆಗಳಿಗೆ ಪೋಷಕವಾಗಿವೆ. ಹೀಗಾಗಿ ಇಂದಿನ ಅನೇಕ ಬುದ್ಧಿಜೀವಿಗಳು ಸಾಹಿತಿಗಳಾಗಲು ಲೇಖಕರಾಗಲು ಬಯಸುತ್ತಾರೆ. ಯಾರೊಬ್ಬರು ಲೇಖಕ – ಬರಹಗಾರರೇನೋ ಆಗಬಹುದು, ಆದರೆ ಬರಹಗಾರ ವೃತ್ತಿಯಿಂದ ಉಪಜೀವನ ನಡೆಸಲು ಶಕ್ಯವಿದೆಯೇ ಎಂಬುದನ್ನು ಕಂಡುಕೊಳ್ಳುವುದು ಮುಖ್ಯ. ಇಂದು ಅನೇಕರು ಬೇರೆ ಕಡೆ ನೌಕರಿ ಮಾಡುತ್ತಾ ಅಥವಾ ಬೇರೆ ರೀತಿಯಿಂದ ಒಳ್ಳೆಯ ಉತ್ಪನ್ನವಿರುವವರು ಇದೊಂದು ಉಪ ಉದ್ಯೋಗವೆಂದು ಕೈಕೊಳ್ಳುವರು. ಇನ್ನು ಕೆಲವರು ಇದೊಂದು ಹವ್ಯಾಸವೆಂದು ಕೈಕೊಳ್ಳುವರು. ಆದರೆ ಯಾವುದೇ ಆಧಾರವಿಲ್ಲದೆ ಕೇವಲ ಬರಹಗಾರಿಕೆಯಿಂದಲೇ ಉಪಜೀವನ ಸಾಗಿಸಬಹುದೇ ಎಂಬುದು ಪ್ರಶ್ನಾರ್ಥಕವಾಗಿದ್ದರೂ ಇದಕ್ಕೆ ಉತ್ತರ ಸಾಧ್ಯವಿದೆ. ಲೇಖಕ ವೃತ್ತಿ ಕೈಕೊಳ್ಳಲು ಅನೇಕ ಕಾರಣಗಳಿದ್ದರೂ ಮುಖ್ಯವಾಗಿ ನಾಲ್ಕು ಕಾರಣಗಳಿವೆ.

೧) ಇಂದು ರಾಜ್ಯದಲ್ಲಿ ರಾಷ್ಟ್ರದಲ್ಲಿ ಪತ್ರಿಕೆಗಳ ಸಂಖ್ಯೆ ಮೊದಲಿಗಿಂತಲೂ ಹೆಚ್ಚಾಗಿದೆ. ಅನೇಕ ಪತ್ರಿಕೆಗಳು ಕಾವ್ಯ,-ಕಥೆ- ಕಾದಂಬರಿ ( ಧಾರಾವಾಹಿ ) ನಾಟಕ - ಹರಟೆ ಮೊದಲಾದ ಸಾಹಿತ್ಯ ಪ್ರಕಾರಗಳನ್ನು ಪ್ರಕಟಿಸುತ್ತವೆ.

೨) ಇಂದು ನಾಡಿನಲ್ಲಿ ರೇಡಿಯೋ ಹಾಗೂ ದೂರದರ್ಶನ ಕೇಂದ್ರಗಳು ಮೊದಲಿಗಿಂತಲೂ ಹೆಚ್ಚಾಗಿರುವುದರಿಂದ ಅವುಗಳಲ್ಲಿ ಸಹ

ಎಲ್ಲ ಪ್ರಕಾರದ ಸಾಹಿತ್ಯ ಪ್ರಕಟಿಸಲು ಅವಕಾಶವಿದೆ.

೩) ಮೂರನೇದಾಗಿ ನಾಟಕ, ಸಿನೇಮಾ ರಂಗಗಳಲ್ಲಿ ಸಹ ಬರೆಹಗಾರರಿಗೆ ಅವಕಾಶವಿದೆ.

೪) ಇಂದಿನ ಪ್ರಚಾರಯುಗದಲ್ಲಿ ಜಾಹೀರಾತು ಒಂದು ಮುಖ್ಯ ಮಾಧ್ಯಮವೂ ಸಾಧನವೂ ಆಗಿದೆ. ಶ್ರೀಸಾಮಾನ್ಯನನ್ನು ಆಕರ್ಷಿಸಿ ಅವನ ಆಸಕ್ತಿಯನ್ನು ಕೆರಳಿಸಿ ಅದನ್ನು ಸೂರೆಗೊಳ್ಳುವುದರಲ್ಲಿ ಜಾಹೀರಾತುಗಳ ಪಾತ್ರ ಮುಖ್ಯ. ಉತ್ತಮ ಜಾಹೀರಾತು ಬರೆಯುವುದು ಒಂದು ಕಲೆ. ವಾಣಿಜ್ಯೋದ್ಯಮದಲ್ಲಿ ಜಾಹೀರಾತು ಬರೆಯುವವರ ಬೇಡಿಕೆ ಬಹಳ. ಈ ಎಲ್ಲ ಕಾರಣಗಳಿಂದಾಗಿ ಸ್ವತಂತ್ರವಾಗಿ ಬರೆಹ-ಗಾರಿಕೆಯಿಂದ ಉಪಜೀವನ ಶಕ್ಯವಿದೆ. ಆದರೆ ಇದು ಎಲ್ಲರಿಗೂ ಶಕ್ಯವಿಲ್ಲ. ಆದ್ದರಿಂದ ಫಲ ಜ್ಯೋತಿಷ್ಯದಲ್ಲಿ ಗ್ರಂಥಕರ್ತ ಬರೆಹಗಾರ, ಸಂಪಾದಕ ಲೇಖಕ ವೃತ್ತಿ ಕೈಕೊಳ್ಳುವವರ ಜಾತಕವೆಂತಿರಬೇಕು. ಅದಕ್ಕೆ ಯೋಗ ವೃತ್ತಿನಿರತ ಲೇಖಕರ ಕಾರಕ ಗ್ರಹ ಸ್ಥಾನ ಲಗ್ನ ರಾಶ್ಯಾದಿಗಳು ಯಾವವು, ಯಾರು ಯಾವ ಪ್ರಕಾರದ ಲೇಖನ ಬರೆದರೆ ಯಶಸ್ವಿಯಾಗಬಲ್ಲರು ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ :** ಲೇಖಕ, ಬರೆಹಗಾರರ ಕಾರಕ ಗ್ರಹ ಯಾವುದೆಂಬುದನ್ನು ತಿಳಿಯುವ ಮೊದಲು ಲೇಖಕ - ಬರೆಹಗಾರರಲ್ಲಿಯ ಪ್ರಕಾರಗಳನ್ನು ತಿಳಿಯುವುದು ಅವಶ್ಯವು. ಏಕೆಂದರೆ ವಾಙ್ಮಯದಲ್ಲಿ ಅನೇಕ ಪ್ರಕಾರಗಳಿದ್ದು ವಿಭಿನ್ನ ಪ್ರಕಾರದ ವಾಙ್ಮಯಗಳಿಗೆ ಕಾರಕ ಗ್ರಹ ಸ್ಥಾನ ಲಗ್ನಗಳು ವಿಭಿನ್ನವಿರುತ್ತವೆ. ಆದ್ದರಿಂದ ಮೊದಲು ವಾಙ್ಮಯದಲ್ಲಿಯ ಪ್ರಕಾರಗಳನ್ನು ತಿಳಿಯುವಾ.

**ವಾಙ್ಮಯದಲ್ಲಿಯ ಪ್ರಕಾರಗಳು :**

ಸ್ಥೂಲವಾಗಿ ವಾಙ್ಮಯವನ್ನು ಎರಡು ಪ್ರಕಾರಗಳನ್ನಾಗಿ ವಿಂಗಡಿಸಬಹುದು.

೧). ರಚನಾತ್ಮಕ ಸಾಹಿತ್ಯ ಅಥವಾ ಸೃಜನಶೀಲ ಸಾಹಿತ್ಯ.

೨) ವೈಚಾರಿಕ ಸಾಹಿತ್ಯ.

ಈ ಎರಡೂ ಪ್ರಕಾರದ ಸಾಹಿತ್ಯಬರೆವಣಿಗೆಗೆ ವಿಭಿನ್ನ ಗ್ರಹ, ಲಗ್ನ ಸ್ಥಾನಾದಿಗಳು ಕಾರಕವಿರುತ್ತವೆ.

**ರಚನಾತ್ಮಕ ಸಾಹಿತ್ಯದಲ್ಲಿಯ ಪ್ರಕಾರಗಳು :**

ಇನ್ನು ರಚನಾತ್ಮಕ ಸಾಹಿತ್ಯದಲ್ಲಿ ಕೂಡ ಅನೇಕ ಪ್ರಕಾರಗಳಿದ್ದು ಇಲ್ಲಿ ಮುಖ್ಯವಾಗಿ ೬ ಪ್ರಕಾರದ ಸಾಹಿತ್ಯದ ಬಗೆಗೆ ವಿವರಿಸಲಾಗಿದೆ.

೧) ಕಥಾ ಲೇಖಕರು

೨) ಕಾದಂಬರಿಕಾರರು

೩) ಕವಿಗಳು

೪) ನಾಟಕಕಾರರು

೫) ವಿಮರ್ಶಕರು

೬) ಸಂವಹನ ಮಾಧ್ಯಮ ಸಾಹಿತ್ಯಕರು.

ಈ ಆರು ಪ್ರಕಾರದ ವಾಙ್ಮಯಗಳಿಗೆ ಕಾರಕ ಗ್ರಹ ಸ್ಥಾನ ಲಗ್ನಗಳು ಯಾವವು ಎಂಬುದನ್ನು ಪರಿಶೀಲಿಸುವಾ,

**ಕಥೆ–ಕಾದಂಬರಿ**

**ಕಥಾ ಲೇಖಕರು ಹಾಗೂ ಕಾದಂಬರಿಕಾರರು :**

ಕಥೆ – ಕಾದಂಬರಿಕಾರರಲ್ಲಿ ಅವಶ್ಯವಾಗಿ ಆರು ಮುಖ್ಯ ಗುಣಗಳ ಬೇಕಾಗುತ್ತದೆ.

೧) ನಿರೀಕ್ಷಣೆ, ಲೋಕಾನುಭಾವ

೨) ತತ್ವ ಪ್ರಣಾಲಿಕೆ

೩) ಪಾತ್ರ ರಚನೆಯ ವೈಶಿಷ್ಟ್ಯ

೪) ತತ್ವ ಅಥವಾ ವಿಚಾರ ಪ್ರಚಾರ ಪ್ರಣಾಲಿಕೆಯಲ್ಲಿರುವ ಕಲ್ಪನಾ ಶಕ್ತಿ

೫) ಭಾಷಾ ಶೈಲಿ

೬) ರಸ ನಿರೂಪಣೆ

ಈ ಆರು ಸಂಗತಿಗಳು ಜಾತಕನಲ್ಲಿರಬೇಕಾಗುವುದರಿಂದ ಈ ಮುಂದೆ ವಿವರಿಸಿದ ಸಂಗತಿಗಳು ಜಾತಕನಿಗೆ ಪೋಷಕವಾಗಿರಬೇಕು.

ಮೊದಲನೆದಾಗಿ ೧) ಗ್ರಂಥ – ಕಥೆ – ಹಾಗೂ ಕಾದಂಬರಿ ಲೇಖಕರಿಗೆ ಶುಕ್ರನು ಕಾರಕನು. ಆದ್ದರಿಂದ ಶುಕ್ರನು ವೃಷಭ, ಮಿಥುನ, ತುಲಾ, ಕುಂಭ, ಮೀನ ರಾಶಿಯವನಾಗಿ ಲಗ್ನ, ದ್ವಿತೀಯ, ತೃತೀಯ, ಪಂಚಮ, ಲಾಭ ಈ ಯಾವುದೊಂದು ಸ್ಥಾನದಲ್ಲಿರಬೇಕು.

೨) ಎರಡನೆಯದಾಗಿ ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಕಥೆ, ಕಾದಂಬರಿಕಾರರಿಗೆ ಲಗ್ನ, ತೃತೀಯ, ಪಂಚಮ ಸ್ಥಾನಗಳು ಪೋಷಕವಿರಬೇಕು. ಏಕೆಂದರೆ ತೃತೀಯ ಸ್ಥಾನವು ಬರವಣಿಗೆಯ ಸ್ಥಾನವಿರುವುದಲ್ಲದೆ ಸ್ಫೂರ್ತಿಕಾರಕ ಸ್ಥಾನವು ಇದ್ದು, ಲೇಖಕನ ವ್ಯಕ್ತಿಮತ್ವದ ಪ್ರತಿಬಿಂಬದ ಪ್ರಭಾವವು ಈ ಸ್ಥಾನದಿಂದಲೇ ಆಗುತ್ತದೆ. ಸ್ಫೂರ್ತಿಯೇ ಕಥೆ- ಕಾದಂಬರಿಕಾರರಿಗೆ ಇರಬೇಕಾದ ಆವಶ್ಯಕ ಗುಣಧರ್ಮವು. ಆದುದರಿಂದ ತೃತೀಯ ಸ್ಥಾನವು ಹೆಚ್ಚು ಕಾರಕವಿರುತ್ತದೆ. ಇದಲ್ಲದೇ ಚತುರ್ಥ ಹಾಗೂ ತನು ಇವು ಮನೋಗುಣಧರ್ಮದ ಸ್ಥಾನಗಳಿರುತ್ತವೆ. ಈ ಸ್ಥಾನಗಳು ಪೋಷಕವಿದ್ದರೆ ಜಾತಕನ ಮನೋಗುಣಧರ್ಮವು ಉತ್ತಮವಿರುತ್ತದೆ.

೩) ಮೂರನೇದಾಗಿ ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ ವೃಷಭ, ಮಿಥುನ, ಕರ್ಕ, ಸಿಂಹ, ತುಲಾ, ಮಕರ, ಕುಂಭ ಈ ಲಗ್ನದವರು ಉತ್ತಮ ಕಥೆಗಾರರು ಕಾದಂಬರಿಕಾರರಿರುವುದು ಕಂಡುಬರುತ್ತದೆ.

೪) ರಾಶಿ ದೃಷ್ಟಿಯಿಂದ ನೋಡಿದರೆ ನಿರ್ದಿಷ್ಟ ರಾಶಿಯವರೇ ಕಥೆಗಾರರು ಕಾದಂಬರಿಕಾರರು ಇರುತ್ತಾರೆ ಎಂದು ಹೇಳಲು ಬಾರದು.

೨ ಕವಿಗಳು ( ಕಾವ್ಯ )

ಕಾವ್ಯ : ಸಾಮಾನ್ಯ ಸಾಹಿತಿಗಳಿಗೆ ಇರಬೇಕಾದ ಗುಣಗಳಿಗಿಂತ ಕೆಲವು ವಿಶಿಷ್ಟ ಗುಣಗಳು ಕವಿತೆಯನ್ನು ರಚಿಸುವ ಕವಿಗಳಲ್ಲಿರಬೇಕಾಗುತ್ತದೆ. ಅವು ಯಾವುವೆಂದರೆ :

೧) ಪ್ರತಿಭೆ (Genius )
೨) ಸ್ಫೂರ್ತಿ, (Inspiration )
೩) ಕಲ್ಪನಾಶಕ್ತಿ ( Imagination)
೪) ಇಚ್ಛಾಶಕ್ತಿ ( Will power )
೫) ಅಂತಃಶಕ್ತಿ ( Intuition )
೬) ಆತ್ಮೀಯತೆ, ಅನುಕಂಪ

ಈ ಆರು ಗುಣಧರ್ಮಗಳಿದ್ದವರು ಕವಿಗಳಾಗುವರು.

ಇನ್ನು ಫಲಜ್ಯೋತಿಷ್ಯದ ಮೇರೆಗೆ ಕವಿಗಳಾಗಲು ಜಾತಕದಲ್ಲಿ ಯಾವ - ಯಾವ ಸಂಗತಿಗಳು ಪೋಷಕವಿರಬೇಕೆಂಬುದನ್ನು ಈ ಮುಂದೆ ಕೊಡಲಾಗಿದೆ.

೧) ಮೊದಲನೇದಾಗಿ ಕಲಾಕಾರನೂ ಆತ್ಮೀಯತೆ ಕಾರಕನೂ ಕಲಾಶಕ್ತಿಯ ಕಾರಕನೂ ಆದ ಶುಕ್ರನು ಜಾತಕದಲ್ಲಿ ಪೋಷಕನಿರಲೇಬೇಕು.

೨) ಎರಡನೇದಾಗಿ ಕವಿಗಳಿಗೆ ಪ್ರಮುಖ ಪೋಷಕ ಗ್ರಹವೆಂದರೆ ಚಂದ್ರನು ಏಕೆಂದರೆ ಕವಿಗಳಲ್ಲಿರಬೇಕಾದ ಮುಖ್ಯ ಗುಣಧರ್ಮವೆಂದರೆ ಕಲ್ಪನಾಶಕ್ತಿ, ಅಂತಃಶಕ್ತಿ,ಸ್ಫೂರ್ತಿ,ಇಚ್ಛಾಶಕ್ತಿ ಈ ಎಲ್ಲ ಗುಣಧರ್ಮಗಳಿಗೆ ಚಂದ್ರನು ಪೋಷಕನಿರದೆ ಯಾರೂ ಕವಿಗಳಾಗರು.

೩) ಮೂರನೇದಾಗಿ ಇವರ ಜಾತಕದಲ್ಲಿ ಲಗ್ನ-ಲಗ್ನೇಶ ಹಾಗೂ ಚತುರ್ಥ - ಚತುರ್ಥೇಶರೇ ಹೆಚ್ಚು ಕಾರಕರಿರುತ್ತಾರೆ. ಏಕೆಂದರೆ ಈ ಎರಡೂ ಸ್ಥಾನಗಳು ಮನೋಗುಣಧರ್ಮದವು.

ನಾಲ್ಕನೇದಾಗಿ ಇವರು ಹೆಚ್ಚಾಗಿ ಮೇಷ, ವೃಷಭ, ಮಿಥುನ,

ಕರ್ಕ, ತುಳಾ, ವೃಶ್ಚಿಕ, ಕುಂಭ, ಮೀನ ಈ ಲಗ್ನದವರಿರುತ್ತಾರೆ.

**೩) ನಾಟಕಕಾರ**

**ನಾಟಕ:** ನಾಟಕ ಸಾಹಿತ್ಯದಲ್ಲಿರುವ ವೈಶಿಷ್ಟ್ಯವೆಂದರೆ ಕಲ್ಪನಾಶಕ್ತಿಗಿಂತ ವಾಸ್ತವಿಕ ಪ್ರಜ್ಞೆ, ಸೂಕ್ಷ್ಮ ನಿರೀಕ್ಷಣೆ, ಲೋಕಾನುಭವ, ಪರಿಣಾಮಕಾರಿಯಾದ ಅಭಿವ್ಯಕ್ತಿ, ಅರ್ಥಗರ್ಭಿತ ಸಂಭಾಷಣೆಯೇ ನಾಟ್ಯ ಸಾಹಿತ್ಯದ ಜೀವಾಳವಿರುತ್ತದೆ. ಭಾಷೆಯಲ್ಲಿ ಸಾಹಿತ್ಯವಿರದೆ ವ್ಯವಹಾರದ ಸಂಭಾಷಣೆಯೇ ಹೆಚ್ಚಿರುತ್ತದೆ. ಇದಲ್ಲದೆ ಸಂದರ್ಭ ನಿರ್ಮಾಣ ಮಾಡುವ ಕಲೆಯೂ ನಾಟಕಕಾರರಲ್ಲಿ ಇರಬೇಕಾದ ಅತ್ಯಾವಶ್ಯಕವಾದ ಗುಣಧರ್ಮವು. ಆದುದರಿಂದ ಉತ್ತಮ ನಾಟಕಕಾರನಾಗಲು ಜಾತಕದಲ್ಲಿ ಈ ಮುಂದಿನ ಸಂಗತಿಗಳು ಪೋಷಕವಿರಬೇಕು.

೧) ಮೊದಲನೇದಾಗಿ ಕಥೆಗಾರ - ಕಾದಂಬರಿಕಾರರಿಗೆ ಶುಕ್ರನೇ ಹೆಚ್ಚು ಪೋಷಕನಿರುತ್ತಾನೆ. ಕವಿಗಳಿಗೆ ಚಂದ್ರನೇ ಹೆಚ್ಚು ಕಾರಕನು. ಆದರೆ ನಾಟಕಕಾರರಿಗೆ ಬುಧನೇ ಹೆಚ್ಚು ಕಾರಕನು, ಏಕೆಂದರೆ ನಾಟಕದಲ್ಲಿರುವ ಸಂಭಾಷಣೆಯೇ ಮಹತ್ವದ ಅಂಶವಿರುವುದಲ್ಲದೆ ಜೀವನದ ಪ್ರತಿಬಿಂಬವನ್ನು ಪ್ರದರ್ಶಿಸುವ ಗುಣಧರ್ಮವು ನಾಟಕಕಾರನಲ್ಲಿರಬೇಕಾಗುತ್ತದೆ. ಈ ಗುಣಧರ್ಮದ ಕಾರಕನೆಂದರೆ ಬುಧನು. ಆದುದರಿಂದ ಬುಧನು ಬಲಾಢ್ಯನಿರದೆ ಯಾರೂ ನಾಟಕಕಾರರಾಗಲಾರರು.

೨) ಬುಧನ ತರುವಾಯ ಶುಕ್ರನನ್ನು ಪರಿಶೀಲಿಸಬೇಕು. ಆದರೆ ಬುಧನು ರಾಶಿ ಬಲದವನೂ ಸ್ಥಾನ ಬಲದವನೂ ಇದ್ದರೆ ಶುಕ್ರನು ಕೇವಲ ರಾಶಿ ಬಲದವನಿದ್ದರೆ ಸಾಕು.

೩) ಮೂರನೇದಾಗಿ ಸ್ಥಾನದೃಷ್ಟಿಯಿಂದ ಪರಿಶೀಲಿಸಿದರೆ ತೃತೀಯ, ಪಂಚಮ, ಸ್ಥಾನಗಳು ಕಾರಕವಿದ್ದು ಈ ಸ್ಥಾನಗಳು ಹಾಗೂ ಸ್ಥಾನಾಧಿಶರು ಪೋಷಕವಿರುವ ಜಾತಕನು ಉತ್ತಮ ನಾಟಕಕಾರನಾಗಬಲ್ಲನು.

೪) ನಾಲ್ಕನೇದಾಗಿ ಮೇಷ, ವೃಷಭ, ಮಿಥುನ, ಕರ್ಕ, ಸಿಂಹ,

ಕನ್ಯಾ, ಮಕರ, ಕುಂಭ ಈ ಲಗ್ನದವರೇ ಉತ್ತಮ ನಾಟಕಕಾರರಾಗ ಬಲ್ಲರು.

೫) ವಿಮರ್ಶಕರು : ವಿಮರ್ಶಕ ಸಾಹಿತ್ಯಕ್ಕೆ ಕೆಲವರು ರಚನಾತ್ಮಕ ಸಾಹಿತ್ಯದಲ್ಲಿಯ ಒಂದು ಪ್ರಕಾರವೆಂದರೆ, ಮತ್ತೆ ಕೆಲವರು ವೈಚಾರಿಕ ಸಾಹಿತ್ಯದಲ್ಲಿಯ ಪ್ರಕಾರವೆನ್ನುತ್ತಾರೆ. ವಿಮರ್ಶಕರು ಎರಡೂ ಪ್ರಕಾರದ ಸಾಹಿತ್ಯದ ವಿಮರ್ಶೆ ಮಾಡುವರು. ಆದ್ದರಿಂದ ವಿಮರ್ಶಕರಾಗಲು ಜಾತಕ ಹೇಗಿರಬೇಕು, ಕಾರಕ ಗ್ರಹ ಲಗ್ನ ಸ್ಥಾನ ರಾಶ್ಯಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ :**

ಕಥಾಕಾರರಿಗೂ, ಕಾದಂಬರಿಕಾರರಿಗೂ ಶುಕ್ರನು ಕಾರಕನು; ಕವಿಗಳಿಗೆ ಚಂದ್ರನುಕಾರಕನು ನಾಟಕಕಾರರಿಗೆ ಬುಧನು ಕಾರಕನು. ವಿಮರ್ಶಕರಿಗೆ ಕಾರಕಗ್ರಹ ಯಾವುದು ಎಂಬುದು ಸಮಸ್ಯೆಯಾಗಿರುತ್ತದೆ; ಏಕೆಂದರೆ ವಿಮರ್ಶಕರು ಎಲ್ಲ ಪ್ರಕಾರದ ಸಾಹಿತ್ಯದ ವಿಮರ್ಶೆ ಮಾಡಬೇಕಾಗುತ್ತದೆ. ವಿಮರ್ಶಕರ ಗುಣಧರ್ಮವೆಂದರೆ ಎಲ್ಲ ಪ್ರಕಾರದ ಸಾಹಿತ್ಯದ ಗುಣಧರ್ಮ ಹಾಗೂ ತಂತ್ರದ ಪೂರ್ಣಜ್ಞಾನ. ಇದಲ್ಲದೆ ಜಾಗತಿಕ ಸಾಹಿತಿಗಳ ಅಭ್ಯಾಸ ಮಾಡಿರಬೇಕಾಗುತ್ತದೆ. ಇದಲ್ಲದೆ ಆಯಾ ವಿಷಯದ ತುಲನಾತ್ಮಕ ಅಭ್ಯಾಸ ಮಾಡಿರಬೇಕಾಗುತ್ತದೆ. ಇಷ್ಟೇ ಅಲ್ಲಾ, ಯಾವುದೊಂದು ಸಾಹಿತ್ಯದ ವಿಮರ್ಶೆ ಮಾಡುವಾಗ ಪೂರ್ವಗ್ರಹ ಪೀಡಿತನಿರಕೂಡದು, ರಚನಾತ್ಮಕ ದೃಷ್ಟಿಕೋನವಿರಬೇಕು. ಈ ಎಲ್ಲ ಗುಣಧರ್ಮಗಳ ಕಾರಕನಾದ ಗುರುವೇ ವಿಮರ್ಶಕರ ಕಾರಕನು. ಗುರು ಬಲಾಢ್ಯನಿರದೆ ಯಾರೂ ವಿಮರ್ಶಕರಾಗಲಾರರು. ಗುರುವಿನ ತರುವಾಯ ಬುಧನನ್ನು ಪರಿಶೀಲಿಸಬೇಕು. ಆದರೆ ಗುರುವು ರಾಶಿಬಲವವನೂ ಸ್ಥಾನ ಬಲದವನೂ ಇದ್ದರೆ, ಬುಧನು ಕೇವಲ ರಾಶಿಬಲದವನಿದ್ದರಾಯಿತು.

**ಸ್ಥಾನ:** ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಪಂಚಮ ಸ್ಥಾನವೇ ವಿಮರ್ಶಕರ ಕಾರಕ ಸ್ಥಾನವಿರುತ್ತದೆ. ಪಂಚಮದ ನಂತರ ಮನೋಕಾರಕ ಸ್ಥಾನಗಳಾದ ಚತುರ್ಥ, ಲಗ್ನ ಈ ಸ್ಥಾನಗಳು ಕಾರಕವಿರುತ್ತವೆ. ಆದ್ದರಿಂದ

ಪಂಚಮ, ಚತುರ್ಥ, ಲಗ್ನ ಈ ಸ್ಥಾನಗಳೂ ಸ್ಥಾನಾಧೀಶರೂ ಬಲಾಢ್ಯ ರಿರದೆ ಯಾರೂ ವಿಮರ್ಶಕರಾಗಲಾರರು.

**ಲಗ್ನ :** ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ಮಿಥುನ, ಸಿಂಹ, ವೃಶ್ಚಿಕ, ಧನು, ಮೀನ ಈ ಲಗ್ನಗಳು, ಇವುಗಳ ತರುವಾಯ ವೃಷಭ, ಕನ್ಯಾ ಈ ಲಗ್ನಗಳು ಕಾರಕವಿರುತ್ತವೆ.

**ರಾಶಿ :** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಬುದ್ಧಿ ಹಾಗೂ ವಾಯು ರಾಶಿಯವರಾದ ಮಿಥುನ, ತುಲಾ, ಕುಂಭ ರಾಶಿಯವರು ಶ್ರೇಷ್ಠ ವಿಮರ್ಶಕರಾಗಬಲ್ಲರು, ಏಕೆಂದರೆ ವಿಮರ್ಶಕರರಲ್ಲಿ ಚಿಕಿತ್ಸಾ ಬುದ್ಧಿ ಸಂಶೋಧನಾ ಬುದ್ಧಿ, ಸಮತೋಲನಾ ಬುದ್ಧಿ ಇರುವುದಲ್ಲದೆ ಅವರು ತಪಾಸಿಸುವ ಕೆಲಸದಲ್ಲಿಯೂ ನಿಷ್ಣಾತರು. ಇವರ ತರುವಾಯ ಮೇಷ, ಸಿಂಹ, ಧನು ರಾಶಿಯವರು.

**ಯೋಗಗಳು :** ೧) ಬುಧ, ಗುರು, ಚಂದ್ರರಲ್ಲಿ ಯಾರಿಬ್ಬರು ಬುದ್ಧಿ-ವಾಯು ರಾಶಿಯವರಿರುತ್ತಾರೆ.

೨) ಬುಧ-ಗುರುಗಳು ಉಚ್ಚ ಸ್ವಕ್ಷೇತ್ರೀಯರಿರುತ್ತಾರೆ.

## ೬) ಸಂವಹನ ಮಾಧ್ಯಮ ಸಾಹಿತ್ಯ

ಸಂವಹನ ಮಾಧ್ಯಮ ಸಾಹಿತ್ಯವನ್ನು ಸಮೂಹ ಮಾಧ್ಯಮ, ಪ್ರಚಾರ ಮಾಧ್ಯಮವೆಂದು ಬಣ್ಣಿಸುತ್ತಾರೆ. ರೇಡಿಯೋ, ಟಿ. ವಿ. (ದೂರದರ್ಶನ), ಸಿನೇಮಾ, ನಾಟಕ, ನಿಯತಕಾಲಿಕ ಪತ್ರಿಕೆ ಇವೇ ಮೊದಲಾದ ಮಾಧ್ಯಮ ಗಳಿಗಾಗಿ ರಚಿಸುವ ಸಾಹಿತ್ಯವು ಇದರಲ್ಲಿ ಬರುತ್ತದೆ. ಈ ಮಾಧ್ಯಮ ಗಳಿಗಾಗಿ ಬರೆಯುವ ಲೇಖಕರ ಜಾತಕವೆಂತಿರುತ್ತದೆ, ಕಾರಕ ಗ್ರಹ ಸ್ಥಾನ ಲಗ್ನ ರಾಶ್ಯಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ :** ಈ ಮಾಧ್ಯಮಗಳಿಗಾಗಿ ಬರೆಯುವ ಲೇಖಕರ

ಸಾಹಿತ್ಯದ ಕಾರಕ ಗ್ರಹ ಯಾವುದೆಂಬುದು ಸಮಸ್ಯೆಯಾಗಿರುತ್ತದೆ. ಏಕೆಂದರೆ ಈ ಮಾಧ್ಯಮದಲ್ಲಿ ಬರೆಯುವ ಲೇಖಕರು ರಚನಾತ್ಮಕ-ವೈಚಾರಿಕ ಸಾಹಿತ್ಯದದಲ್ಲಿಯ ಎಲ್ಲ ಪ್ರಕಾರಗಳನ್ನು ಬರೆಯಬೇಕಾಗುತ್ತದೆ ಆದ್ದರಿಂದ ಇದರಲ್ಲಿ ರಚನಾತ್ಮಕ ಸಾಹಿತ್ಯದ, ಹಾಗೂ ವೈಚಾರಿಕ ಸಾಹಿತ್ಯದ ಕಾರಕ ಗ್ರಹಗಳೆರಡೂ ಬೇಕಾಗುತ್ತವೆ. ಇದಲ್ಲದೆ ಈ ಮಾಧ್ಯಮದಲ್ಲಿ ಬರೆಯುವ ಸಾಹಿತ್ಯದಲ್ಲಿಯೂ ವೈವಿಧ್ಯವುಂಟು; ಅವುಗಳನ್ನು ಮೂರು ಪ್ರಕಾರವಾಗಿ ವಿಂಗಡಿಸಬಹುದು.

೧ ಮನರಂಜನೆಗಾಗಿ
೨) ಜ್ಞಾನ ಪ್ರಸಾರಕ್ಕಾಗಿ
೩) ಸರಕಾರದ ಯೋಜನೆಗಳ ಪ್ರಚಾರ ಹಾಗೂ ವಾಣಿಜ್ಯ ಅಭಿವೃದ್ಧಿಯ ಜಾಹಿರಾತಿಗಾಗಿ.

ಈ ಮಾಧ್ಯಮಗಳಿಗಾಗಿ ಬರೆಯುವ ಸಾಹಿತ್ಯವು ಯಾವುದೇ ಉದ್ದೇಶದ್ದಿರಲಿ ಒಂದು ಸಂಗತಿ ಮಾತ್ರ ನಿಜ, ಸಿನೇಮಾ, ಟಿ. ವಿ. (ದೂರದರ್ಶನ) ಗಳಿಗೆ ಬರೆಯುವ ಸಾಹಿತ್ಯದ ಶೈಲಿ-ದೃಷ್ಟಿ-ತಂತ್ರ ಒಂದು ತರವಿದ್ದರೆ, ರೇಡಿಯೋ ನಾಟಕಕ್ಕೆ ಬರೆಯುವ ಸಾಹಿತ್ಯದ ಶೈಲಿ-ದೃಷ್ಟಿ-ತಂತ್ರ ಬೇರೆ ತರವವಿರುತ್ತವೆ. ಇದರಂತೆ ನಿಯತಕಾಲಿಕ ಪತ್ರಿಕೆಗಳಿಗೆ ಬರೆಯುವ ಸಾಹಿತ್ಯದ ಶೈಲಿ-ತಂತ್ರ-ದೃಷ್ಟಿ ಇವೆಲ್ಲ ವಿಭಿನ್ನವಿರುತ್ತವೆ. ಆದ್ದರಿಂದ ಈ ಮೂರೂ ಮಾಧ್ಯಮಗಳಿಗೆ ಸಾಹಿತ್ಯದ ಕಾರಕ ಗ್ರಹ ವಿಭಿನ್ನವಿದ್ದು ಅವುಗಳನ್ನು ಈ ಕೆಳಗೆ ವಿವರಿಸಲಾಗಿದೆ.

**ಟಿ. ವಿ. (ದೂರದರ್ಶನ), ಸಿನೇಮಾ ಸಾಹಿತ್ಯದ ಕಾರಕ ಗ್ರಹ —**

ಟಿ. ವಿ. ಹಾಗೂ ಸಿನೇಮಾ ಸಾಹಿತ್ಯದ ಕಾರಕ ಗ್ರಹವೆಂದರೆ ಶುಕ್ರನು. ಆದ್ದರಿಂದ ಶುಕ್ರನು ಬಲಾಢ್ಯನಿರದೆ ಯಾರೂ ಟಿ. ವಿ. ಸಿನೇಮಾ-ಸಾಹಿತ್ಯದ ಲೇಖಕರಾಗಲಾರರು. ಏಕೆಂದರೆ ಈ ಎರಡೂ ಮಾಧ್ಯಮಗಳಿಗೆ ಬರೆಯುವ

ಲೇಖಕರಿಗೆ ಛಾಯಾ ಗ್ರಹಣದ ಮೂಲ ತತ್ವಗಳು ಹಾಗೂ ಅದರ ತಂತ್ರದ ಜ್ಞಾನವಿರಬೇಕಾಗುತ್ತದೆ. ಈ ಸಾಹಿತ್ಯದಲ್ಲಿ ಶ್ರವಣಕ್ಕಿಂತ ದೃಶ್ಯ ಮಹತ್ವದ್ದಿರುತ್ತದೆ. ಕ್ಯಾಮರಾವಂತೂ ಕಣ್ಣ ಮುಂದೆ ಇರಬೇಕಾಗುತ್ತದೆ. ಆದ್ದರಿಂದ ಛಾಯಾ ಗ್ರಹಣ ವಿದ್ಯೆಯ ಕಾರಕ ಗ್ರಹವಾದ ಶುಕ್ರನು ಬಲಾಢ್ಯನಿರಬೇಕಾಗುತ್ತದೆ. ಶುಕ್ರನ ತರುವಾಯ ಚಂದ್ರ-ಬುಧ-ಗುರುಗಳ ಬಲಾಬಲವನ್ನು ಪರಿಶೀಲಿಸಬೇಕು. ಏಕೆಂದರೆ ಬುಧ-ಶುಕ್ರ ಚಂದ್ರರು ಬಲಾಢ್ಯರಿದ್ದರೆ ಜಾತಕರು ಯಾವುದೇ ರಚನಾತ್ಮಕ ಪ್ರಕಾರದ ಸಾಹಿತ್ಯವನ್ನು ಬರೆಯಬಲ್ಲರು. ಅಲ್ಲದೆ ಶುಕ್ರ-ಚಂದ್ರರು ಬಲಾಢ್ಯರಿದ್ದ ಲೇಖಕರು ಮನರಂಜನಾ ಸಾಹಿತ್ಯ ಕಲಾತ್ಮಕ ಸಾಹಿತ್ಯಗಳನ್ನು ಬರೆಯಬಲ್ಲರು. ಬುಧನು ಬಲಾಢ್ಯನಿದ್ದ ಲೇಖಕರು ಪ್ರಚಾರ ಹಾಗೂ ಜಾಹೀರಾತಿನ ಸಾಹಿತ್ಯದಲ್ಲಿ ನಿಷ್ಣಾತರಿರುತ್ತಾರೆ. ಶುಕ್ರ-ಚಂದ್ರರು ಬಲಾಢ್ಯರಿದ್ದ ಜಾತಕರು ಕಲಾತ್ಮಕ ಮನರಂಜನೆ ಸಾಹಿತ್ಯದಲ್ಲಿಯೂ ಕಾವ್ಯ ರಚನೆಯಲ್ಲಿಯೂ ನಿಷ್ಣಾತರು. ಇದರಂತೆ ಶುಕ್ರನೊಂದಿಗೆ ಗುರುವು ಬಲಾಢ್ಯನಿದ್ದ ಜಾತಕನು ಜ್ಞಾನ ಪ್ರಸಾರದ ವೈಚಾರಿಕ ಸಾಹಿತ್ಯದ ವಿಮರ್ಶಕ ಸಾಹಿತ್ಯದಲ್ಲಿ ನಿಷ್ಣಾತರು. ಇದರಂತೆ ಶುಕ್ರನೊಂದಿಗೆ ಬುಧನು ಬಲಾಢ್ಯನಿದ್ದ ಜಾತಕರು ಟಿ.ವಿ-ಸಿನೇಮಾದಲ್ಲಿಯ ಸಂಭಾಷಣೆ, ನಾಟಕ-ಕಥೆ-ಕಾದಂಬರಿ ಮೊದಲಾದ ಸಾಹಿತ್ಯದಲ್ಲಿ ಪಳಗಿದವರು. ಒಟ್ಟಿನಲ್ಲಿ ಟಿ.ವಿ.-ಸಿನೇಮಾ ಸಾಹಿತ್ಯದ ಲೇಖಕರಿಗೆ ಶುಕ್ರ, ಚಂದ್ರ, ಬುಧ, ಗುರು ಈ ನಾಲ್ಕು ಗ್ರಹಗಳು ಕಾರಕವಿದ್ದು, ಶುಕ್ರನು ಸ್ಥಾನ ಬಲದವನು ರಾಶಿಬಲದವನೂ ಇದ್ದರೆ ಚಂದ್ರ, ಬುಧ, ಗುರುಗಳು ರಾಶಿಬಲದವರಿದ್ದರೆ ಸಾಕು.

### ರೇಡಿಯೋ - ನಾಟಕ ಸಾಹಿತ್ಯದ ಕಾರಕ ಗ್ರಹ :

ಟಿ.ವಿ.- ಸಿನೇಮಾ ಸಾಹಿತ್ಯದ ಕಾರಕ ಗ್ರಹ ಶುಕ್ರ. ರೇಡಿಯೋ-ನಾಟಕ ಸಾಹಿತ್ಯದ ಕಾರಕ ಗ್ರಹ ಬುಧನು. ಟಿ.ವಿ. - ಸಿನೇಮಾ ಸಾಹಿತ್ಯದಲ್ಲಿ ದೃಶ್ಯ ಮುಖ್ಯವಿದ್ದರೆ ರೇಡಿಯೋದಲ್ಲಿ ಶ್ರವಣ ಮುಖ್ಯವಿರುತ್ತದೆ. ರೇಡಿಯೋ ಸಾಹಿತ್ಯದ ರುಚಿಯನ್ನು ಕುರುಡರೂ ಸಹ ಸವಿಯಬಹುದು.

ಆದರೆ ಟಿ.ವಿ.–ಸಿನೇಮಾ ಸಾಹಿತ್ಯವು ಕುರುಡರಿಗೆ ನಿರುಪಯುಕ್ತವಿರುತ್ತದೆ ಯಾದರೂ ಬಧಿರರಿಗೆ ಉಪಯುಕ್ತವು. ಇದಲ್ಲದೆ ರೇಡಿಯೋ ಸಾಹಿತ್ಯ ದಲ್ಲಿ ಭಾಷಾ ಪ್ರಭುತ್ವವಿರಬೇಕಾಗುತ್ತದೆ. ಆದ್ದರಿಂದ ಬುಧನು ರೇಡಿಯೋ ಸಾಹಿತ್ಯದ ಕಾರಕ. ಏಕೆಂದರೆ ಲೇಖನ – ಮಾತುಗಾರಿಕೆ- ಪ್ರಸರಣ - ಪ್ರಸಾರ - ಸಂಭಾಷಣ - ಭಾಷಣ – ಸುದ್ದಿ ಸಮಾಚಾರ, ಭಾಷಾಂತರ ಮೊದಲಾದವುಗಳ ಮೇಲೆ ಬುಧನ ಪ್ರಭುತ್ವವಿರುತ್ತದೆ. ಆದ್ದರಿಂದ ಬುಧನು ಬಲಾಢ್ಯನಿರದೆ ಯಾರೂ ರೇಡಿಯೋ – ನಾಟಕ ಸಾಹಿತ್ಯದಲ್ಲಿ ಪ್ರಭುತ್ವ ಪಡೆಯಲಾರರು. ಬುಧನ ತರುವಾಯ ಶುಕ್ರ– ಚಂದ್ರ– ಗುರುಗಳ ಬಲಾಬಲವನ್ನು ಪರಿಶೀಲಿಸಬೇಕು. ಏಕೆಂದರೆ ರೇಡಿಯೋ-ನಾಟಕ ಸಾಹಿತ್ಯದಲ್ಲಿ ಎಲ್ಲ ಪ್ರಕಾರದ ಸಾಹಿತ್ಯವೂ ಇರುತ್ತದೆ. ಆದರೆ ಒಂದು ಸಂಗತಿ – ಬುಧನು ರಾಶಿಬಲದವನೂ ಸ್ಥಾನ ಬಲದವನೂ ಯೋಗಕಾರಕನೂ ಇದ್ದರೆ. ಶುಕ್ರ - ಚಂದ್ರ - ಗುರುಗಳು ಕೇವಲ ರಾಶಿ ಬಲದವರಿರುತ್ತಾರೆ.

ಸ್ಥಾನ : ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ರೇಡಿಯೋ ನಾಟಕ ಸಾಹಿತ್ಯದ ಲೇಖಕರೇ ಇರಲಿ, ಟಿ. ವಿ.- ಸಿನೇಮಾ ಸಾಹಿತ್ಯದ ಲೇಖಕರೇ ಇರಲಿ. ನಿಯತಕಾಲಿಕ ಪತ್ರಿಕೆಗಳಿಗ ಬರೆಯುವ ಲೇಖಕರೇ ಇರಲಿ, ಕೇವಲ ಸಾಹಿತ್ಯ ಬರೆಯುವ ದೃಷ್ಟಿ ಇದ್ದರೆ ತೃತೀಯ, ಪಂಚಮ ಸ್ಥಾನಗಳು ತದನಂತರ ಲಗ್ನ, ಚತುರ್ಥ ಸ್ಥಾನಗಳು ಕಾರಕಗಳಿದ್ದು ಈ ಸ್ಥಾನಾಧೀಶರೂ ಬಲಿಷ್ಠರಿರಬೇಕಾಗುತ್ತದೆ. ಆದರೆ ರೇಡಿಯೋ ದಲ್ಲಿಯಾಗಲಿ, ಟಿ.ವಿ. ಯಲ್ಲಿಯಾಗಲಿ ಲೇಖಕರೇ ಆಯಾ ಕಾರ್ಯ ಕ್ರಮದಲ್ಲಿ ಭಾಗವಹಿಸಬೇಕಾದ ಸಂದರ್ಭದಲ್ಲಿ ವಿಭಿನ್ನ ಸ್ಥಾನಗಳು ಕಾರಕ ವಿರುತ್ತವೆ. ಉದಾಹರಣೆಗೆ— ತಾವೇ ಸಿದ್ಧಪಡಿಸಿದ ಸಾಹಿತ್ಯವನ್ನು ಆಯಾ ಲೇಖಕರೇ ರೇಡಿಯೋದಲ್ಲಿ ಭಾಗವಹಿಸಬೇಕಾದಲ್ಲಿ ಲೇಖಕರ ದ್ವಿತೀಯ ಸ್ಥಾನ ಹಾಗೂ ದ್ವಿತೀಯೇಶರ ಬಲಾಬಲವನ್ನು ಪರಿಶೀಲಿಸ ಬೇಕು. ಏಕೆಂದರೆ ಮಧುರವಾಣಿಯೂ ಪ್ರಭಾವಪೂರಿತವಾಗಿಯೂ ಪರಿ-

ಣಾಮಕಾರಿಯಾಗಿಯೂ ಸ್ಪಷ್ಟ ಉಚ್ಚಾರಪೂರಕವಾಗಿಯೂ ಮಾತನಾಡಲು ಜಾತಕದಲ್ಲಿ ವಾಣಿ ಸ್ಥಾನವಾದ ದ್ವಿತೀಯ ಸ್ಥಾನ ಹಾಗೂ ದ್ವಿತಿಯೇಶರು ಬಲಾಢ್ಯರಿರಬೇಕಾಗುತ್ತದೆ. ಹಾಗೂ ದ್ವಿತೀಯ ಸ್ಥಾನದಲ್ಲಿ ಬಲಾಢ್ಯ ಗ್ರಹಗಳಿರಬೇಕು. ವಾಯು ರಾಶಿಗಳು ಮಾತಿನಲ್ಲಿ ಮಾಧುರ್ಯವನ್ನು ಅಗ್ನಿ ರಾಶಿಗಳು ಸ್ಪಷ್ಟ ಉಚ್ಚಾರವನ್ನು ಪೃಥ್ವಿರಾಶಿಗಳು ಬಹಳ ಮಾತುಗಾರಿಕೆಯನ್ನು ಜಲರಾಶಿಗಳು ಮಾತಿನಲ್ಲಿ ಅಸ್ಪಷ್ಟತೆಯನ್ನು ಕೊಡುವವು. ಇದರಂತೆ ಶುಕ್ರ - ಚಂದ್ರರು ಶೀರ ಮಧುರ ಶೈಲಿಯ ಮಾತಿನವರಿದ್ದರೆ ಬುಧನು ಮಾತಿನಲ್ಲಿ ವೈಖರಿ ಚಪಲ ದೀರ್ಘಾವಧಿ (ಭಾಷಣಕಾರ) ಮಾತುಗಾರ, ಗುರುವು ಮಾತಿನಲ್ಲಿ ಪಾಂಡಿತ್ಯವನ್ನು ವಿದ್ವತ್‌ನ್ನು ಗಾಂಭೀರ್ಯವನ್ನು ಕೊಡುವನು. ಇದರಂತೆ ತಾವೇ ಸಿದ್ಧಪಡಿಸಿದ ಸಾಹಿತ್ಯವನ್ನು ಆಯಾ ಲೇಖಕರೆ ಟಿ. ವಿ.ಯಲ್ಲಿ ಭಾಗವಹಿಸಬೇಕಾದಲ್ಲಿ ದ್ವಿತೀಯ ಸ್ಥಾನದ ಸಂಗಡ ಲಗ್ನೇಶ ಹಾಗೂ ಲಗ್ನದಲ್ಲಿರುವ ಗ್ರಹಗಳ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ, ಏಕೆಂದರೆ ಈ ಹಿಂದೆ ಹೇಳಿದಂತೆ ರೇಡಿಯೋದಲ್ಲಿ ಶ್ರವಣ ಮುಖ್ಯವಾದರೆ ಟಿ.ವಿ.ಯಲ್ಲಿ ದೃಶ್ಯ ಮುಖ್ಯವಿರುತ್ತದೆ. ರೇಡಿಯೋ ಕಾರ್ಯಕ್ರಮದಲ್ಲಿ ಮಾತುಗಾರಿಕೆಗೆ ಪ್ರಾಮುಖ್ಯವಿದ್ದರೆ ಟಿ.ವಿ ಕಾರ್ಯಕ್ರಮದಲ್ಲಿ ಮಾತುಗಾರಿಕೆಯ ಸಂಗಡ ಅಭಿನಯ ಹಾಗೂ ವ್ಯಕ್ತಿತ್ವಗಳು ಮಹತ್ವದವಿರುತ್ತವೆ, ಲಗ್ನ ಹಾಗೂ ಲಗ್ನೇಶರು ಬಲಾಢ್ಯರಿರದೆ ಯಾರೂ ಅಭಿನಯದಲ್ಲಿ ವ್ಯಕ್ತಿಮತ್ವದಲ್ಲಿ ಪರಿಣಾಮಕಾರಿಯಾಗರು. ಮಾತಿನಲ್ಲಿ ಪ್ರಭಾವಶಾಲಿಯಾಗಲು ಬುಧ-ಗುರುಗಳು ಬಲಾಢ್ಯರಿರಬೇಕಾಗುತ್ತದೆ. ವಕ್ತಿಮತ್ವ ಹಾಗೂ ಅಭಿನಯಗಳು ಪರಿಣಾಮಕಾರಿಯಾಗಲು ಶುಕ್ರ - ಚಂದ್ರರು ಬಲಾಢ್ಯರಿರಬೇಕಾಗುತ್ತದೆ. ಹೀಗೆ ರೇಡಿಯೋ ಹಾಗೂ ಟಿ.ವಿ. ಲೇಖಕರಿಗೆ ತೃತೀಯ ಪಂಚಮ ಸ್ಥಾನಗಳೊಂದಿಗೆ ದ್ವಿತೀಯ, ಲಗ್ನ ಹಾಗೂ ಈ ಸ್ಥಾನಾಧೀಶರ ಬಲಾಬಲವನ್ನು ಪರಿಶೀಲಿಸಬೇಕು.

ಕಾರಕ ಲಗ್ನ : ರೇಡಿಯೋ - ಟಿ.ವಿ.- ಸಿನೇಮಾ- ನಾಟಕ ಇವೇ ಮೊದಲಾದ ಮಾಧ್ಯಮಗಳಿಗಾಗಿ ಬರೆಯುವ ಲೇಖಕರ ಕಾರಕಲಗ್ನಗಳೆಂದರೆ

ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಮಕರ, ಕುಂಭ ಈ ಲಗ್ನದವರೇ ಹೆಚ್ಚಾಗಿರುವುದು ಕಂಡುಬರುತ್ತದೆ. ಇವುಗಳ ನಂತರ ಮೇಷ, ಸಿಂಹ ಲಗ್ನಗಳು ಕಾರಕವಿರುತ್ತವೆ.

**ರಾಶಿ:** ರಾಶಿ ದೃಷ್ಟಿಯಿಂದ ನೋಡಿದರೆ ನಿರ್ದಿಷ್ಟ ರಾಶಿಯಾವರೇ ರೇಡಿಯೋ-ಟಿ.ವಿ.-ಸಿನೇಮಾ - ನಾಟಕ ಮೊದಲಾದ ಮಾಧ್ಯಮಗಳ ಲೇಖಕರಾಗುತ್ತಾರೆಯೆಂದು ಹೇಳಲುಬಾರದು.

೨) **ವೈಚಾರಿಕ ಸಾಹಿತ್ಯ :** ವಿಚಾರ ಪ್ರಧಾನವಾದ ಸಾಹಿತ್ಯವೇ ವೈಚಾರಿಕ ಸಾಹಿತ್ಯ. ಈ ಸಾಹಿತ್ಯವು ವಿಚಾರ ಪ್ರಧಾನವಾಗಿದ್ದಂತೆಯೇ ವಿಚಾರ ಪ್ರಚೋದಕವೂ ಹೌದು. ಸಮಾಜದಲ್ಲಿ ಯಾವುದೇ ಬದಲಾವಣೆ ಆಗಬೇಕಾದರೆ ಹೊಸ ಸಮಾಜ ನಿರ್ಮಾಣವಾಗಬೇಕಾದರೆ ಅದಕ್ಕೆ ವಿಚಾರ ಸಾಹಿತ್ಯವೇ ಆಧಾರವಾಗಿರುತ್ತದೆ. ಎಲ್ಲಕ್ಕಿಂತಲೂ ಮುಖ್ಯವಾಗಿ ಸಮಾಜದ ಸಮಗ್ರ ಬದಲಾವಣೆಗೆ, ಆಮೂಲಾಗ್ರ ಬದಲಾವಣೆಗೆ ಮೂಲಭೂತವಾದದ್ದು ವೈಚಾರಿಕ ಸಾಹಿತ್ಯವು.

**ವೈಚಾರಿಕ ಸಾಹಿತ್ಯದಲ್ಲಿಯ ಪ್ರಕಾರಗಳು :** ವೈಚಾರಿಕ ಸಾಹಿತ್ಯದಲ್ಲಿ ಅನೇಕ ಪ್ರಕಾರಗಳಿದ್ದು ಪ್ರಸ್ತುತಃ ೫ ಪ್ರಕಾರದ ವೈಚಾರಿಕ ಸಾಹಿತ್ಯದ ಬಗೆಗೆ ಮಾತ್ರ ಇಲ್ಲಿ ವಿವರಿಸಲಾಗಿದೆ.

೧) ವಿಜ್ಞಾನ ಸಾಹಿತ್ಯ
೨) ವಿವಿಧ ಶಾಸ್ತ್ರೀಯ ಸಾಹಿತ್ಯ
೩) ಸಂಶೋಧನಾ ಪ್ರಧಾನವಾದ ಪ್ರಬಂಧಗಳು
೪) ಪ್ರಬಂಧ ಸಾಹಿತ್ಯ
೫) ಸೈದ್ಧಾಂತಿಕ ಸಾಹಿತ್ಯ.

ಈ ಐದು ಪ್ರಕಾರದ ವೈಚಾರಿಕ ಸಾಹಿತ್ಯದ ಕಾರಕ ಗ್ರಹ ಸ್ಥಾನ ಲಗ್ನ ರಾಶ್ಯಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

೧) **ವಿಜ್ಞಾನ ಸಾಹಿತ್ಯ :** ಭೌತಶಾಸ್ತ್ರ, ರಸಾಯನಶಾಸ್ತ್ರ, ಸಸ್ಯ

ಶಾಸ್ತ್ರ, ಜೀವಶಾಸ್ತ್ರ ಮೊದಲಾದ ವಿಜ್ಞಾನಗಳಿಗೆ ಸಂಬಂಧಿಸಿದ ವಿಷಯಗಳ ಬಗೆಗೆ ಸಾಹಿತ್ಯ ರಚಿಸುವ್ರದು. ಆದ್ದರಿಂದ ಫಲಜ್ಯೋತಿಷ್ಯದಲ್ಲಿ ವಿಜ್ಞಾನ ಸಾಹಿತ್ಯ ರಚಿಸಲು ಜಾತಕವೆಂತಿರಬೇಕು. ಕಾರಕ ಗ್ರಹ ಲಗ್ನ ಸ್ಥಾನಾಧೀಶರುಗಳು ಯಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ :—** ವಿಜ್ಞಾನ ಸಾಹಿತ್ಯ ರಚಿಸುವ ಲೇಖಕರ ಮುಖ್ಯ ಗುಣಧರ್ಮವೆಂದರೆ ವೈಜ್ಞಾನಿಕ ತತ್ವಗಳ, ಸಿದ್ಧಾಂತದ ಸೂತ್ರಗಳ ನಿರೂಪಣೆ, ಹಾಗೂ ಅವುಗಳ ವಿವರಣೆಯೇ ವೈಜ್ಞಾನಿಕ ಸಾಹಿತ್ಯವು. ಆದ್ದರಿಂದ ವೈಜ್ಞಾನಿಕ ಪ್ರವೃತ್ತಿಯ ಕಾರಣನಾದ ಬುಧನು ಜ್ಞಾನದ ಅಧಿಪತಿಯಾದ ಗುರುವು ಈ ಪ್ರಕಾರದ ಲೇಖಕರ ಕಾರಕ. ಗ್ರಹಗಳು ಗುರು-ಮಂಗಳರು ಬಲಾಢ್ಯರಿರದೆ ಯಾರೂ ವೈಜ್ಞಾನಿಕ ಲೇಖಕರಾಗಲಾರರು. ಗುರು - ಮಂಗಳರ ತರುವಾಯ ಆಯಾ ವಿಷಯದ ಕಾರಕ ಗ್ರಹಗಳ ಬಲಾಬಲವನ್ನು ಪರಿಶೀಲಿಸಬೇಕು. ಉದಾಹರಣೆಗೆ— ಸಸ್ಯ ಶಾಸ್ತ್ರಕ್ಕೆ ( Botany ) ಸಂಬಂಧಿಸಿದ ಸಾಹಿತ್ಯ ರಚನೆಗಾಗಿ ಗುರು-ಮಂಗಳರೊಂದಿಗ ಚಂದ್ರನನ್ನು ಪರಿಶೀಲಿಸಬೇಕು. ಏಕೆಂದರೆ ಸಸ್ಯ ಶಾಸ್ತ್ರದ ಮೇಲೆ ಚಂದ್ರನ ಪ್ರಭುತ್ವವಿರುತ್ತದೆ. ಹೀಗೆ ಆಯಾ ಶಾಸ್ತ್ರದ ಕಾರಕ ಗ್ರಹಗಳ ಬಲಾಬಲವನ್ನು ಪರಿಶೀಲಿಸಬೇಕು. ಯಾವ ಯಾವ ವಿಷಯಕ್ಕೆ ಯಾವ ಯಾವ ಶಾಸ್ತ್ರಕ್ಕೆ ಕಾರಕ ಗ್ರಹಗಳು ಯಾವವು ಎಂಬುದರ ಸಮಗ್ರ ವಿವರಣೆಯನ್ನು ನಮ್ಮ " ಶಿಕ್ಷಣ ಜ್ಯೋತಿಷ್ಯ " ಗ್ರಂಥದಲ್ಲಿ ನೀಡಲಾಗಿದೆ. ಆದರೆ ಒಂದು ಸಂಗತಿ— ವಿಜ್ಞಾನ ಸಾಹಿತ್ಯ ಲೇಖಕರಿಗೆ ಗುರು-ಮಂಗಳರು ಬಲಾಢ್ಯರಿರಲೇಬೇಕು. ಗುರು-ಮಂಗಳರು ರಾಶಿ ಬಲದವರೂ ಸ್ಥಾನ ಬಲದವರೂ ಇದ್ದರೆ ಆಯಾ ವಿಷಯದ ಗ್ರಹಗಳು ಕೇವಲ ರಾಶಿ ಬಲದವರಿದ್ದರಾಯಿತು. ಉದಾಹರಣೆಗೆ— ರಸಾಯನ ಶಾಸ್ತ್ರಕ್ಕೆ ಸಂಬಂಧಿಸಿದ ಸಾಹಿತ್ಯ ಬರೆಯಲು ರಸಾಯನ ಶಾಸ್ತ್ರದ ಕಾರಕ ಗ್ರಹಗಳಾದ ಶನಿ-ಚಂದ ರು ರಾಶಿ ಬಲದವರಿದ್ದು ಗುರು-ಮಂಗಳರು ರಾಶಿಬಲದವರೂ ಸ್ಥಾನಬಲದವರೂ ಯೋಗಕಾರಕರೂ ಇರಬೇಕು.

**ಸ್ಥಾನ :** ಸ್ಥಾನದೃಷ್ಟಿಯಿಂದ ಪರಿಶೀಲಿಸಿದರೆ ವಿದ್ಯೆಯ ಸ್ಥಾನ

ವಾದ ಪಂಚಮ ಸ್ಥಾನವೇ ಕಾರಕ ಸ್ಥಾನವು. ಪಂಚಮ ಸ್ಥಾನ, ಪಂಚಮಮೇಶರು ಬಲಾಢ್ಯರಿರದೆ ಯಾರೂ ವೈಜ್ಞಾನಿಕ ಸಾಹಿತ್ಯ ರಚಿಸ ಲಾರರು.

**ಲಗ್ನ :** ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ಕರ್ಕ, ಸಿಂಹ, ವೃಶ್ಚಿಕ, ಧನು ಈ ಲಗ್ನದವರು ವಿಜ್ಞಾನ ಸಾಹಿತ್ಯ ರಚಿಸುವದ ರಲ್ಲಿ ಪಳಗಿದವರಿರುತ್ತಾರೆ.

**ರಾಶಿ :** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಮಿಥುನ, ತುಲಾ, ಕುಂಭ ರಾಶಿಯವರೂ ತದನಂತರ ಮೇಷ, ಸಿಂಹ, ಧನು ರಾಶಿಯವರೂ ನಿಷ್ಣಾತರಿರುತ್ತಾರೆ.

**೨) ವಿವಿಧ ಶಾಸ್ತ್ರೀಯ ಸಾಹಿತ್ಯ :—** ವಿಜ್ಞಾನ ಸಾಹಿತ್ಯ ದಂತೆ ವಿವಿಧ ಸಾಮಾಜಿಕ ಹಾಗೂ ಮಾನವ ಶಾಸ್ತ್ರ ಮತ್ತು ಲಲಿತಕಲೆ ಗಳಾದ ಸಂಗೀತ, ವಾದ್ಯ, ಚಿತ್ರಕಲೆ, ಅಭಿನಯ, ಛಾಯಾ ಗ್ರಹಣ, ಬಣ್ಣದ ಕಲೆ ಮೊದಲಾದ ಕಲೆಗಳ ಹಾಗೂ ವೇದ, ಆಯುರ್ವೇದ, ಜ್ಯೋತಿಷ್ಯ, ಆಗಮ, ನ್ಯಾಯ, ತರ್ಕ, ಮೀಮಾಂಸೆ ಮೊದಲಾದ ಧಾರ್ಮಿಕ ಸಾಹಿತ್ಯ ರಚಿಸುವ ಲೇಖಕರ ಕಾರಕ ಗ್ರಹಗಳು ವಿಭಿನ್ನವಿದ್ದು ಅವುಗಳ ವಿವರಣೆ ಕೆಳಗಿನಂತೆ ಬರೆಯಲಾಗಿದೆ.

**ಕಾರಕ ಗ್ರಹ :** ಮೇಲೆ ಬರೆದ ಆಯಾ ಶಾಸ್ತ್ರಗಳಿಗೆ ಸಂಬಂಧಿ ಸಿದ ಮೂಲಭೂತ ತತ್ವಗಳ ಪ್ರತಿಪಾದನೆ ಹಾಗೂ ಅವುಗಳ ವಿವರ ಣೆಯೇ ವಿವಿಧ ಶಾಸ್ತ್ರೀಯ ಸಾಹಿತ್ಯವಾಗುತ್ತದೆ. ಆದ್ದರಿಂದ ಮೇಲೆ ಬರೆದ ಸಾಹಿತ್ಯದ ಕಾರಕ ಗ್ರಹವೆಂದರೆ ಗುರು-ಶನಿಯರು ಬಲಾಢ್ಯರಿರದೆ ಯಾರೂ ಯಶಸ್ವಿ ಶಾಸ್ತ್ರೀಯ ಧಾರ್ಮಿಕ ಸಾಹಿತ್ಯ ರಚಿಸಲಾರರು. ಅದರಲ್ಲಿಯೂ ವೇದ-ಆಗಮ-ತರ್ಕ-ನ್ಯಾಯ- ಮೀಮಾಂಸೆ ಆಯು ರ್ವೇದ-ಜ್ಯೋತಿಷ್ಯ ಮೊದಲಾದ ವೈದಿಕ ಸಾಹಿತ್ಯ ರಚಿಸಲು ಗುರು- ಶನಿಯರು ಬಲಾಢ್ಯರಿರಬೇಕಾಗುತ್ತದೆ. ಆದರೆ ಸಂಗೀತ, ವಾದ್ಯ, ಚಿತ್ರ

ಕಲೆ, ಅಭಿನಯ, ಛಾಯಾ ಗ್ರಹಣ ಮೊದಲಾದ ಲಲಿತ ಕಲೆಗೆ ಸಂಬಂಧಿಸಿದ ಶಾಸ್ತ್ರೀಯ ಸಾಹಿತ್ಯ ರಚಿಸಲು ಗುರುವಿನ ಸಂಗಡ ಲಲಿತಕಲೆಗಳ ಕಾರಕ ಗ್ರಹಗಳಾದ ಶುಕ್ರ-ಚಂದ್ರರ ಬಲಾಬಲವನ್ನು ಪರಿಶೀಲಿಸಬೇಕು. ಅದರಲ್ಲಿಯೂ ಕೂಡಾ ಕಾರಕನ ಪೋಷಕನೂ ಆದ ಶುಕ್ರನು ಬಲಾಢ್ಯನಿರಲೇಬೇಕು. ಆದರೆ ಮಹತ್ವದ ಅಂಶವೆಂದರೆ, ವೈದಿಕ ಹಾಗೂ ಧಾರ್ಮಿಕ ಸಾಹಿತ್ಯ ರಚಿಸುವ ಲೇಖಕರ ಜಾತಕದಲ್ಲಿ ಗುರು-ಶನಿಯರು ಕಾರಕರಿದ್ದರೆ ಸಂಗೀತ, ಚಿತ್ರಕಲೆ, ಛಾಯಾಗ್ರಹಣ ಮೊದಲಾದ ಲಲಿತ ಕಲೆಗಳಿಗೆ ಸಂಬಂಧಿಸಿದ ಸಾಹಿತ್ಯಕ್ಕೆ ಶುಕ್ರ-ಚಂದ್ರರು ಕಾರಕರಿರುತ್ತಾರೆ.

**ಕಾರಕಸ್ಥಾನ :** ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ವಿದ್ಯಾಸ್ಥಾನವಾದ ಪಂಚಮ ಸ್ಥಾನವೇ ಕಾರಕ ಸ್ಥಾನವು. ಪಂಚಮದ ನಂತರ ತೃತೀಯ ಸ್ಥಾನವು ಕಾರಕ ಸ್ಥಾನವು. ಸಂಗೀತಕಾರರಿಗೆ ಪಂಚಮದೊಂದಿಗೆ ದ್ವಿತೀಯ ಸ್ಥಾನವನ್ನು ಚಿತ್ರಕಾರರಿಗೆ ಪಂಚಮದೊಂದಿಗೆ ತೃತೀಯ ಸ್ಥಾನವನ್ನು ನೋಡಬೇಕು. ವೇದಾಧ್ಯಯನದ ಪುರೋಹಿತರಿಗೂ ದ್ವಿತೀಯ ಸ್ಥಾನ ಕಾರಕವಿರುತ್ತದೆ. ಆದರೆ ವೈದಿಕ ಹಾಗೂ ಧಾರ್ಮಿಕ ಸಾಹಿತ್ಯ ರಚಿಸುವ ಲೇಖಕರಿಗೂ ಸಂಗೀತ ಮೊದಲಾದ ಲಲಿತಕಲೆಗಳ ಸಾಹಿತ್ಯ ರಚಿಸುವವರಿಗೂ ಪಂಚಮ ಹಾಗೂ ತೃತೀಯ ಸ್ಥಾನಗಳು ಹಾಗೂ ಈ ಸ್ಥಾನಾಧೀಶರು ಬಲಾಢ್ಯರಿರಬೇಕು.

**ಲಗ್ನ :—** ಲಗ್ನ ದೃಷ್ಟಿಯಿಂದ ನೋಡಿದರೆ ವೈದಿಕ, ಧಾರ್ಮಿಕ ಸಾಹಿತ್ಯ ರಚನೆಯ ಲೇಖಕರಿಗೆ ಮೇಷ, ಮಿಥುನ, ಸಿಂಹ, ವೃಶ್ಚಿಕ, ಧನು, ಮೀನ ಲಗ್ನಗಳು ಕಾರಕವಿದ್ದರೆ ಲಲಿತ ಕಲೆಗಳಿಗೆ ಸಂಬಂಧಿಸಿದ ಸಾಹಿತ್ಯ ರಚಿಸುವ ಲೇಖಕರಿಗೆ ವೃಷಭ, ಮಿಥುನ, ಕರ್ಕ, ತುಲಾ, ಮಕರ, ಕುಂಭ ಈ ಲಗ್ನಗಳು ಕಾರಕವಿರುತ್ತವೆ.

**ರಾಶಿ :** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ವೈದಿಕ ಹಾಗೂ ಧಾರ್ಮಿಕ ಸಾಹಿತ್ಯ ರಚಿಸುವುದು ಹಾಗೂ ಲಲಿತ ಕಲೆಗಳ ಸಾಹಿತ್ಯ

ರಚಿಸುವುದರಲ್ಲಿ ನಿರ್ದಿಷ್ಟ ರಾಶಿಯವರೇ ಇರುತ್ತಾರೆ ಎಂದು ಹೇಳಲು ಬಾರದು.

**೩) ಸಂಶೋಧನಾ ಪ್ರಧಾನವಾದ ಪ್ರಬಂಧ ರಚನೆ :**

ವಿಜ್ಞಾನ ಹಾಗೂ ವಿವಿಧ ಶಾಸ್ತ್ರಗಳಲ್ಲಿ ಸಂಶೋಧನೆ ಮಾಡಿ ಸಾಹಿತ್ಯ ರಚಿಸುವುದು ಒಂದು ಬಗೆಯ ವಿಚಾರ ಸಾಹಿತ್ಯದಲ್ಲಿ ಬರುತ್ತದೆ. ಆದ್ದರಿಂದ ಈ ಪ್ರಕಾರದ ಸಾಹಿತ್ಯ ರಚಿಸುವವರ ಜಾತಕವೆಂತಿರಬೇಕು. ಕಾರಕ ಗ್ರಹ ಲಗ್ನ ರಾಶ್ಯಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

**ಸಂಶೋಧನಾ ಪ್ರಧಾನವಾದ ಪ್ರಬಂಧಗಳು :**

ವೈಚಾರಿಕ ಸಾಹಿತ್ಯದಲ್ಲಿ ಸಂಶೋಧನಾ ಪ್ರಧಾನವಾದ ಪ್ರಬಂಧಗಳ ರಚನೆಯು ಮಹತ್ವದ ಸಾಹಿತ್ಯವಾಗಿರುತ್ತದೆ. ಈ ಸಾಹಿತ್ಯದ ಕಾರಕ ಗ್ರಹ ಲಗ್ನ ಸ್ಥಾನಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ :—** ಈ ಸಾಹಿತ್ಯದ ಕಾರಕ ಗ್ರಹವೆಂದರೆ ಗುರುವು. ಏಕೆಂದರೆ ಇದರಲ್ಲಿ ಸಂಶೋಧನೆಯ ಕೆಲಸವೇ ಮುಖ್ಯವಿರುತ್ತದೆ. ಆದ್ದರಿಂದ ಗುರುವು ಬಲಾಢ್ಯನಿರದವರು ಯಾರೂ ಯಾವುದೇ ಪ್ರಕಾರದ ಸಂಶೋಧನಾ ಪ್ರಧಾನವಾದ ಪ್ರಬಂಧಗಳನ್ನು ರಚಿಸಲಾರರು. ಗುರುವಿನ ತರುವಾಯ ಆಯಾ ವಿಷಯಗಳ ಕಾರಕಗ್ರಹಗಳ ಬಲಾಬಲವನ್ನು ಪರಿಶೀಲಿಸಬೇಕು. ಏಕೆಂದರೆ ಸಂಶೋಧನಾ ಪ್ರಬಂಧ ರಚಿಸುವವರು ಎಲ್ಲ ವಿಷಯಗಳಲ್ಲಿಯೂ ಸಂಶೋಧನೆ ಮಾಡಬೇಕಾಗುತ್ತದೆ. ಉದಾಹರಣೆಗೆ :— ಭೌತ ವಿಜ್ಞಾನದಲ್ಲಿ ಸಂಶೋಧನೆ ಮಾಡುವವರಿಗೆ ಗುರುವಿನೊಂದಿಗೆ ಮಂಗಳನ ಬಲಾಬಲವನ್ನು ಸಸ್ಯ ವಿಜ್ಞಾನದಲ್ಲಿ ಸಂಶೋಧನೆ ಮಾಡಿ ಪ್ರಬಂಧ ರಚಿಸುವವರಿಗೆ ಗುರುವಿನೊಂದಿಗೆ ಚಂದ್ರನ ಬಲಾಬಲವನ್ನು ಪರಿಶೀಲಿಸಬೇಕು. ಆದರೆ ಒಂದು

ಸಂಗತಿ— ಗುರುವು ರಾಶಿ ಬಲದವನೂ ಸ್ಥಾನ ಬಲದವನೂ ಇದ್ದರೆ, ಆಯಾ ವಿಷಯಗಳ ಕಾರಕ ಗ್ರಹಗಳು ಕೇವಲ ರಾಶಿಬಲದವರಿದ್ದ-ರಾಯಿತು.

**ಸ್ಥಾನ :** ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಸಂಶೋಧಕರಿಗೆ ಪಂಚಮ ಸ್ಥಾನವೇ ಕಾರಕವು. ಆ ನಂತರ ತನು ಸ್ಥಾನವೆಂದರೆ ಲಗ್ನವನ್ನು ಪರಿಶೀಲಿಸಬೇಕು. ಪಂಚಮ–ಪಂಚಮೇಶ,ಲಗ್ನ-ಲಗ್ನೇಶರು ಬಲಾಢ್ಯರಿರದೆ ಯಾರೂ ಸಂಶೋಧನಾ ಪ್ರಧಾನ ಪ್ರಬಂಧ ಸಾಹಿತ್ಯವನ್ನು ರಚಿಸಲಾರರು.

**ಲಗ್ನ :—** ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಮಿಥುನ, ಸಿಂಹ, ವೃಶ್ಚಿಕ, ಧನು, ಮೀನ ಈ ಲಗ್ನದವರೇ ಸಂಶೋಧನಾ ಸಾಹಿತ್ಯ ರಚಿಸುವುದರಲ್ಲಿ ಪಳಗುತ್ತಾರೆ.

**ರಾಶಿ :—** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯಾವರೇ ಸಂಶೋಧನೆ ಸಾಹಿತ್ಯ ರಚಿಸಬಲ್ಲರು ಎಂದು ಹೇಳಲು ಬಾರದು.

**ಯೋಗ :—** ಸಂಶೋಧನಾ ಪ್ರಧಾನವಾದ ಸಾಹಿತ್ಯವನ್ನಾಗಲಿ ಪ್ರಬಂಧವನ್ನಾಗಲಿ ರಚಿಸುವ ಲೇಖಕರಿಗೆ ಈ ಕೆಳಗೆ ಕಾಣಿಸಿದ ಯೋಗ ಗಳಿರುವುದು ಕಂಡುಬರುತ್ತದೆ.

೧) ಅನೇಕ ಗ್ರಹಗಳು ವಾಯು ರಾಶಿಯಲ್ಲಿರುತ್ತವೆ. ಅದರಲ್ಲಿಯೂ ಮುಖ್ಯವಾಗಿ ಗುರು–ಬುಧ–ಚಂದ್ರರು.

೨) ಗುರುವು ಸ್ವಕ್ಷೇತ್ರೀಯ ಇಲ್ಲವೆ ಉಚ್ಚ ರಾಶಿಯವ.

೩) ಬುಧನು ದುರ್ಬಲನಿರುವುದಿಲ್ಲ.

೪) ಚಂದ್ರನು ಬಲಾಢ್ಯನಿರುತ್ತಾನೆ.

**೪) ಪ್ರಬಂಧ ಸಾಹಿತ್ಯ :—**

ಸಾಹಿತ್ಯದಲ್ಲಿ ವಿವಿಧ ಪ್ರಕಾರದ ಪ್ರಬಂಧಗಳಿವೆ. ಅದರಲ್ಲಿಯೂ

ದೈನಿಕ ಹಾಗೂ ನಿಯತಕಾಲಿಕ ಪತ್ರಿಕೆಗಳಿಗಾಗಿ ಬರೆಯುವ ಲೇಖನಗಳು, ಪ್ರಬಂಧಗಳು ಈ ಸಾಹಿತ್ಯ ಪ್ರಕಾರದಲ್ಲಿ ಬರುತ್ತವೆ. ಇದಲ್ಲದೆ ಪತ್ರಿಕೆಗಳಿಗೆ ವಿವಿಧ ಪ್ರಕರಣಗಳ ಬಗೆಗೆ ತನಿಖೆ ಮಾಡಿ ಬರೆಯುವ ಪ್ರಬಂಧಗಳೂ ಕೂಡ ಈ ಪ್ರಬಂಧ ಸಾಹಿತ್ಯದಲ್ಲಿಯೇ ಬರುತ್ತವೆ. ಈ ಪ್ರಬಂಧ ಸಾಹಿತ್ಯವನ್ನು ಬರೆಯುವ ಲೇಖಕರ ಕಾರಕ ಗ್ರಹ ಸ್ಥಾನಾದಿ–ಗಳು ಯಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ** :— ಮೇಲೆ ವಿವರಿಸಿದ ಪ್ರಬಂಧ (ಲೇಖನ) ಸಾಹಿತ್ಯವನ್ನು ಬರೆಯುವವರು ಮೂರು ವರ್ಗದವರು. :

೧) ಮೊದಲನೇದಾಗಿ ದೇಶ–ವಿದೇಶಗಳಲ್ಲಿ ಕಾರ್ಯನಿರತ ಪತ್ರಿ-ಕೋದ್ಯಮಿಗಳಾಗಿ ಸಂಪಾದಕೀಯ ವಿಭಾಗದಲ್ಲಿಯ ಸಂಪಾದಕರು, ಉಪ-ಸಂಪಾದಕರು, ಸಹಾಯಕ ಸಂಪಾದಕರು, ಪ್ರಧಾನ ಲೇಖಕರು, ವಿಶೇಷ ಪ್ರತಿನಿಧಿಗಳು, ವರದಿಗಾರರು ಮೊದಲಾದ ಹುದ್ದೆಗಳನ್ನು ಹೊಂದಿ ಪತ್ರಿಕೆಗಳಲ್ಲಿ ನೌಕರಿ ಮಾಡುವವರು.

೨) ಬೇರೆ ಕಡೆ ನೌಕರಿ ಮಾಡುತ್ತಾ ಇಲ್ಲವೆ ಬೇರೆ ಸ್ವತಂತ್ರ ಉದ್ಯೋಗ ಕೈಕೊಂಡು ವಿಭಿನ್ನ ಪತ್ರಿಕೆಗಳಿಗೆ ವಿಭಿನ್ನ ಪ್ರಕಾರದ ಲೇಖನಗಳನ್ನು, ಪ್ರಬಂಧಗಳನ್ನು ಬರೆಯುವ ಪ್ರವೃತ್ತಿಯುಳ್ಳವರು, ಹವ್ಯಾಸವುಳ್ಳವರು.

೩) ತಮ್ಮದೇ ಆದ ಸ್ವತಂತ್ರ ಪತ್ರಿಕೆಯ ಮಾಲಕರು, ಸಂಪಾದಕರು.

**ಕಾರಕ ಗ್ರಹ** :— ಮೇಲೆ ಬರೆದ ಯಾವುದೇ ವರ್ಗದವ-ರಿದ್ದರೂ ಪ್ರಬಂಧ ಸಾಹಿತ್ಯ ರಚಿಸಲು ಬುಧನು ಬಲಾಢ್ಯನಿರಲೇ ಬೇಕು. ಬುಧನು ಬಲಾಢ್ಯನಿರದೆ ಯಾರೂ ಪತ್ರಿಕೆಗಳ ಲೇಖನ ವೃತ್ತಿಯಲ್ಲಾಗಲಿ ಪ್ರಬಂಧ ಸಾಹಿತ್ಯದಲ್ಲಾಗಲೀ ಪಳಗಲಾರರು.

ಬುಧನ ತರುವಾಯ ಆಯಾ ವಿಷಯಗಳ ಕಾರಕ ಗ್ರಹಗಳ ಬಲಾಬಲವನ್ನೂ ಪರಿಶೀಲಿಸಬೇಕು, ಉದಾಹರಣೆಗೆ— ರಾಜಕೀಯಕ್ಕೆ ಸಂಬಂಧಿಸಿದ ಲೇಖನಗಳನ್ನು ಪ್ರಬಂಧಗಳನ್ನು ಬರೆಯಲು ರವಿಯ ಬಲಾಬಲವನ್ನು, ಕಾಯಿದೆಗೆ ಸಂಬಂಧಿಸಿದ ಲೇಖನಗಳನ್ನು ಬರೆಯಲು ಶನಿಯ ಬಲಾಬಲವನ್ನು, ಶಿಕ್ಷಣ ಹಾಗೂ ಧಾರ್ಮಿಕಕ್ಕೆ ಸಂಬಂಧಿಸಿದ ಲೇಖನ ಬರೆಯಲು ಗುರುವಿನ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ. ಆದರೆ ಒಂದು ಮುಖ್ಯ ಸಂಗತಿಯೆಂದರೆ— ಬುಧನು ರಾಶಿ ಬಲದವನೂ ಸ್ಥಾನ ಬಲದವನೂ ಇದ್ದರೆ, ಆಯಾ ವಿಷಯಗಳ ಕಾರಕ ಗ್ರಹಗಳು ಕೇವಲ ರಾಶಿ ಬಲದವರಿದ್ದರೆ ಸಾಕು.

**ಸ್ಥಾನ :—** ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಬುದ್ಧಿಜೀವಿ ಸ್ಥಾನವಾದ ಪಂಚಮವೂ ಬರೆವಣಿಗೆಯ ಸ್ಥಾನವಾದ ತೃತೀಯವೂ ಕಾರಕಗಳಿದ್ದು ಈ ಸ್ಥಾನಗಳು ಹಾಗೂ ಈ ಸ್ಥಾನಾಧೀಶರು ಬಲಾಢ್ಯರಿರಬೇಕು.

**ಲಗ್ನ :—** ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ, ಕರ್ಕ, ಸಿಂಹ, ಕನ್ಯಾ, ಮೀನ ಈ ಲಗ್ನದವರು ಪ್ರಬಂಧ ಸಾಹಿತ್ಯ ರಚಿಸುವದರಲ್ಲಿ ಪತ್ರಿಕೆಗಳಿಗೆ ಲೇಖನ ಬರೆಯುವದರಲ್ಲಿ ಪರಿಣತರಿರುತ್ತಾರೆ. ಆದರೆ ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ವೃಶ್ಚಿಕ, ಧನು ಈ ಲಗ್ನದವರು ಸ್ವತಂತ್ರವಾಗಿ ಪತ್ರಿಕೆಯ ಮೂಲಕ ಇಲ್ಲವೆ ಸಂಪಾದಕ ( ಕಾರ್ಯನಿರತ ಪತ್ರಿಕೋದ್ಯಮಿಗಳ ) ಕೆಲಸದಲ್ಲಿ ನಿಷ್ಣಾತರು.

**ರಾಶಿ :—** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಮಿಥುನ, ತುಲಾ, ಕುಂಭ ರಾಶಿಯವರು ಲೇಖನ ವ್ಯವಸಾಯದಲ್ಲಿ ಸಿದ್ಧಹಸ್ತರು. ಅವರ ತರುವಾಯ ವೃಷಭ, ಕರ್ಕ, ಮೀನ ರಾಶಿಯವರು ಬರುತ್ತಾರೆ,

## ಸೈದ್ಧಾಂತಿಕ ಸಾಹಿತ್ಯ :—

ವೈಚಾರಿಕ ಸಾಹಿತ್ಯದಲ್ಲಿ ಸೈದ್ಧಾಂತಿಕ ಸಾಹಿತ್ಯ ಬಹಳ ಪ್ರಮುಖವಾದ ಪ್ರಕಾರವಾಗಿದೆ. ಇದು ಸಮಾಜ ರಚನೆಯಲ್ಲಿಯೇ ಮೂಲಭೂತ ಬದ-ಲಾವಣೆ ತರಬಲ್ಲ ಸಾಹಿತ್ಯವಿರುತ್ತದೆ. ಈ ಪ್ರಕಾರದ ಸಾಹಿತ್ಯ ರಚಿಸು-ವವರ ಜಾತಕ ಹೇಗಿರುತ್ತದೆ, ಕಾರಕ ಗ್ರಹ ಲಗ್ನ ಸ್ಥಾನ ರಾಶ್ಯಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ :—** ಈ ಸಾಹಿತ್ಯದ ಹೆಸರೇ ಸೂಚಿಸುವಂತೆ ಸಿದ್ಧಾಂತ, ತತ್ವ, ಧೋರಣೆ, ನಿಲುಮೆ ಇವೇ ಪ್ರಧಾನವಾದ ಅಂಶ. ಆದ್ದರಿಂದ ಸಿದ್ಧಾಂತ-ತತ್ವಗಳ ಕಾರಕ ಗ್ರಹವೆಂದರೆ ಶನಿಯು. ಶನಿಯು ಬಲಾಢ್ಯನಿರದೆ ಯಾರೂ ಸೈದ್ಧಾಂತಿಕ ಸಾಹಿತ್ಯ ರಚಿಸಲಾರರು. ಏಕೆಂದರೆ ಈ ಸಾಹಿತ್ಯವನ್ನು ರಚಿಸುವವರು ತಾವು ನಂಬಿದ ತತ್ವ-ಸಿದ್ಧಾಂತ ತಗಳ ಪ್ರತಿಪಾದನೆಯನ್ನೇ ಮುಖ್ಯ ಅಂಶವನ್ನಾಗಿಟ್ಟುಕೊಂಡಿರುತ್ತಾರೆ. ಅದು ಕ್ರಾಂತಿಕಾರಕ ಸಾಹಿತ್ಯವಾಗಬಹುದು, ಬಂಡಾಯ ಸಾಹಿತ್ಯವಾಗ ಬಹುದು, ದಲಿತ ಸಾಹಿತ್ಯವಾಗಬಹುದು. ಆದ್ದರಿಂದ ಶನಿಯೇ ಸೈದ್ಧಾಂತಿಕ ಸಾಹಿತ್ಯದ ಕಾರಕ ಗ್ರಹ ಶನಿ. ಶನಿಯ ತರುವಾಯ ಬುಧನನ್ನು ಪರಿಶೀಲಿಸಬೇಕು. ಏಕೆಂದರೆ ಯಾವುದೇ ಪ್ರಕಾರದ ಬರವಣಿಗೆಗೆ, ಸಾಹಿತ್ಯಕ್ಕೆ ಬುಧನು ಕಾರಕನು, ಆದರೆ ಮುಖ್ಯ ಅಂಶವೆಂದರೆ ಶನಿಯು ರಾಶಿಬಲದವನು, ಸ್ಥಾನ ಬಲದವನು ಇದ್ದರೆ, ಬುಧನು ಕೇವಲ ರಾಶಿ ಬಲದವನಿರುತ್ತಾನೆ.

**ಸ್ಥಾನ :—** ಸ್ಥಾನದೃಷ್ಟಿಯಿಂದ ಪರಿಶೀಲಿಸಿದರೆ ಬುದ್ಧಿಜೀವಿಗಳ ಸ್ಥಾನವಾದ ಪಂಚಮವೂ ಬರೆವಣಿಗೆಯ ಸ್ಥಾನವಾದ ತೃತೀಯವೂ ಕಾರಕವಿದ್ದು ಈ ಸ್ಥಾನಗಳು ಹಾಗೂ ಈ ಸ್ಥಾನಾಧೀಶರು ಬಲಾಢ್ಯರಿರುತ್ತಾರೆ.

**ಲಗ್ನ : –** ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ,

ತುಲಾ, ವೃಶ್ಚಿಕ, ಮಕರ, ಕುಂಭ ಲಗ್ನದವರಿರುವುದು ಕಂಡುಬರುತ್ತದೆ.

ರಾಶಿ :— ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಮಿಥುನ, ತುಲಾ, ಕುಂಭ ರಾಶಿಯವರು ತದನಂತರ ಮೇಷ, ಸಿಂಹ, ಧನು, ಮೀನ ರಾಶಿಯವರು ಇರುವುದು ಕಂಡುಬರುತ್ತದೆ.

## ೧೦) ಜ್ಯೋತಿಷಿಗಳು

ಪ್ರತಿಯೊಂದು ಊರಲ್ಲಿ ಡಾಕ್ಟರರು, ವಕೀಲರು ಹೇಗಿರುವರೋ ಹಾಗೆಯೇ ಜ್ಯೋತಿಷಿಗಳು ಇರುತ್ತಾರೆ. ಸಣ್ಣ ಸಣ್ಣ ಹಳ್ಳಿಗಳಲ್ಲಿ ಡಾಕ್ಟರರಾಗಲೀ, ವಕೀಲರಾಗಲಿ ಇರುವುದು ಕಡಿಮೆ, ಆದರೆ ಜ್ಯೋತಿಷಿಗಳು ಮಾತ್ರ ಎಂತಹ ಸಣ್ಣ ಹಳ್ಳಿಯಲ್ಲಾದರೂ ಇದ್ದೇ ಇರುತ್ತಾರೆ.

ದೇಹಕ್ಕೆ ಅನಾರೋಗ್ಯವಾದರೆ ಡಾಕ್ಟರರ ಕಡೆಗೆ ಧಾವಿಸಿ ಅವರ ಸಲಹೆ ಪಡೆಯಬಹುದು. ಕೋರ್ಟು ಕಚೇರಿ ವ್ಯಾಜ್ಯ ಮೊದಲಾದ ಕಾನೂನ ಕೆಲಸವಿದ್ದರೆ ವಕೀಲರ ಸಹಾಯ ಪಡೆಯಬಹುದು. ಆದರೆ ಯಾವದೇ ಕಾರಣದಿಂದ ಮನಸ್ತಾಪವಾಗಿದ್ದರೆ, ಮುಂದೇನು ಮಾಡಬೇಕೆಂಬುದು ತಿಳಿಯದಿದ್ದರೆ ದೈವಜ್ಞರನ್ನು ಕೇಳದೆಯೇ ಗತಿ ಇಲ್ಲ. ಅಷ್ಟೇ ಏಕೆ ಡಾಕ್ಟರ, ವಕೀಲ, ಇಂಜಿನೀಯರ, ಉದ್ಯಮದಾರ, ರಾಜಕಾರಣಿ, ಕೂಲಿಕಾರ, ನೌಕರವರ್ಗ, ಶೇತಕಿ ವರ್ಗ, ವ್ಯಾಪಾರಿ ವರ್ಗ, ವಿದ್ಯಾರ್ಥಿ ವರ್ಗ, ಮಹಿಳಾ ವರ್ಗ ಹೀಗೆ ದೇಶದಲ್ಲಿಯ ಎಲ್ಲ ವರ್ಗದವರಿಗೂ ಎಲ್ಲ ಉದ್ಯೋಗಸ್ಥರಿಗೂ ಎಲ್ಲರಿಗೂ ಬೇಕಾಗುವ, ಎಲ್ಲ ಕಾಲದಲ್ಲಿಯೂ ಬೇಕಾದಿರುವ ವರ್ಗವೆಂದರೆ ಜ್ಯೋತಿಷಿಗಳ ವರ್ಗವೆಂದರೆ ತಪ್ಪಾಗಲಿಕ್ಕಿಲ್ಲ.

ಈ ತರಹದ ಉದ್ಯೋಗಸ್ಥರು ಸಾಧಾರಣವಾಗಿ ಸ್ವತಂತ್ರ ಉದ್ಯೋಗಸ್ಥರಿರುತ್ತಾರೆ. ಇನ್ನು ಕೆಲವು ಜನರು ಬೇರೆ ಯಾವುದೋ ಉದ್ಯೋಗವನ್ನು ಮಾಡುತ್ತಾ ಜ್ಯೋತಿಷ್ಯವನ್ನು ಹವ್ಯಾಸವನ್ನಾಗಿ ಬೆಳೆಸಿಕೊಂಡು ಇಲ್ಲವೆ ಇದೊಂದು ಉಪಉದ್ಯೋಗವೆಂದು ಮಾಡುತ್ತಿದ್ದಾರೆ.

ಆದರೆ ಸ್ವತಂತ್ರ ಉದ್ಯೋಗದ ಜ್ಯೋತಿಷಿಗಳಂತೆ ಇವರು ಈ ಶಾಸ್ತ್ರದಲ್ಲಿ ಹೆಚ್ಚು ನುರಿತವರಾಗಲಿ ಪ್ರವೀಣರಾಗಲಿ ಪಳಗಿದವರಾಗಲಿ ಇರುವುದು ಕಡಿಮೆ. ಏಕೆಂದರೆ ಇದೊಂದು ಅನುಭವ ಶಾಸ್ತ್ರ. ಅನುಭವ ಹಾಗೂ ಪ್ರಯೋಗಗಳಿಂದಲೇ ಹೆಚ್ಚು ಜ್ಞಾನ ಬೆಳೆಯುವದಲ್ಲದೆ ಪುಸ್ತಕ ಜ್ಞಾನ ಒಂದೇ ಇಲ್ಲಿ ಅಷ್ಟೊಂದು ಸಲ್ಲದು. ಸಾವಿರಾರು ಜಾತಕಗಳನ್ನು ಪರಿಶೀಲಿಸಿ ಸ್ವತಃ ಸಾವಿರಾರು ಜಾತಕಗಳನ್ನು ತಯಾರಿಸಿದಾಗಲೇ ಆತ ಯಶಸ್ವಿ ಫಲಜ್ಯೋತಿಷಿಯಾಗಬಲ್ಲ. ಇದಕ್ಕೆ ಕಾರಣವಿಷ್ಟೇ–

ಡಾಕ್ಟರರು, ವಕೀಲರಂತೆ ಜ್ಯೋತಿಷಿಗಳು ಕೂಡಾ ಸಮಾಜಕ್ಕೆ ಹೆಚ್ಚು ಸಹಾಯಕರಾಗಿರುತ್ತಾರೆ. ಉದಾಹರಣೆಗೆ— ನನ್ನ ಬಳಿಗೆ ಬಂದ ರೋಗಿಯೊಬ್ಬನ ಬಲಭುಜಕ್ಕೆ ಎಲುಬು ಮುರಿದಿದೆ (Fracture) ಯೆಂದು ಭವಿಷ್ಯ ಹೇಳಲಾಗಿತ್ತು. ಡಾಕ್ಟರರು ಆ ಭಾಗದ ಎಕ್ಸರೇ ತೆಗೆದ ಬಳಿಕ ಈ ಅಂಶ ಸಿದ್ಧವಾಯಿತು. ಇದರಂತೆ ಇನ್ನೊಂದು ಸಂದರ್ಭದಲ್ಲಿ ಒಬ್ಬ ಪಕ್ಷಗಾರನ ಕೇಸು ವಕೀಲರಿಗೂ ತಿಳಿಯದಿದ್ದಾಗ ನಾನು ಅವನ ಜಾತಕ ನೋಡಿ ಅವನ ಕೇಸಿಗೆ ಸಂಬಂಧಿಸಿದ ಕಾಗದ ಪತ್ರಗಳ ಭಾಷಾಂತರದಲ್ಲಿ ತಪ್ಪು ಉಳಿದಿದೆ ಎಂದು ನುಡಿದಿದ್ದೆ. ಅದೇ ಅಂಶದ ಮೇಲೆ ಆ ಕೇಸು ಗೆದೆಯಲ್ಪಟ್ಟಿತು, ಇದರಿಂದ ರವಿ ಕಾಣದುದನ್ನು ಕವಿ ಕಂಡ ಎಂಬ ನಾಣ್ಣುಡಿ ಇದ್ದರೆ, ರವಿ ಕಾಣದ್ದನ್ನು ಜ್ಯೋತಿಷಿ ಕಾಣುವನು ಎಂದರೆ ತಪ್ಪೇನೂ ಆಗಲಿಕ್ಕಿಲ್ಲ.

ಜ್ಯೋತಿಷ್ಯದಲ್ಲಿ ಜನರ ಆಸಕ್ತಿ, ನಂಬಿಕೆ ಮೊದಲಿಗಿಂತಲೂ ಇಂದು ಹೆಚ್ಚಾದುದನ್ನು ಕಾಣಬಹುದು. ಇದಲ್ಲದೆ ಈ ಹಿಂದೆ ಜ್ಯೋತಿಷ್ಯವನ್ನು ಮನೆಯ ಹಿರಿಯರೇ ವಿಚಾರಿಸುತ್ತಿದ್ದರು, ಇಂದು ಕಾಲ ಬದಲಾಗಿದೆ. ವಿದ್ಯಾರ್ಥಿಗಳಿಂದ ಹಿಡಿದು ವಯಸ್ಸಾದ ಹಿರಿಯರವರೆಗೂ ಎಲ್ಲರೂ ವಿಚಾರಿಸುತ್ತಾರೆ. ಇದಕ್ಕೆ ಕಾರಣವಿಷ್ಟೇ, ಸಿತ್ಯ ಜೀವನ ಇಂದು ಬರಡಾಗಿದೆ. ಜನರಲ್ಲಿ ಅಸ್ಥಿರತೆ ಹೆಚ್ಚು ಹೆಚ್ಚಾಗುತ್ತಾ ಸಾಗಿದೆ. ಶಿಶುಗಳಿಂದ ಹಿಡಿದು ವೃದ್ಧರವರೆಗಿನವರಿಗೆ ಸಮಸ್ಯೆಗಳವೆ (ಸಮಸ್ಯೆಗಳ ಕ್ಲಿಷ್ಟತೆಗೆ

ಹೀಗೆ ಜ್ಯೋತಿಷ್ಯದ ಸಲಹೆ-ಪರಿಹಾರವನ್ನು ಬಯಸುವವರು ಯಾರು ಹೇಗೆ ಎಂತು ಎಂಬುದನ್ನು ಕುರಿತು ನಮ್ಮ "ಅಧಿಕಾರಿ ಜ್ಯೋತಿಷ್ಯ" ಗ್ರಂಥದಲ್ಲಿ ವಿವರ-ವಿವರವಾಗಿ ವಿವರಿಸಲಾಗಿದೆ. )

ಬಾಳಿನಲ್ಲಿ ಬೇಸರ ಬಂದು ಮನಸ್ಸಿನ ದುಗುಡ ಪರಿಹಾರಕ್ಕಾಗಿ ಸಾಮಾನ್ಯ ಮನುಷ್ಯನಿಗೆ ಯಾವುದಾದರೂ ಸಮಾಧಾನಕರ ಸಾಧನದ ಅವಶ್ಯಕತೆ ಎದ್ದುಕಾಣುತ್ತದೆ. ಸಮಾಧಾನಕರವಾದ ಪರಿಹಾರದ ಪ್ರಮುಖಸಾಧನವೆಂದರೆ ಜ್ಯೋತಿಷ್ಯವೆಂದೇ ಹೇಳಬಹುದು. ಆದ್ದರಿಂದಲೇ ಜ್ಯೋತಿಷಿಗಳ ವೃತ್ತಿ ಚನ್ನಾಗಿ ನಡೆಯುತ್ತಿದೆ ಎಂದು ಹೇಳಬಹುದು, ಆದಾಗ್ಯೂ ಎಲ್ಲ ಜ್ಯೋತಿಷಿಗಳ ವೃತ್ತಿ ಚನ್ನಾಗಿ ನಡೆಯುತ್ತಿದೆಯೆಂದು ಹೇಳಲುಬಾರದು. ಆದ್ದರಿಂದ ಫಲಜ್ಯೋತಿಷದಲ್ಲಿ ಈ ವೃತ್ತಿ ಕೈಕೊಳ್ಳಲು ಜಾತಕ ಹೇಗಿರಬೇಕು, ಕಾರಕ ಗ್ರಹ ಲಗ್ನ ಸ್ಥಾನ ಲಗ್ನ ರಾಶ್ಯಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ :—** ಜ್ಯೋತಿಷ್ಯ ವೃತ್ತಿ ಕೈಕೊಳ್ಳುವವರ ಕಾರಕ ಗ್ರಹ ಯಾವುದೆಂಬುದನ್ನು ತಿಳಿಯುವ ಮೊದಲು ಜ್ಯೋತಿಷಿಗಳಲ್ಲಿಯ ಪ್ರಕಾರಗಳನ್ನು ತಿಳಿಯುವುದು ಅವಶ್ಯವು. ಹೇಗೆ ಡಾಕ್ಟರರಲ್ಲಿ ಅಲೋಪತಿ-ಹೋಮಿಯೋಪಥಿ-ಆಯುರ್ವೇದ-ಯುನಾನಿ ಮೊದಲಾದ ಪ್ರಕಾರಗಳಿವೆಯೋ, ವಕೀಲರಲ್ಲಿ ಸಿವಿಲ್-ಕ್ರಿಮಿನಲ್, ತೆರಿಗೆ ಸಲಹೆಗಾರರು, ಇತ್ಯಾದಿಯಾಗಿ ಇರುವರೋ, ಹೇಗೆ ಸಂಗೀತಗಾರರಲ್ಲಿ ಕಿರಾಣಾ, ಗ್ವಾಲೇರ, ಆಗ್ರಾ, ಜೈಪುರ ಮೊದಲಾದ ಘರಾಣೆಗಳಿವೆಯೋ ಹಾಗೆ ಜ್ಯೋತಿಷಿಗಳಲ್ಲಿ ಅನೇಕ ಪ್ರಕಾರದವರಿದ್ದಾರೆ. ಪ್ರಸ್ತುತ ೪ ವರ್ಗಗಳ ಜ್ಯೋತಿಷಿಗಳ ಬಗೆಗೆ ಮಾತ್ರ ಇಲ್ಲಿ ವಿವರಿಸಲಾಗಿದೆ.

೧) ಪಂಚಾಂಗ ಕರ್ತರು
೨) ಪುರೋಹಿತರು ಹಾಗೂ ಧರ್ಮೋಪದೇಶಕರು
೩) ಯಂತ್ರ-ಮಂತ್ರಗಳ ಮಾಂತ್ರಿಕರು

೪) ಫಲಜ್ಯೋತಿಷಿಗಳು:—

ಯಾವುದೊಂದು ದಿನ ಯಾವ ಗ್ರಹ, ನಕ್ಷತ್ರ ಯಾವಾಗ ಬದಲಾಗುವುದು ಎಂಬುದನ್ನು ನಿಶ್ಚಯವಾಗಿ ಹೇಳುವವರು ಪಂಚಾಂಗ ಕರ್ತರಿದ್ದರೆ ಬದಲಿ ಆಗುವ ಗ್ರಹದ, ನಕ್ಷತ್ರದ ಪರಿಣಾಮ ಭಿನ್ನಭಿನ್ನ ವ್ಯಕ್ತಿಯ ಮೇಲೆ ವೃತ್ತಿಯ ಮೇಲೆ ನಿಸರ್ಗದ ಮೇಲೆ ವಸ್ತುಗಳ ಮೇಲೆ ಪಶು-ಪಕ್ಷ್ಯಾದಿ ಪ್ರಾಣಿಗಳ ಮೇಲೆ ರಾಷ್ಟ್ರದ ಮೇಲೆ ಆಗುವ ಪರಿಣಾಮ ಗಳನ್ನು ಫಲಜ್ಯೋತಿಷಿ ಹೇಳಬಲ್ಲ, ಕಥನ ಮಾಡಬಲ್ಲ. ಇದರಂತೆಯೇ ಗ್ರಹಗಳು ಬದಲಾದಾಗ ಆಗುವಾಗ ಇಲ್ಲವೆ ತಿಥಿ ನಕ್ಷತ್ರಾದಿಗಳ ಮೇಲಿಂದ ಮಾಡಲಾಗುವ ಧರ್ಮ ಕಾರ್ಯದ ಅಧಿಕಾರ ವ್ಯಾಪ್ತಿಯನ್ನು ಇಲ್ಲವೆ ಧಾರ್ಮಿಕ ವಿಧಿ ನಿಷೇಧಗಳ ಕರ್ಮ-ಕರ್ತವ್ಯ ಪಾಲನೆ ವಿಧಿ-ನಿಯಮ ಮೊದಲಾದವುಗಳ ನಿರ್ದಿಷ್ಟವಾದ ನಿಶ್ಚಿತವಾದ ವ್ಯಾಪ್ತಿ-ಯನ್ನು ಅಧಿಕಾರವಾಣಿಯಿಂದ ಹೇಳುವವರೇ ಧರ್ಮೋಪದೇಶಕರು, ಪಂಡಿತರು. ಇದರಂತೆ ಧಾರ್ಮಿಕ ವಿಧಿಗಳನ್ನು ನೆರವೇರಿಸುವದರಲ್ಲಿ ಸಹಾಯ ಮಾಡುವವರೇ ಪುರೋಹಿತರು. ಇದರಂತೆ ಭಿನ್ನ ಭಿನ್ನ ಗ್ರಹ ಗಳಿಂದಾಗಲಿ ಜಾದು-ಗಾರುಡಿ ವಿದ್ಯೆಗಳಿಂದಾಗಲಿ ಪಿಶಾಚ ಪ್ರವೇಶ-ಕರ್ಣ-ಶೃತಿ-ಮಾಟ-ಮದ್ದು ಮೊದಲಾದ ವಿದ್ಯೆಗಳಿಂದಲಾಗಲಿ ಯಂತ್ರ-ಮಂತ್ರಾದಿಗಳನ್ನು ಮಾಡುವವರೇ ಮಾಂತ್ರಿಕರು.

ಸ್ಥೂಲವಾಗಿ ನೋಡಿದರೆ ಎಲ್ಲರೂ ಭವಿಷ್ಯಕಾರರು, ಭವಿಷ್ಯದ ಭಾಷೆಯನ್ನು ಬಲ್ಲವರಾಗಿದ್ದರೂ ಆಯಾ ವರ್ಗದವರಿಗೆ ಆಯಾ ವೃತ್ತಿಯ ಕಾರಕ ಗ್ರಹ ಲಗ್ನ ಸ್ಥಾನಾದಿಗಳು ವಿಭಿನ್ನವಿದ್ದು ಅವುಗಳನ್ನು ಪರಿಶೀಲಿಸುವಾ.

೧) ಪಂಚಾಂಗ ಕರ್ತರು:—

೧) ಪಂಚಾಂಗದಲ್ಲಿಯ ಲೆಕ್ಕಗಳಿಗೆ ಗಣಿತಕಾರಕನಾದ ಮಂಗಳನೂ ಸಂಖ್ಯಾಕಾರಕನಾದ ಬುಧನು ಬಲಾಢ್ಯರಿರಬೇಕು.

೨) ಪಂಚಾಂಗಕರ್ತರಿಗೆ ತೃತೀಯ, ಪಂಚಮ ಸ್ಥಾನಗಳು ಕಾರಕ ಗಳಿವೆ; ತೃತೀಯೇಶ ಪಂಚಮೇಶರು ಬಲಾಢ್ಯರಿರಬೇಕಲ್ಲದೆ, ಪಂಚಮ-ತೃತೀಯದಲ್ಲಿ ಬಲಾಢ್ಯ ಗ್ರಹಗಳಿರಬೇಕು.

೩) ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ಧನು, ಮಕರ ಲಗ್ನಗಳು ಕಾರಕವಿರುತ್ತವೆ.

೨) ಪೌರೋಹಿತ್ಯ ವೃತ್ತಿ ಅಥವಾ ಪುರೋಹಿತರು.

ಹಿಂದು ಸಮಾಜವು ಸಂಪ್ರದಾಯ ಭೂಯಿಷ್ಟವಾದುದು. ಆದ್ದರಿಂದ ವ್ಯಕ್ತಿ ಹುಟ್ಟನಿಂದ ಸಾವಿನವರೆಗೂ ( ಸತ್ತ ನಂತರವೂ ) ಎಲ್ಲ ಮಹತ್ವದ ಕಾರ್ಯಗಳಲ್ಲಿ ಸಂಪ್ರದಾಯಕ ಕೃತಿ ವಿಧಿಯುಕ್ತ ಕ್ರಿಯಾದಿಗಳ ಆಚರಣೆ ರೂಢಿಯಲ್ಲಿವೆ. ಇದಕ್ಕೆ ಪ್ರತಿ ಹಂತದಲ್ಲಿಯೂ ಪುರೋಹಿತರ ಅವಶ್ಯಕತೆ ಇವೆ. ಉದಾಹರಣೆಗೆ, — ಶ್ರೀರುದ್ರ, ಶ್ರೀಸೂಕ್ತ, ಪುರುಷ ಸೂಕ್ತ, ಸತ್ಯನಾರಾಯಣ ಮೊದಲಾದ ದೇವರ ಪೂಜೆಗೂ ಗಣಪತಿ-ತುಳಸಿ- ಋಷಿಪಂಚಮಿ-ಲಕ್ಷ್ಮೀಪೂಜೆ-ಸೋಳಾ ಸೋಮವಾರ ಪೂಜೆ-ಸಂಕಷ್ಟಿ ವೃತ ಮೊದಲಾದ ವೃತಗಳಿಗೂ ಜಾವಳ, ಮುಂಜಿ, ಮದುವೆ, ಸೀಮಂತ, ನಾಮಕರಣ ಸಮಾರಂಭ ಮೊದಲಾದ ಕರ್ಮ-ಸಂಸ್ಕಾರಗಳಿಗೂ ವಾಸ್ತು-ಗೃಹಪ್ರವೇಶ ಮೊದಲಾದ ಧಾರ್ಮಿಕ ಕ್ರಿಯೆಗಳಿಗೂ ಶ್ರಾದ್ಧ-ಪಕ್ಷಗಳ ವಿಧಿಗಳಿಗೂ ಪುರೋಹಿತರು ಬೇಕೇ ಬೇಕು. ಹೀಗೆ ಪುರೋಹಿತ ವೃತ್ತಿ ಗೌರವಪೂರ್ಣವಾಗಿದ್ದರೂ ದೇಶದ ಜನಸಂಖ್ಯೆಗೆ ಅನುಗುಣವಾಗಿ ಪುರೋಹಿತರ ಸಂಖ್ಯೆ ಇಲ್ಲ. ಅದರಲ್ಲಿಯೂ ಬೆಂಗಳೂರು, ಧಾರವಾಡ, ಹುಬ್ಬಳ್ಳಿಗಳಂದ ಪಟ್ಟಣಗಳಲ್ಲಿ ಇವರ ಕೊರತೆ ಬಹಳ ಇದೆ.

ಇದರಿಂದ ಈ ವೃತ್ತಿಯ ಮಹತ್ವ ಎಷ್ಟು ಎಂಬುದೂ ಅರ್ಥವಾಗುತ್ತದೆ. ಆದ್ದರಿಂದ ಇಂಥ ವೃತ್ತಿ ಕೈಕೊಳ್ಳುವವರ ಕಾರಕ ಗ್ರಹ ಲಗ್ನ ಸ್ಥಾನಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

೧) ಧರ್ಮ ಶಾಸ್ತ್ರವನ್ನು ಅಭ್ಯಸಿಸಿ ಧರ್ಮ ಶಾಸ್ತ್ರದ ಉಪದೇಶ

ಮಾಡುವ ಧರ್ಮೋಪದೇಶಕರಿಗೂ ಧಾರ್ಮಿಕ ವಿಧಿ ನಿಯಮ ವ್ರತ ಪೂಜಾದಿಗಳನ್ನು ನೆರವೇರಿಸುವ ಪುರೋಹಿತರಿಗೂ ಕಾರಕ ಗ್ರಹವೆಂದರೆ ಗುರುವು. ಗುರುವು ಬಲಾಢ್ಯನಿರದೆ ಯಾರೂ ಧರ್ಮೋಪದೇಶಕ, ಪುರೋಹಿತ ವೃತ್ತಿಯಲ್ಲಿ ಯಶಸ್ವಿಯಾಗಲಾರರು. ಏಕೆಂದರೆ ಧರ್ಮೋಪದೇಶಕರಾಗಲಿ ಪುರೋಹಿತರಾಗಲಿ ವೈದಿಕ ಶಿಕ್ಷಣದ ವ್ಯಾಸಂಗ ಮಾಡಬೇಕಾಗುತ್ತದೆ. ವೈದಿಕ ಶಿಕ್ಷಣದ ಮುಖ್ಯ ವಿಷಯಗಳಾದ ಸಂಸ್ಕೃತ, ವೇದ ಆಗಮ, ತರ್ಕ,ನ್ಯಾಯ ಮೀಮಾಂಸೆ, ವೇದಾಂತ, ಸ್ಮೃತಿ ಮೊದಲಾದ ವಿಷಯಗಳ ಕಾರಕಗ್ರಹವೆಂದರೆ ಗುರು. ಗುರುವು ಬಲಾಢ್ಯನಿರದೆ ಯಾರೂ ವೈದಿಕ ಶಿಕ್ಷಣದಲ್ಲಿ ಯಶಸ್ವಿಯಾಗರು. ಇದರಂತೆ ಧರ್ಮೋಪದೇಶಕರಿಗೂ ಗುರುವೇ ಕಾರಕನು.

೨) ಈ ವೃತ್ತಿಯ ಕಾರಕ ಸ್ಥಾನಗಳೆಂದರೆ ಪಂಚಮ ಹಾಗೂ ದ್ವಿತೀಯ ಸ್ಥಾನಗಳು. ಆದ್ದರಿಂದ ಪಂಚಮ, ದ್ವಿತೀಯ ಸ್ಥಾನಗಳೂ ಪಂಚಮೇಶ, ದ್ವಿತೀಯೇಶರೂ ಬಲಾಢ್ಯರಿರಬೇಕಾಗುತ್ತದೆ.

೩) ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ ಮಿಥುನ, ಕರ್ಕ, ಸಿಂಹ, ವೃಶ್ಚಿಕ ಧನು ಮೀನ ಲಗ್ನದವರೇ ಹೆಚ್ಚಾಗಿರುವುದು ಕಂಡುಬರುತ್ತದೆ.

**ರಾಶಿ :** ರಾಶಿ ದೃಷ್ಟಿಯಿಂದ ನೋಡಿದರೆ ನಿರ್ದಿಷ್ಟ ರಾಶಿಯವರೇ ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆಂದು ಹೇಳಲುಬಾರದು.

೩) **ಮಾಂತ್ರಿಕರು :—** ಮಂತ್ರ-ತಂತ್ರ - ಮಾಟ-ಮದ್ದುಗಳ ಜ್ಞಾನ ಪಡೆಯಲು ಹಾಗೂ ಪ್ರಯೋಗಿಸಲು ಮತ್ತು ಪ್ರತಿಬಂಧಿಸಲು ಕಾರಕ ಗ್ರಹವೆಂದರೆ ರಾಹು. ರಾಹು ಬಲಾಢ್ಯನಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು. ರಾಹುವಿನ ನಂತರ ಮಂಗಳನೂ ಕೆಲ ಮಟ್ಟಿಗೆ ಕಾರಕನು.

೨) ಪಂಚಮ ಹಾಗೂ ತೃತೀಯ ಸ್ಥಾನಗಳು ಈ ವೃತ್ತಿಯ ಸ್ಥಾನಗಳಿದ್ದು ಈ ಸ್ಥಾನಗಳು ಹಾಗೂ ಸ್ಥಾನಾಧೀಶರು ಬಲಾಢ್ಯರಿರಬೇಕು.

೩) ಮೇಷ, ವೃಷಭ, ಕರ್ಕ, ಸಿಂಹ, ವೃಶ್ಚಿಕ, ಧನು, ಮಕರ ಈ ಲಗ್ನದವರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

೪) ರಾಶಿದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ಮಿಥುನ, ಸಿಂಹ, ವೃಶ್ಚಿಕ, ಧನು, ಮಕರ, ಕುಂಭ ಈ ರಾಶಿಯವರೇ ಹೆಚ್ಚಾಗಿರುವುದು ಕಂಡುಬರುತ್ತದೆ.

೪) ಫಲ ಜ್ಯೋತಿಷಿಗಳು :—

ಒಂದು ದೃಷ್ಟಿಯಿಂದ ನೋಡಿದರೆ ಈ ಫಲಜ್ಯೋತಿಷಿಗಳು ಈ ಎಲ್ಲ ವಿಭಾಗಗಳಲ್ಲಿಯೂ ಪರಿಣತರಿರುವುದನ್ನು ಕಾಣಬಹುದು. ಆದ್ದರಿಂದ ಈ ವೃತ್ತಿ ಕೈಕೊಳ್ಳಲು ಜಾತಕನಿಗೆ ಅನೇಕ ಗ್ರಹಗಳು ಕಾರಕವಿರುತ್ತವೆ. ಆದ್ದರಿಂದ ಈ ವೃತ್ತಿಯ ಕಾರಕ ಗ್ರಹಗಳಾವವು ಎಂಬುದನ್ನು ಪರಿಶೀಲಿಸುವಾ,

**ಕಾರಕ ಗ್ರಹ :—**

ಮೊದಲನೇದಾಗಿ ಈ ಶಾಸ್ತ್ರವು ವೇದಾಂತದಲ್ಲಿ ಬರುವುದರಿಂದ ವೇದಗಳ ಕಾರಕ ಗ್ರಹವಾದ ಗುರುವು ಬಲಾಢ್ಯನಿರಬೇಕು.

ಎರಡನೇದಾಗಿ ಜ್ಯೋತಿಷ್ಯವು ಲಲಿತಕಲೆಗಳಲ್ಲಿ ಒಂದಾಗಿರುವುದರಿಂದ ಕಲೆಗಳ ಕಾರಕಗ್ರಹವಾದ ಶುಕ್ರನು ಪೋಷಕನಿರಬೇಕು.

ಮೂರನೇದಾಗಿ ಫಲಜ್ಯೋತಿಷಿಗಳಿಗೆ ಗ್ರಹ ನಕ್ಷತ್ರಗಳ ಗಣಿತ-ಗುಣಿತಗಳ ಮೇಲಿಂದ ಭವಿಷ್ಯದ ಭಾಷೆಯನ್ನು ಹೇಳಬೇಕಾಗುತ್ತದೆ. ಹಾಗೂ ಮಾತುಗಾರಿಕೆಯೇ ಈ ವೃತ್ತಿಯ ಮುಖ್ಯ ಗುಣಧರ್ಮವಿರುವುದರಿಂದ ಮಾತುಗಾರಿಕೆಯ ಕಾರಕನೂ ಅಂಕಿ-ಸಂಖ್ಯಾ ಶಾಸ್ತ್ರದ ಕಾರಕನೂ ಆದ ಬುಧನು ಬಲಾಢ್ಯನಿರಲೇಬೇಕು. ಹೀಗೆ ಗುರು, ಶುಕ್ರ, ಬುಧರು

ಬಲಾಢ್ಯರಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು.

**ಸ್ಥಾನ :—** ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಈ ವೃತ್ತಿಯ ಮುಖ್ಯ ಸ್ಥಾನವೆಂದರೆ ದ್ವಿತೀಯ ಸ್ಥಾನವು. ಏಕೆಂದರೆ ಮಾತುಗಾರಿಕೆ, ಅರ್ಥವಿವರಣೆ ಮೊದಲಾದ ಮಾತುಗಾರಿಕೆಗೆ ಸಂಬಂಧಿಸಿದ ಸ್ಥಾನವಾದ ದ್ವಿತೀಯ ಸ್ಥಾನ, ದ್ವಿತೀಯೇಶರು ಬಲಾಢ್ಯರಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು. ದ್ವಿತೀಯದ ನಂತರ ಪಂಚಮ ಹಾಗೂ ಲಗ್ನ ಕಾರಕವಿರುತ್ತವೆ. ಆದ್ದರಿಂದ ಪಂಚಮೇಶ-ಲಗ್ನೇಶ- ದ್ವಿತೀಯೇಶರೂ ಹಾಗೂ ಈ ಸ್ಥಾನಗಳೂ ಬಲಾಢ್ಯವಿರಬೇಕಾಗುತ್ತದೆ.

**ಲಗ್ನ :—** ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಮಿಥುನ, ಕರ್ಕ, ತುಲಾ, ಮೀನ ಈ ಲಗ್ನದವರಿರುವುದು ಕಂಡುಬರುತ್ತದೆ. ನಂತರ ಕನ್ಯಾ, ವೃಶ್ಚಿಕ, ಕುಂಭ ಲಗ್ನದವರು.

**ರಾಶಿ :—** ರಾಶಿ ದೃಷ್ಟಿಯಿಂದ ನೋಡಿದರೆ ನಿರ್ದಿಷ್ಟ ರಾಶಿಯವರೇ ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ ಎಂದು ಹೇಳಲು ಬಾರದು.





# ಸಾರಿಗೆ ವೃತ್ತಿ

ಮಾನವ ಪ್ರಗತಿ ಮತ್ತು ಅಭಿವೃದ್ಧಿಗೆ ಸಾರಿಗೆ ಒಂದು ಅನಿವಾರ್ಯ ಅಂಗ. ಸಾರಿಗೆ ವೃತ್ತಿಯು ಕೂಡ ಆಧುನಿಕ ಯುಗದಲ್ಲಿ ಬಹಳಷ್ಟು ವಿಸ್ತಾರಗೊಂಡು ಬೆಳೆದಿದೆ. ಪ್ರಾಚೀನ ಕಾಲದಲ್ಲಿ ಕುದುರೆ, ಕತ್ತೆ, ಎತ್ತು, ಆನೆ, ಒಂಟೆ ಮೊದಲಾದ ಪ್ರಾಣಿಗಳು ಸಾರಿಗೆಯ ಪ್ರಮುಖ ಸಾಧನಗಳಾಗಿದ್ದವು. ಈಗ ಚಕ್ಕಡಿ ಹೋಗಿ ಟ್ರಾಕ್ಟರ ಬಂದಿದೆ; ಸಾಯಿಕಲ್ ಹೋಗಿ ಮೋಟಾರ ಸಾಯಿಕಲ್ ಬಂದಿದೆ. ಅತೀ ಶೀಘ್ರಗಾಮಿ ವಾಹನಗಳಾದ ವಿಮಾನಗಳು ಜಾರಿಯಲ್ಲಿ ಬಂದಿವೆ. ಸಾರಿಗೆಯು ಪ್ರಗತಿಯ ಜೀವನಾಡಿ ಎಂದಾಗ ಈ ಸಾರಿಗೆ ವೃತ್ತಿಯು ಪ್ರಮುಖ ವೃತ್ತಿಯಾಗಿ ಬೆಳೆಯುತ್ತದೆ. ಸಾರಿಗೆಯಲ್ಲಿ ಪ್ರಯಾಣಿಕ ವಾಹನಗಳು ಒಂದು ಬಗೆಯಾದರೆ, ಸಾಮಗ್ರಿ ವಾಹನಗಳು ಇನ್ನೊಂದು ಬಗೆಯವು. ಸಾರಿಗೆಯು ರಸ್ತೆಯ ಮೇಲಾಗಬಹುದು, ನೀರಿನಲ್ಲಾಗಬಹುದು, ಆಕಾಶದಲ್ಲಾಗಬಹುದು; ಅಂತೆಯೇ ಸಾರಿಗೆ ವೃತ್ತಿಯು ಎಲ್ಲ ಪ್ರಕಾರಗಳದ್ದಿರುತ್ತದೆ.

ರಸ್ತೆಯ ಮೇಲೆ ಪ್ರಯಾಣಿಕರ ರವಾನೆಗೆಂದು ಜಟಕಾ, ಟಾಂಗಾ, ಸಾಯಿಕಲ್ ರಿಕ್ಷಾ,ಆಟೋ ರಿಕ್ಷಾ. ಟೆಂಪೋ, ಟ್ಯಾಕ್ಸಿ, ಬಸ್ಸು ಇವುಗಳಿದ್ದರೆ ನೀರಿನ ಮೇಲೆ ನಾವೆ, ಹಡಗುಗಳ ಬಳಕೆ ಇರುತ್ತದೆ. ಇದೇ ರೀತಿಯಾಗಿ ಆಕಾಶದಲ್ಲಿ ವಿಮಾನ ಹೆಲಿಕಾಪ್ಟರಗಳ ಬಳಕೆ ಜಾರಿಯಲ್ಲಿದೆ. ವಸ್ತು-ಒಡವೆಗಳ ರವಾನೆಗೆಂದು ಪ್ರಮುಖವಾಗಿ ಕೈಗಾಡಿ ಎತ್ತಿನಗಾಡಿ,ಟೆಂಪೋ, ಟ್ರಕ್ಕು, ಹಡಗು, ವಿಮಾನ ಈ ರೀತಿಯಾಗಿವೆ ( ರೈಲು ಕೂಡ ಸಾರಿಗೆಯ ಪ್ರಮುಖ ಸಾಧನವಾಗಿದ್ದರೂ ಸ್ವತಂತ್ರ ವೃತ್ತಿಯಾಗಿ ಕೈಕೊಳ್ಳಲು ಬಾರದಿರುವುದರಿಂದ ಇದರ ಉಲ್ಲೇಖವನ್ನು ಇಲ್ಲಿ ಮಾಡಿಲ್ಲ. ) ಆದ್ದರಿಂದ ಸಾರಿಗೆ ವೃತ್ತಿ ಕೈಕೊಳ್ಳಲು ಜಾತಕ ಹೇಗಿರಬೇಕು, ಕಾರಕ ಗ್ರಹ ಸ್ಥಾನ ಲಗ್ನಗಳು ಯಾವವು ಎಂಬುದನ್ನು ಪರಿಶೀಲಿಸೋಣ.

**ಕಾರಕ ಗ್ರಹ:** — ಈ ಹಿಂದೆ ವಿವರಿಸಿದಂತೆ ಸಾರಿಗೆ ವಾಹಕಗಳಲ್ಲಿ ಅನೇಕ ಪ್ರಕಾರಗಳಿರುವುದರಿಂದಲೂ ವಾಹನ ಉಪಯೋಗದಲ್ಲಿಯೂ ವಿಭಿನ್ನತೆ ಇರುವುದರಿಂದಲೂ ವಿಭಿನ್ನ ವಾಹಕಗಳ ಹಾಗೂ ವಿಭಿನ್ನ ಉದ್ದೇಶಗಳ ಕಾರಕ ಗ್ರಹಗಳು ವಿಭಿನ್ನವಿರುತ್ತವೆ.

ಕೈಗಾಡಿ, ಎತ್ತಿನ ಗಾಡಿ, ಜಟಕಾ, ಟಾಂಗಾ, ಸಾಯಿಕಲ್ ರಿಕ್ಷಾಗಳ ವೃತ್ತಿ ಕೈಕೊಳ್ಳುವವರಿಗೆ ಶನಿ-ಚಂದ್ರರು ಬಲಾಢ್ಯರಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು. ಅದರಲ್ಲಿಯೂ ಎತ್ತು, ಕುದುರೆ, ಕತ್ತೆ, ಒಂಟೆ, ಆನೆ ಮೊದಲಾದ ಪ್ರಾಣಿಗಳ ಸಹಾಯದಿಂದ ಸಾರಿಗೆ ವೃತ್ತಿ ಕೈಕೊಳ್ಳಲು ಶನಿ-ಚಂದ್ರರು ಬಲಾಢ್ಯರಿರಬೇಕಾಗುತ್ತದೆ. ಇದರಂತೆ ಡೋಣಿ, ನಾವೆ ಹಡಗು ಮೊದಲಾದ ನೀರಿನ ಮೇಲಿನ ವಾಹಕಗಳ ಸಾರಿಗೆ ವೃತ್ತಿಯವರಿಗೆ ಚಂದ್ರನು ಕಾರಕನಿದ್ದು ಆತ ಬಲಾಢ್ಯನಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗುವುದಿಲ್ಲ. ಇದರಂತೆ ಟ್ರಕ್ಕು, ಟೆಂಪೋ, ಕಾರು, ಬಸ್ಸು, ಆಟೋ ರಿಕ್ಷಾ ಮೊದಲಾದ ಮಶಿನರಿ ಹಾಗೂ ಯಾಂತ್ರಿಕ ಸಾರಿಗೆ ವೃತ್ತಿಯವರಿಗೆ ಮಂಗಳನು ಬಲಾಢ್ಯನಿರಲೇಬೇಕು. ಮಂಗಳನು ಬಲಾಢ್ಯನಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು. ಆದರೆ ಟ್ಯಾಕ್ಸಿ, ಲಗ್‌ಜುರಿ ಬಸ್ಸು, ಆಟೋ ರಿಕ್ಷಾಗಳಂಥ ಪ್ರಯಾಣಿಕ ವಾಹಕಗಳ ಸಾರಿಗೆ ವೃತ್ತಿ ಕೈಕೊಳ್ಳಲು ಮಂಗಳನ ಸಂಗಡ ಚಂದ್ರ-ಶುಕ್ರರು ಕಾರಕರಿರುತ್ತಾರೆ. ಅವರಲ್ಲಿಯೂ ಲಗ್‌ಜುರಿ ಬಸ್‌ಗಳ ಸಾರಿಗೆ ವೃತ್ತಿ ಕೈಕೊಳ್ಳಲು ಶುಕ್ರ-ಚಂದ್ರರಂತೂ ಬಲಾಢ್ಯರಿರಲೇಬೇಕು; ಆದರೆ ಒಂದು ಸಂಗತಿ— ಶುಕ್ರ-ಚಂದ್ರರು ರಾಶಿಬಲದವರು ಇದ್ದರೆ, ಮಂಗಳನು ರಾಶಿ-ಸ್ಥಾನ ಬಲದವನಿರಬೇಕು; ಆತ ದುರ್ಬಲನಿರಕೂಡದು; ಶನಿ-ಮಂಗಳರ ದೃಷ್ಟಿಯೋಗವಿರಕೂಡದು. ಇದರಂತೆ ಟ್ರಕ್, ಟ್ರಾಕ್ಟರ, ಟೆಂಪೋ ಮೊದಲಾದ ಸಾಮುಗ್ರಿ ( ಗೂಡ್ಸ ) ವಾಹಕಗಳ ಸಾರಿಗೆ ವೃತ್ತಿ ಕೈಕೊಳ್ಳುವವರಿಗೆ ಮಂಗಳನೊಂದಿಗೆ ಶನಿ-ಬುಧರನ್ನು ಪರಿಶೀಲಿಸಬೇಕು. ಇಲ್ಲಿ ಮಹತ್ವದ ಅಂಶವೆಂದರೆ ಮಂಗಳನು ರಾಶಿಬಲದವನೂ ಸ್ಥಾನಬಲದವನೂ ಇದ್ದರೆ ಶನಿ-ಬುಧರು ಕೇವಲ ರಾಶಿಬಲದವರಿರುತ್ತಾರೆ. ಆದರೆ ಶನಿ-

ಮಂಗಳ, ಶನಿ –ಚಂದ್ರರ ಯುತಿ ಯೋಗ ಪ್ರತಿಯೋಗ ದೃಷ್ಟಿಯೋಗ ವಿದ್ದವರು ಟ್ರಕ್ಕು, ಟ್ಯಾಕ್ಸಿ, ಆಟೋ ರಿಕ್ಷಾ, ಟೆಂಪೋ ಮೊದಲಾದ ಸಾರಿಗೆ ವೃತ್ತಿ ಕೈಕೊಳ್ಳಲೇಬಾರದು.

ಇದರಂತೆ ವಿಮಾನ, ಹೆಲಿಕಾಪ್ಟರಗಳಂಥ ಆಕಾಶದಲ್ಲಿ ಹಾರಾಡುವ ವಾಹಕಗಳ ಸಾರಿಗೆ ವೃತ್ತಿ ಕೈಕೊಳ್ಳುವವರಿಗೆ ಮಂಗಳನಂತೂ ಬಲಾಢ್ಯನಿರಲೇ ಬೇಕು; ಚಂದ್ರ–ಶನಿಯರು ಬಲಾಢ್ಯರು ಇಲ್ಲವೆ ವಾಯು ರಾಶಿಯವರಿರಬೇಕು; ರವಿಯು ದುರ್ಬಲನಿರಕೂಡದು.

**ಸ್ಥಾನ** :— ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಸಾರಿಗೆ ವೃತ್ತಿ ಯವರಿಗೆ ಅನೇಕ ಸ್ಥಾನಗಳು ಕಾರಕವಿರುತ್ತವೆ. ಟ್ರಕ್ಕು, ಟ್ರಾಕ್ಟರ, ಟೆಂಪೋ ಮೊದಲಾದ ಗೂಡ್ಸ ಸರಕು ಸಾಮಗ್ರಿಗಳ ವಾಹಕ ಸಾರಿಗೆ ವೃತ್ತಿಯವರಿಗೆ ದಶಮ, ತೃತೀಯ, ಷಷ್ಠ ಸ್ಥಾನಗಳು ಕಾರಕವಿದ್ದು ಈ ಸ್ಥಾನಗಳು ಹಾಗೂ ಈ ಸ್ಥಾನಾಧೀಶರು ಬಲಾಢ್ಯರಿರಬೇಕಾಗುತ್ತದೆ. ಟ್ಯಾಕ್ಸಿ, ಆಟೋ ರಿಕ್ಷಾ, ಸಾಯಿಕಲ್, ಬಸ್, ಲಗ್‌ಜರಿ ಬಸ್ ಮೊದಲಾದ ಪ್ರಯಾಣಿಕರ ವಾಹನಗಳ ಸಾರಿಗೆ ವೃತ್ತಿಯವರಿಗೆ ಚತುರ್ಥ ಸ್ಥಾನ ಕಾರಕವಿದ್ದು ಚತುರ್ಥ ಸ್ಥಾನ ಚತುರ್ಥೇಶರು ಬಲಾಢ್ಯರಿರಲೇಬೇಕು. ಚತುರ್ಥದ ನಂತರ ಲಗ್ನವೂ ಕಾರಕವಿದ್ದು ಲಗ್ನ, ಲಗ್ನೇಶರು ಬಲಾಢ್ಯ ರಿರಬೇಕಾಗುತ್ತದೆ, ಆಯಾ ವಾಹನಗಳ ವಾಹಕಗಳ, ಮಾಲಕರೇ ಸಾರಿಗೆ ವೃತ್ತಿ ಕೈಕೊಳ್ಳುವವರಿಗೆ ಲಗ್ನ, ಚತುರ್ಥದೊಂದಿಗೆ ತೃತೀಯ ಸ್ಥಾನ ವನ್ನು ಪರಿಶೀಲಿಸಬೇಕು. ಆದರೆ ವಾಹನಗಳನ್ನು ಬಾಡಿಗೆಯಿಂದ, ಗುತ್ತಿಗೆ ಯಿಂದ ಹಿಡಿದು ಸ್ವತಂತ್ರ ವೃತ್ತಿ ಕೈಕೊಳ್ಳುವವರಿಗೆ ತೃತೀಯ ಸ್ಥಾನ, ತೃತೀಯೇಶ ಬಲಾಢ್ಯರಿರಬೇಕು;ಹಾಗೂ ತೃತೀಯದೊಂದಿಗೆ ಅಷ್ಟಮ ಸ್ಥಾನ ಅಷ್ಟಮೇಶರು ಬಲಾಢ್ಯರಿರಬೇಕಾಗುತ್ತದೆ.

ಇದರಂತೆ ಡೋಣಿ, ನಾವೆ, ಹಡಗು ಮೊದಲಾದ ನೀರಿನ ವಾಹನ ಗಳ ಸಾರಿಗೆ ಕೈಕೊಳ್ಳುವವರಿಗೆ ಚತುರ್ಥ ಸ್ಥಾನವು ಕಾರಕವಿರುತ್ತದೆ. ಚತುರ್ಥದ ನಂತರ ಸಮುದ್ರ, ನದಿ, ಹಳ್ಳಗಳ ಸ್ಥಾನವಾದ ಸಪ್ತಮವೂ

ಕಾರಕವಿದ್ದು ಚುತುರ್ಥ-ಚತುರ್ಥೇಶ, ಸಪ್ತಮ-ಸಪ್ತಮೇಶರು ಬಲಾಢ್ಯ ರಿರಬೇಕು. ಇದರಂತೆ ವಿಮಾನ ಹಾಗೂ ಹೆಲಿಕಾಪ್ಟರಗಳಂಥ ಆಕಾಶ ದಲ್ಲಿ ಸಂಚರಿಸುವ ವಾಹನಗಳ ಸ್ವತಂತ್ರ ವೃತ್ತಿಯವರಿಗೆ ಲಗ್ನ ಹಾಗೂ ಭಾಗ್ಯ ಸ್ಥಾನಗಳು ಕಾರಕವಿದ್ದು, ಲಗ್ನ-ಲಗ್ನೇಶ, ಭಾಗ್ಯ-ಭಾಗ್ಯೇಶರು ಬಲಾಢ್ಯರಿರಬೇಕು.

**ಲಗ್ನ :—** ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಆಟೋ ರಿಕ್ಷಾ ಟ್ರಕ್ಕ, ಟೆಂಪೋ, ಟ್ರ್ಯಾಕ್ಟರ ಮೊದಲಾದ ವಾಹನಗಳ ಸಾರಿಗೆ ವೃತ್ತಿ ಕೈ ಕೊಳ್ಳುವವರಿಗೆ ಮೇಷ, ವೃಷಭ, ಕರ್ಕ, ಸಿಂಹ, ವೃಶ್ಚಿಕ, ಧನು, ಮಕರ ಲಗ್ನಗಳು ಕಾರಕವಿರುತ್ತವೆ. ಇದರಂತೆ ಟ್ರಕ್, ಬಸ್, ಆಟೋ ರಿಕ್ಷಾ, ಸಾಯಿಕಲ್ ರಿಕ್ಷಾ, ಖಾಸಗಿ ಬಸ್ಸುಗಳ ಪ್ರಯಾಣಿಕ ವಾಹನ ಗಳ ಸಾರಿಗೆ ವೃತ್ತಿಯವರಿಗೆ ಮೇಷ, ವೃಷಭ, ಮಿಥುನ, ಕರ್ಕ, ತುಲಾ, ಮಕರ, ಕುಂಭ, ಮೀನ ಈ ಲಗ್ನಗಳು ಕಾರಕವಿರುತ್ತವೆ.

ಇದರಂತೆ ಡೋಣಿ, ಹಡಗು, ನಾವೆ ಮೊದಲಾದ ನೀರಿನ ಮೇಲೆ ಸಂಚರಿಸುವ ವಾಹನಗಳ ಸಾರಿಗೆ ವೃತ್ತಿ ಕೈಕೊಳ್ಳುವವರಿಗೆ ಮೇಷ, ಕರ್ಕ, ತುಲ, ವೃಶ್ಚಿಕ, ಮಕರ, ಮೀನ, ಲಗ್ನಗಳು ಕಾರಕವಿರುತ್ತವೆ. ಇದರಂತೆ ಆಕಾಶದಲ್ಲಿ ಸಂಚರಿಸುವ ವಿಮಾನ, ಹೆಲಿಕಾಪ್ಟರಗಳಂಥ ವಾಹನಗಳ ಸಾರಿಗೆ ವೃತ್ತಿ ಕೈಕೊಳ್ಳುವವರಿಗೆ ಮೇಷ, ವೃಷಭ, ಮಿಥುನ, ತುಲಾ, ವೃಶ್ಚಿಕ, ಧನು, ಕುಂಭ, ಮೀನ ಈ ಲಗ್ನಗಳು ಕಾರಕವಿರುತ್ತವೆ.

**ರಾಶಿ :—** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿ- ಯವರೇ ಸಾರಿಗೆ ವೃತ್ತಿ ಕೈಕೊಳ್ಳುತ್ತಾರೆ ಎಂದು ಹೇಳಲು ಬಾರದು. ಆದಾಗ್ಯೂ ಪುರುಷ ರಾಶಿಯಲ್ಲಿ ಅನೇಕ ಗ್ರಹಗಳು ಇರುವ, ಅದರಲ್ಲಿಯೂ ಚಂದ್ರ-ಮಂಗಳರು ಪುರುಷ ರಾಶಿಯಲ್ಲಿರುವವರು ಸರಕು ಸಾಮಗ್ರಿ ಗೂಡ್ಸ ಗಳ ವಾಹನಗಳ ಸಾರಿಗೆ ವೃತ್ತಿಯಲ್ಲಿಯೂ, ಚಂದ್ರನು ಸ್ತ್ರೀರಾಶಿಯಲ್ಲಿ ಹಾಗೂ ಮಂಗಳನು ಪುರುಷರಾಶಿಯಲ್ಲಿರುವರು ಪ್ರಯಾಣಿಕ ವಾಹನಗಳ ಸಾರಿಗೆ ವೃತ್ತಿಯಲ್ಲಿಯೂ ಯಶಸ್ವಿಯಾಗುತ್ತಾರೆ.

ಯೋಗಗಳು:—೧) ಲಗ್ನ-ಲಗ್ನೇಶ, ಚತುರ್ಥ – ಚತುರ್ಥೇಶರು ಬಲಾಢ್ಯರಿರುವವರು ಸಾರಿಗೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

೨) ಶನಿ – ಮಂಗಳ, ಶನಿ-ಚಂದ್ರ, ರವಿ-ಶನಿ ಇತರ ಯುತಿ ಯೋಗ ಪ್ರತಿಯೋಗ ಲಗ್ನ- ಸಪ್ತಮ, ಚತುರ್ಥ, ದಶಮ, ದ್ವಿತೀಯ- ಅಷ್ಟಮ, ಷಷ್ಠ-ವಾಯುದಲ್ಲಿದ್ದ ಜಾತಕನು ಯಾವುದೇ ಪ್ರಕಾರದ ಸಾರಿಗೆ ವೃತ್ತಿಯಲ್ಲಿ ಕೈಹಾಕಬಾರದು. ಏಕೆಂದರೆ ವಾಹನಗಳಿಗೆ ಅಪಘಾತದ ಭಯವೇ ಬಹಳ.

೩) ಲಗ್ನ - ಲಗ್ನೇಶ, ಚತುರ್ಥ - ಚತುರ್ಥೇಶ, ಚಂದ್ರ, ಶುಕ್ರ ಈ ಆರು ಅಂಶಗಳಲ್ಲಿ ಮೂರು ಅಂಶಗಳು ಬಲಾಢ್ಯವಿದ್ದ ಜಾತಕನು ಪ್ರಯಾಣಿಕರ ಸಾರಿಗೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾನೆ.

೪) ಲಗ್ನ - ಲಗ್ನೇಶ, ಚತುರ್ಥ - ಚತುರ್ಥೇಶ, ತೃತೀಯ— ತೃತೀಯೇಶ, ಬುಧ, ಮಂಗಳ, ಶನಿ ಈ ಒಂಬತ್ತು ಅಂಶಗಳಲ್ಲಿ ಈ ಐದು ಅಂಶಗಳು ಪೋಷಕವಿದ್ದ ಜಾತಕನು ಗೂಡ್ಸ ಸಾಮಗ್ರಿಗಳ ವಾಹಕಗಳ ಸಾರಿಗೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾನೆ.

೫) ಪುರುಷ ರಾಶಿಯಲ್ಲಿ ಅನೇಕ ಗ್ರಹಗಳು ಬಲಾಢ್ಯವಿದ್ದ ಜಾತ- ಕರು ಸರಕು-ಸಾಮಗ್ರಿ-ಗೂಡ್ಸಗಳ ಸಾರಿಗೆ ವೃತ್ತಿಯಲ್ಲಿಯಶಸ್ವಿಯಾಗುತ್ತಾರೆ.

೬) ಚಂದ್ರನು ಬಲಾಢ್ಯನಿದ್ದ ಸ್ತ್ರೀ ರಾಶಿಯವರು, ಹಾಗೂ ಶುಕ್ರನು ಉಚ್ಚ ಇಲ್ಲವೆ ಸ್ವಕ್ಷೇತ್ರಿ ಇರುವ ಜಾತಕರು ಪ್ರಯಾಣಿಕ ವಾಹಕ ಗಳ ಸಾರಿಗೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

೭) ಯಾವುದೇ ಪ್ರಕಾರದ ಯಾವುದೇ ವಾಹಕದ ವೃತ್ತಿಯನ್ನು ಸ್ವತಃ ಕೈಕೊಳ್ಳುವವರಿಗೆ ಅನೇಕ ಗ್ರಹಗಳು ಚರರಾಶಿಯಲ್ಲಿಯೂ ತೃತೀಯ, ಲಗ್ನ, ಸಪ್ತಮ, ಭಾಗ್ಯ ಸ್ಥಾನಗಳಲ್ಲಿಯೂ ಹೆಚ್ಚಾಗಿರಬೇಕಾತ್ತದೆ.

೮) ವಾಹನಗಳ ಮೂಲಕರಾಗಿ ನೌಕರರಿಂದ ಸಾರಿಗೆ ವೃತ್ತಿ ಕೈ- ಕೊಳ್ಳುವವರಿಗೆ ಲಗ್ನ ಚತುರ್ಥ ಸ್ಥಾನಗಳು ಆ ಸ್ಥಾನಾಧೀಶರು ಬಲಾಢ್ಯ ರಿದ್ದು ಮಂಗಳ-ಶುಕ್ರ-ಚಂದ್ರರಲ್ಲಿ ಯಾರಿಬ್ಬರು ಬಲಾಢ್ಯರಿರಬೇಕು.

೯) ಚಂದ್ರನು ಜಲರಾಶಿಯಲ್ಲಿರುವವರು ನಾವೆ, ಹಡಗು, ದೋಣಿ ಮೊದಲ ದ ನೀರಿನ ವಾಹನಗಳ ಸಾರಿಗೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.



# ಉದ್ಯಮ ( ಕೈಗಾರಿಕೆ ) ವೃತ್ತಿ

ಇಂದಿನದು ಕೈಗಾರಿಕೆ ಪ್ರಧಾನವಾದ ಯುಗ. ಕೃಷಿಯು ಭಾರತೀಯರ ಜೀವನಾಡಿಯಾದರೂ ಅದು ಕೇವಲ ಋತುಕಾಲದ ವೃತ್ತಿಯಾಗಿದೆ. ರೈತರಿಗೆ ವರುಷದಲ್ಲಿ ಅನೇಕ ತಿಂಗಳು ಕೆಲಸವೇ ಇರುವುದಿಲ್ಲ. ೧೯೫೧ ರ ಕೃಷಿಕಸಬುದಾರರ ಪರಿಶೀಲನಾ ವರದಿಯ ಪ್ರಕಾರ ರೈತರು ವರುಷದಲ್ಲಿ ೧೮೯ ದಿನಗಳನ್ನು ಮಾತ್ರ ಕೃಷಿ ಸಂಬಂಧಿಸಿದ ಕೆಲಸಗಳಿಗಾಗಿ, ೬೯ ದಿನಗಳನ್ನು ಹಬ್ಬ-ಜಾತ್ರೆ-ಮದುವೆ ಮೊದಲಾದ ಕೃಷಿಯೇತರ ಸಮಾರಂಭಗಳಿಗಾಗಿ ವಿನಿಯೋಗಿಸುತ್ತಾರೆ. ಉಳಿದ ದಿನಗಳನ್ನು ನಿಷ್ಪ್ರಯೋಜಕವಾಗಿ ಕಾಲಹರಣ ಮಾಡುತ್ತಾರೆ. ಈ ಬಗೆಯ ವೃಥಾ ಕಾಲವ್ಯಯ ಭದ್ರ ಭವಿಷ್ಯಕ್ಕೆ ಆತಂಕಕಾರಿ. ಆದ್ದರಿಂದ ಜನರು ವಿರಾಮ ಕಾಲದ ಸದುಪಯೋಗ ಮಾಡಿಕೊಳ್ಳಬೇಕು. ಅದಕ್ಕೆ ತಕ್ಕಂತೆ ಕೈಗಾರಿಕೆಗಳನ್ನು ಸ್ಥಾಪಿಸುವುದು ಉಚಿತವು.

ಜಪಾನ, ಜರ್ಮನಿ, ಅಮೇರಿಕಾ, ರಶಿಯಾ ಮೊದಲಾದ ರಾಷ್ಟ್ರಗಳು ಈ ಬಗೆಯ ಕ್ರಮವನ್ನು ಕೈಕೊಂಡಿರುವುದರಿಂದಲೇ ಇತರ ರಾಷ್ಟ್ರಗಳಿಗಿಂತ ಬಲಿಷ್ಠ ರಾಷ್ಟ್ರಗಳಾಗಿ ಬೆಳೆದಿವೆ. ಇದಲ್ಲದೆ ಕೈಗಾರಿಕೆಯು ರಾಷ್ಟ್ರದ ಆರ್ಥಿಕ ಕ್ಷೇತ್ರದ ಪ್ರಮುಖ ಉದ್ಯಮವಾಗಿದೆ, ಆರ್ಥಿಕ ವ್ಯವಸ್ಥೆಯ ಮುಖ್ಯ ಮೂಲಾಧಾರವಾಗಿದೆ. ಯಾವುದೊಂದು ರಾಷ್ಟ್ರವು ತನ್ನ ಸ್ವಾತಂತ್ರ್ಯವನ್ನು ಉಳಿಸಿಕೊಂಡು ಅಂತಾರಾಷ್ಟ್ರೀಯ ಮಟ್ಟದಲ್ಲಿ ತಲೆಯೆತ್ತಿಕೊಂಡು ನಿಲ್ಲಬೇಕಾದರ ಕೈಗಾರಿಕಾಕರಣವನ್ನು ಬಿಟ್ಟರೆ ಬೇರೆ ಮಾರ್ಗವೇ ಇಲ್ಲಾ.

ದೇಶಕ್ಕೆ ಸ್ವಾತಂತ್ರ್ಯ ಬಂದ ನಂತರ ಈ ಸತ್ಯದ ಅರಿವು ನಮ್ಮ ದೇಶಕ್ಕೂ ಆಗಿರುವುದು ಶುಭ ಸಂಗತಿಯೇ ಸರಿ. ಕೈಗಾರಿಕಾಕರಣದಿಂದ ನಿರುದ್ಯೋಗ ಸಮಸ್ಯೆಗೂ ಕೆಲಮಟ್ಟಿಗೆ ಪರಿಹಾರ ಲಭಿಸುತ್ತಿದೆ; ಅಂತೆಯೇ ದೇಶದ ಮೂಲೆಮೂಲೆಗಳಲ್ಲಿ ಕೈಗಾರಿಕಾ ಚಟುವಟಿಕೆಗಳು ತ್ವರಿತಗತಿ-ಯಿಂದ ನಡೆಯುತ್ತಿವೆ.

ಗಿರಿಣಿ-ಕಾರಖಾನೆ ಮೊದಲಾದ ಕೈಗಾರಿಕೆಗಳನ್ನು ಕೈಕೊಳ್ಳುವವರಿಗೆ ಕೇಂದ್ರ ಹಾಗೂ ರಾಜ್ಯ ಸರಕಾರಗಳು ಎಲ್ಲ ರೀತಿಯಿಂದ ಪ್ರೋತ್ಸಾಹಿಸು-ತ್ತಿವೆ. ಅಂದರೆ ಶೆಡ್ (ಕೊಟ್ಟಿಗೆ) ಗಳನ್ನು ಕಟ್ಟಲು ಸಾಲವನ್ನು ಸುಲಭ ಬಡ್ಡಿದರಗಳಲ್ಲಿ ಹಾಗು ಸುಲಭ ಕಂತುಗಳಲ್ಲಿ ಮರು ಪಾವತಿ ಮಾಡಲು ಸಹಾಯಧನ (ಸಬ್‌ಸಿಡಿ) ದೊಂದಿಗೆ ಬ್ಯಾಂಕ ಮೊದಲಾದ ಸಂಸ್ಥೆ ಗಳಿಂದ ಸಹಾಯವನ್ನು ಕೆಲವಡೆ ಕಚ್ಚಾ ಸಾಮಾಗ್ರಿಗಳ ರೂಪದಿಂದಲೂ ಒದಗಿಸುವುದಲ್ಲದೆ ರಿಯಾಯತಿ ದರಗಳಲ್ಲಿ ವಿದ್ಯುಶ್‌ಶಕ್ತಿಯನ್ನೂ ಪುರೈಸು-ತ್ತಾರೆ, ತಾಂತ್ರಿಕ ನೆರವನ್ನೂ ಕೊಡುತ್ತಾರೆ. ಇಷ್ಟೆಲ್ಲ ಸಹಾಯ ಸಹ ಕಾರವನ್ನು ಸರಕಾರ ಒದಗಿಸಿದರೂ ಹೊಸದಾಗಿ ಸ್ಥಾಪಿತವಾಗುವ ಬಹಳಷ್ಟು ಕೈಗಾರಿಕೆಗಳು ಪ್ರಗತಿಯ ಮೆಟ್ಟಲನ್ನೇರದೆ, ಸೋತು ಸೊರಗಿ ಹೋಗು ವುದೇ ಹೆಚ್ಚಾಗಿದೆ. ಕೆಲ ಕೈಗಾರಿಕೆಗಳಂ ಪ್ರಥಮ ಹಂತದಲ್ಲಿಯೇ ಮುಗ್ಗರಿಸಿ ಹೋದ ನೂರಾರು ಉದಾಹರಣೆಗಳಿವೆ. ಹೀಗಾಗಲು ಕಾರಣವೇನು ?

ಸರಕಾರದ ಹಾಗೂ ಉದ್ಯಮ ತಜ್ಞರ ಕಾರಣಗಳು ಹಲವಾರು. ಆದರೆ ಫಲಜ್ಯೋತಿಷ್ಯದ ಪ್ರಕಾರ ಉದ್ಯಮ ವ್ಯಕ್ತಿಯ ಕಾರಕ ಗ್ರಹ ಲಗ್ನ ಸ್ಥಾನ ರಾಶ್ಯಾದಿಗಳು ಯಾವವು ಎಂಬುದನ್ನು ತಿಳಿಯಬೇಕು. ಮೊದಲು ಒಂದು ಮಹತ್ವದ ವಿಷಯವನ್ನು ನೆನಪಿನಲ್ಲಿಟ್ಟುಕೊಳ್ಳಬೇಕು. ಎಲ್ಲ ವ್ಯಕ್ತಿ ಗಳು ಎಲ್ಲ ವೃತ್ತಿಯಲ್ಲಿ ಯಶಸ್ಸು ಪಡೆಯಲಾರರು. ನಿರ್ದಿಷ್ಟವಾದ ಗ್ರಹಯೋಗಗಳಿಲ್ಲದ ಯಾರೂ ಉದ್ಯಮದಾರರಾಗಲಾರು; ಹಾಗೂ ಉದ್ಯಮ ವೃತ್ತಿಯಲ್ಲಿ ಯಶಸ್ಸುಗಳಿಸಲಾರರು.

ಉದ್ಯಮಾವೃತ್ತಿಯ ಕಾರಕಗ್ರಹ ಯಾವುದೆಂಬುದನ್ನು ತಿಳಿಯುವ ಮೊದಲು ಉದ್ಯಮದಲ್ಲಿಯ ಪ್ರಕಾರಗಳನ್ನು ತಿಳಿಯುವುದು ಅವಶ್ಯ. ಏಕೆಂದರೆ ಉದ್ಯಮಗಳಲ್ಲಿ ವಿವಿಧ ಉದ್ಯಮಗಳು ವಿವಿಧ ರೀತಿಯವಿವೆ. ಒಂದು ಉದ್ಯಮದಲ್ಲಿ ಯಶಸ್ವಿಯಾಗಬಲ್ಲ ಜಾತಕನು ಇನ್ನೊಂದು ಉದ್ಯಮದಲ್ಲಿ ಯಶಸ್ವಿಯಾಗಲಾರ; ಇದಲ್ಲದೆ ಇಂದು ಉದ್ಯಮ ವೃತ್ತಿಯು ಕ್ಲಿಷ್ಟವೂ ವಿಸ್ತಾರವೂ ಆಗಿರುವುದರಿಂದ ಅನೇಕ ಗ್ರಹಗಳು ಕಾರಕವಿರುತ್ತವೆ. ಅಲ್ಲದೆ ವಿಭಿನ್ನ ಪ್ರಕಾರದ ಉದ್ಯಮಗಳಿಗೆ ವಿಭಿನ್ನ ಗ್ರಹಗಳು ಕಾರಕವಿರುತ್ತವೆ. ಆದ್ದರಿಂದ ಮೊದಲು ಉದ್ಯಮದಲ್ಲಿಯ ಪ್ರಕಾರಗಳನ್ನು ತಿಳಿಯುವಾ:

**ಉದ್ಯಮಗಳಲ್ಲಿಯ ಪ್ರಕಾರಗಳು :—**

ಉದ್ಯಮಗಳನ್ನು ಎರಡು ರೀತಿಯಿಂದ ವರ್ಗೀಕರಿಸಬಹುದು. ದೊಡ್ಡ ಕೈಗಾರಿಕೆ ( ಬೃಹತ್ ಉದ್ಯಮ ), ಮಧ್ಯಮ ಕೈಗಾರಿಕೆ, ಸಣ್ಣ ಕೈಗಾರಿಕೆ, ಗೃಹಕೈಗಾರಿಕೆ-ಗುಡಿಕೈಗಾರಿಕೆ ಹೀಗೆ ಒಂದು ಬಗೆಯ ವರ್ಗೀಕರಣವಾದರೆ, ಜವಳೀ ಉದ್ದಿಮೆ, ಯಂತ್ರಗಳ ಉತ್ಪಾದನೆಯ ಉದ್ಯಮ, ಇಲೆಕ್ಟ್ರಿಕಲ್ ವಸ್ತುಗಳ ಉತ್ಪಾದನೆ, ವಾಹನಗಳ ಉತ್ಪಾದನೆ, ಉದ್ಯಮ ಇಲೆಕ್ಟ್ರಿಕಲ್ ಮೋಟಾರಗಳ ಉತ್ಪಾದನಾ ಉದ್ಯಮ, ಕಟ್ಟಿಗೆ ವಸ್ತುಗಳ ಉತ್ಪಾದನೆ, ಕಬ್ಬಿಣ-ಉಕ್ಕು ವಸ್ತುಗಳ ಉತ್ಪಾದನೆ, ಹೋಟೆಲ ಉದ್ಯಮ, ಚಲನ ಚಿತ್ರ ಉದ್ಯಮ, ಮುದ್ರಣ ಉದ್ಯಮ ಇಂಥ ಈ ವರ್ಗಗಳ ಉದಾಹರಣೆಗಳಿಗೆ ಕೊನೆಯೇ ಇಲ್ಲಾ. ಸೌಂದರ್ಯ ವರ್ಧಕ— ಅಲಂಕಾರಕ) ಕಾಸ್ಮೆಟಿಕ್ ಉತ್ಪಾದನೆಯೂ ಒಂದು ಉದ್ಯಮವೇ ಆಗಿದೆ. ಇಂದೊಂದೆ ವಿಷಯದ ಮೇಲೆ ಸ್ವತಂತ್ರವಾದ ಗ್ರಂಥ ಬರೆಯಬಹುದಾರ ಮಟ್ಟಿಗೆ ಇದರ ವ್ಯಾಪ್ತಿ ಇದೆ ಪ್ರಸ್ತುತ ಈ ವಿಷಯಕ್ಕೆ ಈ ಪ್ರಕರಣಕ್ಕೆ ಬೇಕಾಗುವ ವಿಚಾರಗಳನ್ನು ಮಾತ್ರ ಇಲ್ಲಿ ಕೊಡಲಾಗಿದೆ. ಈಗಾಗಲೇ ಬರೆಯಲಿರುವ ಆಶ್ವಾಸನವಿತ್ತು ಪ್ರಕಟಿಸಿದ ಮೇಲಿನ ಗ್ರಂಥಗಳು ಪ್ರಕಟವಾದ ಬಳಿಕ " ಉದ್ಯಮ ಜ್ಯೋತಿಷ್ಯ " ಎಂಬ ಗ್ರಂಥವನ್ನು ಬರೆಯುಬೇಕೆಂದಿರುವೆ.

ಬೃಹತ್ ಉದ್ದಿಮೆ ( ದೊಡ್ಡ ಕೈಗಾರಿಕೆ) ಗಳನ್ನು ಸದ್ಯಕ್ಕೆ ಸರಕಾರದವರೇ ಹೆಚ್ಚಾಗಿ ನಡೆಸುತ್ತಿರುವುದರಿಂದ, ಅವುಗಳಲ್ಲಿ ಸರಕಾರದ ನೌಕರ ವರ್ಗದವರೇ ವರಿಷ್ಠ ಅಧಿಕಾರಿಗಳಿರುವುದರಿಂದ ಇವುಗಳ ವಿವರಣೆಯನ್ನು ನಮ್ಮ ಉದ್ಯೋಗ ಜ್ಯೋತಿಷ್ಯ - ಭಾಗ ೧ " ನೌಕರಿವರ್ಗದರ್ಶನ " ದಲ್ಲಿ ನೀಡಲಾಗಿದ್ದು, ಪ್ರಸ್ತುತ ಈ ಗ್ರಂಥದಲ್ಲಿ ಮಧ್ಯಮ ಹಾಗೂ ಸಣ್ಣ ಕೈಗಾರಿಕೆ, ಗೃಹಕೈಗಾರಿಕೆ-ಗುಡಿಕೈಗಾರಿಕೆ ವೃತ್ತಿಗಳನ್ನು ಕೈಕೊಳ್ಳಲು ಅವಶ್ಯವಿರುವ ಕಾರಕ ಗ್ರಹಗಳ ವಿಷಯವಾಗಿ ಮಾತ್ರ ವಿವರಿಸಲಾಗಿದೆ.

**ಯೋಗ ಕಾರಕ ಗ್ರಹಗಳು :—** ಉದ್ಯಮ (ಕೈಗಾರಿಕೆ) ವೃತ್ತಿಗಾಗಿ ಕಾರಕ ಗ್ರಹಗಳೊಂದಿಗೆ ಯೋಗ ಕಾರಕ ಗ್ರಹಗಳ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ, ಯೋಗ ಕಾರಕ ಗ್ರಹಗಳು ಬಲಾಢ್ಯವಿರದೆ ಯಾರೂ ಯಾವುದೇ ಉದ್ಯಮ ( ಕೈಗಾರಿಕೆ ) ವೃತ್ತಿಯಲ್ಲಿ ಯಶಸ್ವಿಯಾಗರು. ಅದರಲ್ಲಿಯೂ ಮಧ್ಯಮ ಹಾಗೂ ಸಣ್ಣ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗಲು ಈ ಯೋಗಕಾರಕ ಗ್ರಹಗಳು ಬಲಾಢ್ಯರಿರಬೇಕಾಗುತ್ತದೆ. ಭಿನ್ನ ಭಿನ್ನ ಲಗ್ನಗಳಿಗೆ ಭಿನ್ನ ಭಿನ್ನ ಗ್ರಹಗಳು ಯೋಗಕಾರಕವಿದ್ದು ಅವುಗಳ ವಿವರಣೆಯನ್ನು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

೧) **ಮೇಷ ಲಗ್ನ :—** ಈ ಲಗ್ನಕ್ಕೆ ರವಿ, ಚಂದ್ರ, ಮಂಗಳ, ಗುರು, ಶನಿ, ಶುಕ್ರ ಈ ಆರು ಗ್ರಹಗಳು, ಯೋಗಕಾರಕ ಗ್ರಹಗಳು; ಅದರಲ್ಲಿಯೂ ರವಿ. ಮಂಗಳ, ಚಂದ್ರ, ಗುರುಗಳು ಬಲಾಢ್ಯರಿರದ ಯಾರೂ ಯಾವುದೇ ಪ್ರಕಾರದ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗರು. ಅದರಲ್ಲಿಯೂ ರವಿ, ಮಂಗಳ, ಗುರು, ಚಂದ್ರರು ಬಲಾಢ್ಯರಿದ್ದ ಈ ಲಗ್ನದ ಜಾತಕರು ಮಧ್ಯಮ ಹಾಗೂ ಸಣ್ಣ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾದರೆ ಚಂದ್ರ-ಶುಕ್ರರು ಬಲಾಢ್ಯರಿದ್ದ ಈ ಲಗ್ನದವರು ಗುಡಿ ಹಾಗೂ ಗೃಹ ಕೈಗಾರಿಕೆಯಲ್ಲಿ ಯಶಸ್ವಿಯಾಗುತ್ತಾರೆ. ರವಿ, ಚಂದ್ರ ಗುರು, ಶುಕ್ರರು ಬಲಾಢ್ಯರಿದ್ದ ಈ ಲಗ್ನದವರು ಪಬ್ಲಿಕ್ ಲಿಮಿಟೆಡ್

ಕಂಪನಿ, ಸಾರ್ವಜನಿಕ ಸಂಸ್ಥೆ ಹಾಗು ಪಾಲುಗಾರಿಕೆಯ ವ್ಯವಸ್ಥೆ ನಡೆಸುವ ಕೈಗಾರಿಕೆಯಲ್ಲಿ ಯಶಸ್ವಿಯಾದರೆ ಶುಕ್ರ, ಚಂದ್ರ, ಗುರು, ಶನಿಯರು ಬಲಾಢ್ಯರಿದ್ದ ಈ ಲಗ್ನ ಜಾತಕರು ಸಹಕಾರಿ ಸಂಸ್ಥೆ ಇಲ್ಲವೆ ಸೊಸಾ-ಯಿಟಿ ಪತಿಯಿಂದ ನಡೆಯುತ್ತಿರುವ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿ ಯಾಗುತ್ತಾರೆ. ಇದರಂತೆ ರವಿ, ಮಂಗಳ, ಚಂದ್ರ, ಗುರುಗಳು ಬಲಾಢ್ಯ ರಿದ್ದ ಈ ಜಾತಕರು ಸ್ವತಂತ್ರ ಏಕಸ್ವಾಮ್ಯದ ವ್ಯಕ್ತಿಗತ ಇಲ್ಲವೆ ಪ್ರಾಯವೇಟ ಲಿಮಿಟೆಡ್ ಕೈಗಾರಿಕೆಯಲ್ಲಿ ಯಶಸ್ವಿಯಾಗುತ್ತಾರೆ.

೨) **ವೃಷಭ ಲಗ್ನ:—** ಈ ಲಗ್ನಕ್ಕೆ ಶನಿ, ಶುಕ್ರ, ರವಿ, ಬುಧ ಈ ನಾಲ್ಕು ಗ್ರಹಗಳು ಯೋಗಕಾರಕ ಗ್ರಹಗಳು. ಈ ನಾಲ್ಕು ಗ್ರಹ ಗಳು ಬಲಾಢ್ಯರಿದ್ದ ಜಾತಕರು ಯಾವುದೇ ಪ್ರಕಾರದ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ. ಅದರಲ್ಲಿಯೂ ಶನಿ, ಶುಕ್ರ, ರವಿ, ಬುಧ ಈ ಈ ನಾಲ್ಕು ಗ್ರಹಗಳು ಬಲಾಢ್ಯರಿದ್ದ ಜಾತಕರು ಮಧ್ಯಮ ಹಾಗೂ ಸಣ್ಣ ಕೈಗಾರಿಕೆಯ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ. ಇದರಂತೆ ಚಂದ್ರ, ಶುಕ್ರ, ಶನಿ ಈ ಮೂರೂ ಗ್ರಹಗಳು ಬಲಾಢ್ಯರಿದ್ದ ಈ ಲಗ್ನದವರು ಗೃಹ ಕೈಗಾರಿಕೆ, ಗುಡಿ ಕೈಗಾರಿಕೆ ವೃತ್ತಿಯಲ್ಲಿಯೂ ಸಹಕಾರಿ ಸಂಸ್ಥೆ, ಸೊಸಾಯಿಟಿ ಪತಿಯಿಂದ ನಡೆಯುತ್ತಿರುವ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿ ಯಾಗುತ್ತಾರೆ. ಇದರಂತೆ ರವಿ, ಬುಧ, ಶುಕ್ರ, ಶನಿಯರು ಬಲಾಢ್ಯರಿದ್ದ ಈ ಲಗ್ನದವರು ಸಾರ್ವಜನಿಕ ಸಂಸ್ಥೆಯು, ಪಾಲುಗಾರಿಕೆ ವ್ಯವಸ್ಥೆಯು ಸಹ-ಕಾರಿ ಸಂಸ್ಥೆಯು, ವ್ಯಕ್ತಿಗತ, ಏಕಸ್ವಾಮ್ಯದ ಅರ್ಥಾತ್ ಖಾಸಗಿ ಲಿಮಿಟೆಡ್ ( ಪ್ರಾಯವೇಟ ಲಿಮಿಟೆಡ್ ) ಗಳಲ್ಲಿ ಯಶಸ್ವಿಯಾಗುತ್ತಾರೆ. ಈ ಲಗ್ನ ದವರು ಗಮನಿಸತಕ್ಕ ಮುಖ್ಯ ಹಾಗೂ ಮಹತ್ವದ ಅಂಶವೆಂದರೆ ಶನಿಯು ಬಲಾಢ್ಯನಿರದೆ ಯಾವುದೇ ಪ್ರಕಾರದ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗರು. ಇನ್ನೊಂದು ಮಹತ್ವದ ಸಂಗತಿಯೆಂದರೆ:— ರವಿಯು ಬಲಾಢ್ಯನಿದ್ದರೆ ಮಾತ್ರ ಈ ಲಗ್ನದವರು ಪಾಲುಗಾರಿಕೆ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ. ಇದರಂತೆ ಈ ಲಗ್ನದವರು ಶನಿ-ಶುಕ್ರರು ಬಲಾಢ್ಯರಿದ್ದರೆ ಮಾತ್ರ ಗೃಹ ಕೈಗಾರಿಕೆ ಹಾಗೂ ಗುಡಿ

ಕೈಗಾರಿಕೆಯಲ್ಲಿ ಯಶಸ್ವಿಯಾಗುತ್ತಾರೆ.

೩) **ಮಿಥುನ ಲಗ್ನ** :— ಈ ಲಗ್ನಕ್ಕೆ ಬುಧ, ಗುರು, ಶುಕ್ರ, ಶನಿ ಇವು ಕಾರಕಗ್ರಹಗಳು. ಈ ನಾಲ್ಕು ಗ್ರಹಗಳು ಬಲಾಢ್ಯರಿದ್ದರೆ ಈ ಲಗ್ನದವರು ಯಾವುದೇ ಪ್ರಕಾರದ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ. ಅದರಲ್ಲಿಯೂ ಬುಧ, ಗುರು, ಶುಕ್ರ, ಶನಿ ಈ ಗ್ರಹಗಳು ಬಲಾಢ್ಯರಿದ್ದರೆ ಮಾತ್ರ ಈ ಲಗ್ನದವರು ಮಾಧ್ಯಮ ಹಾಗೂ ಸಣ್ಣ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ. ಇದರಂತೆ ಬುಧ, ಶುಕ್ರ, ಶನಿ ಇಲ್ಲವೆ ಗುರು-ಶುಕ್ರ- ಶನಿಯರು ಬಲಾಢ್ಯರಿದ್ದರೆ ಈ ಲಗ್ನದವರು ಗೃಹ ಹಾಗೂ ಗುಡಿ ಕೈಗಾರಿಕೆಯಲ್ಲಿ ಯಶಸ್ವಿಯಾಗುತ್ತಾರೆ. ಬುಧ-ಗುರು-ಶುಕ್ರ-ಶನಿ ಈ ನಾಲ್ಕು ಗ್ರಹಗಳು ಬಲಾಢ್ಯರಿದ್ದರೆ ಮಾತ್ರ ಈ ಲಗ್ನದವರು ಪ್ರಾಯವೇಟ ಲಿಮಿಟೆಡ್, ಪಬ್ಲಿಕ್ ಲಿಮಿಟೆಡ್, ಸಾರ್ವಜನಿಕ ಸಂಸ್ಥೆಯ, ಪಾಲುಗಾರಿಕೆ ವ್ಯವಸಾಯ, ಏಕಸ್ವಾಮ್ಯದ ಕೈಗಾರಿಕೆಯಲ್ಲಿ ಯಶಸ್ವಿಯಾಗಬಲ್ಲರು. ಇದರಂತೆ ಬುಧ-ಶನಿಯರು ಬಲಾಢ್ಯರಿದ್ದ ಈ ಲಗ್ನದವರು ಸಹಕಾರಿ ಸಂಸ್ಥೆ ಇಲ್ಲವೆ ಸೋಸಾಯಿಟಿ ವತಿಯಿಂದ ನಡೆಸುತ್ತಿರುವ ಕೈಗಾರಿಕೆಯಲ್ಲಿ ಯಶಸ್ವಿಯಾಗುತ್ತಾರೆ. ಈ ಲಗ್ನದವರು ಗಮನಿಸತಕ್ಕ ಮಹತ್ವದ ಅಂಶವೆಂದರೆ ಬುಧ-ಗುರುಗಳು ಬಲಾಢ್ಯರಿದ್ದರೆ ಮಾತ್ರ ಯಾವುದೇ ಪ್ರಕಾರದ ಕೈಗಾರಿಕ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ. ಬುಧ-ಗುರುಗಳು ದುರ್ಬಲರಿರುವ ಈ ಲಗ್ನದವರು ಯಾವುದೇ ಪ್ರಕಾರದ ಕೈಗಾರಿಕಾ ವೃತ್ತಿಯಲ್ಲಿ ಕೈಹಾಕಬಾರದು.

೪) **ಕರ್ಕ ಲಗ್ನ** :— ಈ ಲಗ್ನಕ್ಕೆ ಮಂಗಳ, ಚಂದ್ರ, ಗುರು, ಶುಕ್ರ ಈ ನಾಲ್ಕು ಗ್ರಹಗಳು, ಯೋಗ ಕಾರಕಗ್ರಹಗಳು, ಅದರಲ್ಲಿಯೂ ಮಂಗಳ, ಶುಕ್ರ, ಚಂದ್ರರು ಈ ಮೂರು ಗ್ರಹಗಳು ಬಲಾಢ್ಯರಿದ್ದ ಈ ಲಗ್ನದವರು ಯಾವುದೇ ಪ್ರಕಾರದ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ. ಮಂಗಳ, ಶುಕ್ರ, ಚಂದ್ರರು ಬಲಾಢ್ಯರಿದ್ದರೆ ಮಾತ್ರ ಈ ಲಗ್ನದವರು ಮಧ್ಯಮ ಹಾಗೂ ಸಣ್ಣ ಕೈಗಾರಿಕೆಯಲ್ಲಿ ಯಶಸ್ವಿಯಾಗಬಲ್ಲರು. ಇದರಂತೆ ಮಂಗಳ-ಚಂದ್ರ ಇಲ್ಲವೆ ಮಂಗಳ-ಶುಕ್ರರು

ಬಲಾಢ್ಯರಿದ್ದ ಲಗ್ನದವರು ಗೃಹ ಕೈಗಾರಿಕೆಯಲ್ಲಿ ಹಾಗು ಗುಡಿಕೈಗಾರಿಕೆಯಲ್ಲಿ ತುಂಬ ಯಶಸ್ಸನ್ನು ಗಳಿಸಬಲ್ಲರು, ಮಂಗಳ, ಶುಕ್ರ, ಚಂದ್ರ, ಗುರು ಈ ನಾಲ್ಕು ಗ್ರಹಗಳು ಬಲಾಢ್ಯರಿದ್ದ ಈ ಲಗ್ನದವರು ಸಾರ್ವಜನಿಕ ಸಂಸ್ಥೆಗಳ ( ಪಬ್ಲಿಕ ಲಿಮಿಟೆಡ್ ), ಪಾಲುಗಾರಿಕೆ ವ್ಯವಸ್ಥೆಯ ಕೈಗಾರಿಕೆಯಲ್ಲಿ ಯಶಸ್ವಿಯಾಗುತ್ತಾರೆ. ಇದರಂತೆ ಮಂಗಳ – ಚಂದ್ರ, ಇಲ್ಲವೆ ಮಂಗಳ-ಶುಕ್ರರು ಬಲಾಢ್ಯರಿದ್ದ ಈ ಲಗ್ನದವರು ಏಕಸ್ವಾಮ್ಯದ ಇಲ್ಲವೆ ಪ್ರಾಯವೇಟ ಲಿಮಿಟೆಡ್ ಕೈಗಾರಿಕೆಯಲ್ಲಿ ಯಶಸ್ವಿಯಾಗುತ್ತಾರೆ. ಈ ಲಗ್ನದವರು ಸಹಕಾರಿ ಸಂಸ್ಥೆ ಇಲ್ಲವೆ ಸೊಸಾಯಿಟಿಯು ನಡೆಸುತ್ತಿರುವ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗುವದಿಲ್ಲ. ಈ ಲಗ್ನದವರು ಗಮನಿಸತಕ್ಕ ಮುಖ್ಯ ಸಂಗತಿಯೆಂದರೆ— ಮಂಗಳನು ಬಲಾಢ್ಯನಿದ್ದರೆ ಮಾತ್ರ ಯಾವುದೇ ಪ್ರಕಾರದ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ. ಮಂಗಳನು ದುರ್ಬಲನಿರುವ ಈ ಲಗ್ನದವರು ಯಾವುದೇ ಪ್ರಕಾರದ ಕೈಗಾರಿಕೆಯಲ್ಲಿ ಕೈಹಾಕಬಾರದು.

೫) ಸಿಂಹ ಲಗ್ನ :— ಈ ಲಗ್ನಕ್ಕೆ ರವಿ, ಮಂಗಳ, ಗುರು, ಶುಕ್ರ ಈ ನಾಲ್ಕು ಗ್ರಹಗಳು ಯೋಗಕಾರಕ ಗ್ರಹಗಳು. ಅದರಲ್ಲಿಯೂ ಮಂಗಳ, ರವಿ, ಗುರುಗಳು ಹೆಚ್ಚು ಯೋಗಕಾರಕರು. ಆದ್ದರಿಂದ ಈ ಲಗ್ನದವರು ಈ ಮೂರು ಗ್ರಹಗಳು ಬಲಾಢ್ಯವಿದ್ದರೆ ಯಾವುದೇ ಪ್ರಕಾರದ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ. ಮಂಗಳ–ರವಿ–ಗುರು–ಶುಕ್ರ ಈ ನಾಲ್ಕು ಗ್ರಹಗಳು ಬಲಾಢ್ಯರಿದ್ದ ಈ ಲಗ್ನದವರು ಮಧ್ಯಮ ಹಾಗೂ ಸಣ್ಣ ಕೈಗಾರಿಕೆಯಲ್ಲಿ ಯಶಸ್ವಿಯಾಗುತ್ತಾರೆ. ಇದರಂತೆ ಮಂಗಳ, ರವಿ, ಗುರು ಈ ಮೂರು ಗ್ರಹಗಳು ಬಲಾಢ್ಯರಿದ್ದ ಈ ಲಗ್ನದವರು ಗೃಹ ಕೈಗಾರಿಕೆಯಲ್ಲಿ ಯಶಸ್ವಿಯಾಗುತ್ತಾರೆ. ಈ ಲಗ್ನದವರು ಗುಡಿ ಕೈಗಾರಿಕೆಯಲ್ಲಿ ಯಶಸ್ವಿಯಾಗುವುದು ಕಡಿಮೆ. ಮಂಗಳ-ಶುಕ್ರ, ರವಿ–ಶುಕ್ರ, ಗುರು-ಶುಕ್ರ ಈ ಯಾವುದೇ ಎರಡು ಜೋಡಿಗಳು ಬಲಾಢ್ಯರಿದ್ದರೆ ಮಾತ್ರ ಗುಡಿ ಕೈಗಾರಿಕೆಯಲ್ಲಿ ತುಸು ಯಶಸ್ವಿಯಾಗಬಲ್ಲರು. ಇದರಂತೆ ಮಂಗಳ, ರವಿ, ಗುರುಗಳು ಬಲಾಢ್ಯರಿದ್ದ ಈ ಲಗ್ನದವರು ಸಾರ್ವಜನಿಕ ಸಂಸ್ಥೆಗಳ ( ಪಬ್ಲಿಕ್ ಲಿಮಿಟೆಡ್) ಹಾಗೂ ಪಾಲುಗಾರಿಕೆಯ

ವ್ಯವಸ್ಥೆಯ ಕೈಗಾರಿಕೆಯಲ್ಲಿ ಯಶಸ್ವಿಯಾಗುತ್ತಾರೆ. ಇದರಂತೆ ಮಂಗಳ-ಶುಕ್ರ, ಗುರು-ಶುಕ್ರ, ರವಿ-ಶುಕ್ರ ಯಾವುದೇ ಎರಡು ಗ್ರಹಗಳು ಬಲಾಢ್ಯರಿದ್ದ ಈ ಲಗ್ನದವರು ಪ್ರಾಯವೇಟ ಲಿಮಿಟೆಡ್ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ. ಇದರಂತೆ ಮಂಗಳ-ರವಿ, ಇಲ್ಲವೆ ಮಂಗಳ-ಗುರು ಈ ಎರಡು ಗ್ರಹಗಳು ಬಲಾಢ್ಯರಿದ್ದ ಈ ಲಗ್ನದವರು ಏಕಸ್ವಾಮ್ಯದ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ. ಈ ಲಗ್ನದವರು ಗಮನಿಸತಕ್ಕ ಮುಖ್ಯ ಸಂಗತಿ ಎಂದರೆ :— ಮಂಗಳ-ರವಿಯವರು ಬಲಾಢ್ಯರಿದ್ದರೆ ಮಾತ್ರ ಯಾವುದೇ ಪ್ರಕಾರದ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ. ರವಿ, ಮಂಗಳ ದುರ್ಬಲವಿರುವ ಈ ಲಗ್ನದವರು ಯಾವುದೇ ಪ್ರಕಾರದ ಕೈಗಾರಿಕೆ ವೃತ್ತಿಗೆ ಕೈಹಾಕಬಾರದು.

೬) ಕನ್ಯಾ ಲಗ್ನ:— ಈ ಲಗ್ನಕ್ಕೆ ಬುಧ, ಗುರು, ಶುಕ್ರ ಶನಿ ಈ ನಾಲ್ಕು ಗ್ರಹಗಳು ಯೋಗಕಾರಕ ಗ್ರಹಗಳು. ಈ ನಾಲ್ಕು ಗ್ರಹಗಳು ಬಲಾಢ್ಯರಿದ್ದವರು ಯಾವುದೇ ಪ್ರಕಾರದ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ, ಅದರಲ್ಲಿಯೂ ಬುಧ-ಗುರುಗಳು ಬಲಾಢ್ಯರಿರಲೇಬೇಕು. ಇದೇ ಪ್ರಕಾರ ಬುಧ - ಗುರು - ಶುಕ್ರ, ಇಲ್ಲವೆ ಬುಧ-ಗುರು-ಶನಿ ಈ ಗ್ರಹಗಳು ಬಲಾಢ್ಯರಿದ್ದ ಈ ಲಗ್ನದವರು ಸಾರ್ವಜನಿಕ ಸಂಘಗಳ ಪಬ್ಲಿಕ್ ಲಿಮಿಟೆಡ್ ಹಾಗೂ ಪಾಲುಗಾರಿಕೆ ವ್ಯವಸ್ಥೆಯ ಕೈಗಾರಿಕೆಯಲ್ಲಿ ಪ್ರಾಯವೆಟ್ ಲಿಮಿಟೆಡ್ ಹಾಗೂ ಏಕಸಾಮ್ಯದ ಕೈಗಾರಿಕೆ ವೃತ್ತಿಯಲ್ಲಿಯೂ ಯಶಸ್ವಿಯಾಗುತ್ತಾರೆ. ಇದರಂತೆ ಬುಧ, ಗುರು, ಶುಕ್ರ, ಶನಿ, ಈ ನಾಲ್ಕು ಗ್ರಹಗಳು ಬಲಾಢ್ಯರಿದ್ದ ಈ ಲಗ್ನದವರು ಮಧ್ಯಮ ಹಾಗು ಸಣ್ಣ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ. ಇದರಂತೆ ಬುಧ-ಶುಕ್ರ-ಶನಿ ಇಲ್ಲವೆ ಗುರು-ಶುಕ್ರ-ಶನಿ ಈ ಮೂರು ಗ್ರಹಗಳು ಬಲಾಢ್ಯರಿದ್ದ ಈ ಲಗ್ನದವರು ಗೃಹ ಹಾಗೂ ಗುಡಿ ಕೈಗಾರಿಕೆ ವೃತ್ತಿಯಲ್ಲಿ ಸಹಕಾರಿ ಸಂಸ್ಥೆ ಇಲ್ಲವೆ ಸೊಸಾಯಿಟಿಯವರು ನಡೆಸುತ್ತಿರುವ ಕೈಗಾರಿಕೆಯಲ್ಲಿ ಯಶಸ್ವಿಯಾಗುತ್ತಾರೆ. ಒಂದು ಮಹತ್ವದ ಸಂಗತಿಯಂದರೆ — ಬುಧ-ಗುರುಗಳು ಬಲಾಢ್ಯರಿದ್ದರೆ ಮಾತ್ರ ಈ ಲಗ್ನದವರು ಯಾವುದೇ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ. ಬುಧ,

ಗುರುಗಳು ದುರ್ಬಲರಿರುವ ಈ ಲಗ್ನದವರು ಯಾವುದೆ ಪ್ರಕಾರದ ಕೈಗಾರಿಕೆ ವೃತ್ತಿಗೆ ಕೈಹಾಕಬಾರದು.

೭) ತುಲಾ ಲಗ್ನ :— ಈ ಲಗ್ನಕ್ಕೆ ಶನಿ-ಶುಕ್ರ, ಚಂದ್ರ-ಬುಧ-ಮಂಗಳರು ಯೋಗಕಾರಕ ಗ್ರಹಗಳಿದ್ದರೂ ಶನಿ, ಶುಕ್ರ, ಚಂದ್ರರ ಈ ಮೂರೂ ಗ್ರಹಗಳೇ ಹೆಚ್ಚು ಯೋಗಕಾರಕರು. ಶನಿ-ಶುಕ್ರ-ಚಂದ್ರರು ಬಲಾಢ್ಯರಿದ್ದ ಈ ಲಗ್ನದವರು ಯಾವುದೇ ಪ್ರಕಾರದ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ. ಅದರಲ್ಲಿಯೂ ಗೃಹ ಹಾಗೂ ಗುಡಿ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ. ಇದರಂತೆ ಶನಿ-ಶುಕ್ರ-ಚಂದ್ರರು ಬಲಾಢ್ಯರಿದ್ದ ಜಾತಕರು ಸಹಕಾರಿ ಸಂಸ್ಥೆಗಳು ಸೊಸಾಯಿಟಿಗಳು ನಡೆಸುತ್ತಿರುವ ಕೈಗಾರಿಕೆ ವೃತ್ತಿಯಲ್ಲಿ ಸೇರುತ್ತಾರೆ. ಶನಿ-ಶುಕ್ರ-ಚಂದ್ರರ ಸಂಗಡ ಬುಧ-ಮಂಗಳರು ಬಲಾಢ್ಯರಿದ್ದ ಈ ಲಗ್ನದವರು ಮಧ್ಯಮ ಹಾಗೂ ಸಣ್ಣ ಕೈಗಾರಿಕೆಯ ವೃತ್ತಿಯಲ್ಲಿಯೂ ಸಾರ್ವಜನಿಕ ಸಂಸ್ಥೆಯ ( ಪಬ್ಲಿಕ್ ಲಿಮಿಟೆಡ್ ಹಾಗೂ ಪ್ರಾಯವೇಟ ಲಿಮಿಟೆಡ್) ಸಂಸ್ಥೆಯ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ. ಆದರೆ ಶನಿ-ಶುಕ್ರ-ಚಂದ್ರರು ಮಾತ್ರ ಬಲಾಢ್ಯರಿದ್ದರೆ ಈ ಲಗ್ನದವರು ಏಕಸ್ವಾಮ್ಯ ಕೈಗಾರಿಕೆ ವೃತ್ತಿಯಲ್ಲಿ ಯಶಸ್ಸು ಗಳಿಸುತ್ತಾರೆ. ಈ ಲಗ್ನದವರು ಗಮನಿಸತಕ್ಕ ಮಹತ್ವದ ಸಂಗತಿಯೆಂದರೆ ಶನಿ-ಶುಕ್ರ-ಚಂದ್ರರು ಅದರಲ್ಲಿಯೂ ಶನಿಯು ಬಲಾಢ್ಯನಿರದೆ ಯಾರೂ ಯಾವುದೆ ಪ್ರಕಾರದ ಕೈಗಾರಿಕೆ ವೃತ್ತಿಯಲ್ಲಿ ಯಶಸ್ಸು ಗಳಿಸಲಾರರು. ತುಲಾ ಲಗ್ನದವರು ಶನಿ ದುರ್ಬಲನಿದ್ದರೆ ಯಾವುದೇ ಪ್ರಕಾರದ ಕೈಗಾರಿಕೆ ವೃತ್ತಿಗೆ ಕೈಹಾಕಬಾರದು.

೮) ವೃಶ್ಚಿಕ ಲಗ್ನ :— ಈ ಲಗ್ನಕ್ಕೆ ರವಿ, ಚಂದ್ರ, ಗುರು, ಮಂಗಳ, ಶುಕ್ರ, ಶನಿ, ಈ ಆರು ಗ್ರಹಗಳು ಯೋಗಕಾರಕ ಗ್ರಹಗಳು. ಅದರಲ್ಲಿಯೂ ರವಿ, ಚಂದ್ರ, ಶನಿ ಮಂಗಳ ಈ ನಾಲ್ಕು ಗ್ರಹಗಳು ಬಲಾಢ್ಯರಿದ್ದರೆ ಈ ಲಗ್ನದವರಿಗೆ ಯಾವುದೇ ಪ್ರಕಾರದ ಕೈಗಾರಿಕೆ ವೃತ್ತಿಯಲ್ಲಿ ಯಶಸ್ಸು ಸಾಧ್ಯವಿದೆ. ಇದರಂತೆ ರವಿ, ಚಂದ್ರ, ಶನಿ,

ಯರು ಬಲಾಢ್ಯರಿದ್ದ ಈ ಲಗ್ನದವರು ಸಾರ್ವಜನಿಕ ಸೇವಾ ಸಂಸ್ಥೆಯ ಪಬ್ಲಿಕ್ ಲಿಮಿಟೆಡ್, ಹಾಗೂ ಪಾಲುಗಾರಿಕೆ ವ್ಯವಸ್ಥೆಯ ಕೈಗಾರಿಕೆ ವೃತ್ತಿಯಲ್ಲಿಯೂ ಯಶಸ್ಸು ಸಂಪಾದಿಸಬಲ್ಲರು. ಇದರಂತೆ ಶನಿ, ಶುಕ್ರ, ಚಂದ್ರ ಬಲಾಢ್ಯರಿದ್ದ ಈ ಲಗ್ನದದವರು ಸಹಕಾರಿ ಸಂಸ್ಥೆ ಇಲ್ಲವೆ ಸೊಸಾಯಿಟಿಗಳು ನಡೆಸುತ್ತಿರುವ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ. ಇದರಂತೆ ಶನಿ–ಶುಕ್ರ– ಚಂದ್ರ–ರವಿ ಇಲ್ಲವೆ ಶನಿ–ಶುಕ್ರ–ಚಂದ್ರ·ಮಂಗಳ ಇವರು ಬಲಾಢ್ಯರಿರುವ ಈ ಲಗ್ನದವರು ಪ್ರಾಯವೇಟ ಲಿಮಿಟೆಡ್ ಇಲ್ಲವೆ ಏಕಸ್ವಾಮ್ಯದ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ. ಆದರೆ ಈ ಲಗ್ನದವರು ನೆನಪಿನಲ್ಲಿಡತಕ್ಕ ಮಹತ್ವದ ಸಂಗತಿಯೆಂದರೆ ರವಿ, ಚಂದ್ರ, ಶನಿ, ಮಂಗಳ, ಗುರುಗಳಲ್ಲಿ ಯಾವುದೇ ಮೂರು ಗ್ರಹಗಳು ಬಲಾಢ್ಯರಿದ್ದರೆ ಮಾತ್ರ ಯಾವುದೇ ಪ್ರಕಾರದ ಕೈಗಾರಿಕೆ ವೃತ್ತಿಯಲ್ಲಿ ಯಶಸ್ಸು ದೊರೆಯಬಲ್ಲದು.

೯) ಧನು ಲಗ್ನ — ಈ ಲಗ್ನಕ್ಕೆ ರವಿ, ಮಂಗಳ, ಗುರು, ಬುಧ ಈ ನಾಲ್ಕು ಗ್ರಹಗಳು ಯೋಗಕಾರಕ ಗ್ರಹಗಳು. ಈ ನಾಲ್ಕು ಗ್ರಹಗಳು ಬಲಾಢ್ಯರಿದ್ದವರು ಯಾವುದೇ ಪ್ರಕಾರದ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ. ಗುರು, ಮಂಗಳ, ರವಿ, ಬುಧರು ಬಲಾಢ್ಯರಿದ್ದವರು ಮಧ್ಯಮ ಹಾಗೂ ಸಣ್ಣ ಕೈಗಾರಿಕೆ ವೃತ್ತಿಯಲ್ಲಿಯೂ ಪಾಲುಗಾರಿಕೆ ವ್ಯವಸಾಯದ ಪ್ರಾಯವೇಟ ಲಿಮಿಟೆಡ್, ಹಾಗೂ ಏಕಸ್ವಾಮ್ಯದ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ. ಆದರೆ ಈ ಲಗ್ನದವರು ಗುಡಿ ಕೈಗಾರಿಕಾ ವೃತ್ತಿಯಲ್ಲಿ ಹಾಗೂ ಸಹಕಾರಿ ಸಂಸ್ಥೆಯ ಇಲ್ಲವೆ ಸೊಸಾಯಿಟಿಗಳಿಂದ ನಡೆಸುತ್ತಿರುವ ಕೈಗಾರಿಕೆಯಲ್ಲಿ ಅಷ್ಟೊಂದು ಯಶಸ್ವಿಯಾಗರು. ಆದರೆ ಈ ಲಗ್ನದವರು ನೆನಪಿನಲ್ಲಿಡಬೇಕಾದ ಸಂಗತಿಯೆಂದರೆ— ಗುರು, ಬುಧರು, ಬಲಾಢ್ಯರಿರದೆ ಯಾರೂ ಯಾವುದೇ ಯಾವುದೇ ಪ್ರಕಾರದ ಕೈಗಾರಿಕೆ ವೃತ್ತಿಗೆ ಕೈಹಾಕಬಾರದು. ಕನಿಷ್ಠ ಪಕ್ಷ ಬುಧ-ರವಿ-ಮಂಗಳ ಇಲ್ಲವೆ ಗುರು–ರವಿ-ಮಂಗಳರು ಬಲಾಢ್ಯರಿರಬೇಕು.

ರಿರಬೇಕು, ಅಥವಾ ಬುಧ-ಗುರುಗಳಲ್ಲಿ ಯಾರೊಬ್ಬರು ಬಲಾಢ್ಯರಿರ ಬೇಕಲ್ಲದೆ ರವಿ-ಮಂಗಳರು ದುರ್ಬಲರಿರಬಾರದು.

೧೦) ಮಕರ ಲಗ್ನ :— ಈ ಲಗ್ನಕ್ಕೆ ಶುಕ್ರ, ಬುಧ, ಶನಿ, ಮಂಗಳ ಈ ನಾಲ್ಕು ಗ್ರಹಗಳು ಯೋಗಕಾರಕವಿದ್ದು, ಈ ನಾಲ್ಕು ಗ್ರಹಗಳು ಬಲಾಢ್ಯರಿದ್ದ ಈ ಲಗ್ನದವರು ಯಾವುದೇ ಪ್ರಕಾರದ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ. ಅದರಲ್ಲಿಯೂ ಮಧ್ಯಮ-ಸಣ್ಣ ಕೈಗಾರಿಕೆ, ಪಾಲುಗಾರಿಕೆಯ ವ್ಯವಸ್ಥೆಯ ಕೈಗಾರಿಕೆ, ಪ್ರಾಯವೇಟ ಲಿಮಿಟೆಡ್, ಏಕಸ್ವಾಮ್ಯ ಕೈಗಾರಿಕೆ ಇವೇ ವೃತ್ತಿಯಲ್ಲಿ ಯಶಸ್ವಿ ಯಾಗಲು ಈ ಗ್ರಹಗಳು ಬಲಾಢ್ಯವಿರಬೇಕಾಗುತ್ತದೆ. ಆದರೆ ಸಹಕಾರ ಸಂಸ್ಥೆಗಳಿಂದಲೂ ಸೊಸಾಯಿಟಿಗಳಿಂದಲೂ ನಡಿಸಲ್ಪಡುವ ಕೈಗಾರಿಕೆ, ಗೃಹ ಕೈಗಾರಿಕೆಗೂ, ಗುಡಿ ಕೈಗಾರಿಕೆ ವೃತ್ತಿಗೂ ಈ ಲಗ್ನದವರಿಗೆ ಶನಿ, ಬುಧ, ಶುಕ್ರರು ಮಾತ್ರ ಬಲಾಢ್ಯರಿದ್ದರೆ ಸಾಕು. ಈ ಲಗ್ನದವರು ಗಮನಿಸತಕ್ಕ ಮಹತ್ವದ ಅಂಶವೆಂದರೆ— ಬುಧ, ಶುಕ್ರರು ಬಲಾಢ್ಯ ರಿರದೆ ಇದ್ದಾರೂ ಯಾವುದೇ ಪ್ರಕಾರದ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗರು.

೧೧) ಕುಂಭ ಲಗ್ನ :— ಈ ಲಗ್ನಕ್ಕೆ ಶನಿ, ಶುಕ್ರ, ರವಿ, ಬುಧ, ಮಂಗಳ ಈ ಐದು ಗ್ರಹಗಳು ಬಲಾಢ್ಯವಿದ್ದವರು ಯಾವುದೇ ಪ್ರಕಾರದ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ. ಅದರಲ್ಲಿಯೂ ಮಧ್ಯಮ ಹಾಗೂ ಸಣ್ಣ ಕೈಗಾರಿಕೆ ವೃತ್ತಿಗಳಿಗೂ ಪಾಲುಗಾರಿಕೆ ವ್ಯವಸ್ಥೆಯ ಪ್ರಾಯವೇಟ ಲಿಮಿಟೆಡ್ ಕೈಗಾರಿಕೆಗೆ ವೃತ್ತಿ ಕೈಕೊಳ್ಳುವ ಈ ಲಗ್ನದವರಿಗೆ ಈ ಐದು ಗ್ರಹಗಳು ಬಲಾಢ್ಯವಿರಬೇಕು. ಆದರೆ ಶುಕ್ರ, ಶನಿಯರು ಮಾತ್ರ ಬಲಾಢ್ಯರಿದ್ದ ಈ ಲಗ್ನದದರು ಸಹಕಾರ ಸಂಸ್ಥೆ ಇಲ್ಲವೆ ಸೊಸಾಯಿಟಿ ನಡೆಸುತ್ತಿರುವ ಕೈಗಾರಿಕೆ ವೃತ್ತಿಯಲ್ಲಿ ಗೃಹ ಹಾಗೂ ಗುಡಿ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ. ಈ ಲಗ್ನದವರು ಗಮನಿಸತಕ್ಕ ಮಹತ್ವದ ಅಂಶವೆಂದರೆ ಶುಕ್ರನು ಬಲಾಢ್ಯ

ನಿರದೆ ಯಾರೂ ಯಾವುದೇ ಪ್ರಕಾರದ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗರು. ಕನಿಷ್ಟ ವಕ್ರ ಶನಿ-ಶುಕ್ರರು, ಬುಧ-ಶುಕ್ರರು ಬಲಾಢ್ಯರಿದ್ದರೆ ಮಾತ್ರ ಈ ಲಗ್ನದವರು ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

೧೨) ಮೀನ ಲಗ್ನ :— ಈ ಲಗ್ನಕ್ಕೆ ಗುರು, ಬುಧ, ಚಂದ್ರ, ಮಂಗಳ ಈ ನಾಲ್ಕು ಗ್ರಹಗಳು ಯೋಗ ಕಾರಕ ಗ್ರಹಗಳಿದ್ದು ಈ ಗ್ರಹಗಳು ಬಲಾಢ್ಯರಿದ್ದ ಈ ಲಗ್ನದವರು ಯಾವುದೇ ಪ್ರಕಾರದ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ. ಅದರಲ್ಲಿಯೂ ಗುರು, ಬುಧ, ಚಂದ್ರ, ಮಂಗಳ ಈ ನಾಲ್ಕುಗ್ರಹಗಳು ಬಲಾಢ್ಯರಿದ್ದ ಈ ಲಗ್ನದವರು ಮಧ್ಯಮ-ಸಣ್ಣ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ, ಆದರೆ ಗುರು-ಚಂದ್ರ, ಗುರು-ಬುಧ, ಬುಧ-ಚಂದ್ರ, ಗುರು-ಬುಧ,ಬುಧ-ಮಂಗಳ ಈ ಯಾವುದೆ ಎರಡು ಜೋಡಿಗಳು ಬಲಾಢ್ಯರಿದ್ದವರು ಗೃಹ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ. ಆದರೆ ಗುಡಿ ಕೈಗಾರಿಕೆ ಹಾಗೂ ಸಹಕಾರಿ ವ್ಯವಸ್ಥೆಯ ಕೈಗಾರಿಕೆಗೆ ಈ ಲಗ್ನವು ಪೂರಕವಿರುವದಿಲ್ಲ. ಆದರೆ ಪಾಲುಗಾರಿಕೆ ವ್ಯವಸ್ಥೆಯ ಹಾಗೂ ಪ್ರಾಯವೇಟ ಲಿಮಿಟೆಡ್ ವ್ಯವಸ್ಥೆಯ ಕೈಗಾರಿಕೆ ವೃತ್ತಿಗೂ ಈ ಲಗ್ನದವರಿಗೆ ಬುಧ, ಗುರು, ಮಂಗಳರು ಬಲಾಢ್ಯರಿರಲೇಬೇಕು. ಈ ಲಗ್ನದವರು ಗಮನಿಸಬೇಕಾದ ಮಹತ್ವದ ಅಂಶವೆಂದರೆ — ಗುರು, ಬುಧರು ಬಲಾಢ್ಯರಿರದೇ ಯಾರೂ ಯಾವುದೇ ಕೈಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗರು. ಆದ್ದರಿಂದ ಗುರು-ಬುಧರು ಬಲಾಢ್ಯರಿರದ ಈ ಲಗ್ನದವರು ಯಾವುದೇ ಕೈಗಾರಿಕೆ ವೃತ್ತಿಗೆ ಕೈಹಾಕಬಾರದು.

ಈ ವರೆಗೆ ವಿವಿಧ ಉದ್ಯಮಗಳಿಗೆ ( ಕೈಗಾರಿಕೆಗಳಿಗೆ) ಯೋಗಕಾರಕ ಗ್ರಹಗಳಾವವು ಎಂಬುದನ್ನು ವಿವರಿಸಿದ್ದಾಯಿತು. ಇನ್ನು ಆಯಾ ಉದ್ಯಮಗಳಿಗೆ ಕಾರಕ ಗ್ರಹಗಳಾವವು ಎಂಬುದನ್ನು ಪರಿಶೀಲಿಸುವಾ.

ಭಿನ್ನ ಭಿನ್ನ ವಸ್ತುಗಳಿಗೆ ಭಿನ್ನ ಭಿನ್ನ ಗ್ರಹಗಳು ಕಾರಕವಿರುತ್ತವೆ. ಜಾತಕದಲ್ಲಿ ಬಲಾಢ್ಯವಿರುವ ಗ್ರಹಗಳ ಕಾರಕ ವಸ್ತು-ಒಡವೆಗಳನ್ನು ಉತ್ಪಾ

ದಿಸುವ ಉದ್ದಿಮೆ ಕೈಕೊಂಡರೆ ಇಲ್ಲವೆ ಕಾರಕ ವಸ್ತುಗಳಿಗೆ ಸಂಬಂಧಿಸಿದ ಕೈಗಾರಿಕೆ ವೃತ್ತಿಯನ್ನು ಕೈಕೊಂಡರೆ ಆಯಾ ಉದ್ಯಮಗಳಲ್ಲಿ ಯಶಸ್ವಿಯಾಗುವುದರಲ್ಲಿ ಸಂದೇಹವಿಲ್ಲ.

ವಸ್ತು-ಒಡವೆಗಳು ಅಸಂಖ್ಯವಿರುವುದರಿಂದ ಕೆಲ ಪ್ರಮುಖ ವಸ್ತುಗಳ ಕಾರಕಗ್ರಹಗಳ ಬಗೆಗೆ ಮಾತ್ರ ಇಲ್ಲಿ ವಿವರಿಸಲಾಗಿದ್ದು ಇವುಗಳ ಸಮಗ್ರ ವಿವರಣೆಯನ್ನು ನಾವು ಬರೆಯಬೇಕೆಂದಿರುವ "ಉದ್ಯಮ ಜ್ಯೋತಿಷ್ಯ"ದಲ್ಲಿ ವಿವರಿಸಲಾಗುವುದು. ಪ್ರಸ್ತುತ ಈ ಪ್ರಕರಣಕ್ಕೆ ಸಂಬಂಧಿಸಿದ ಕೆಲ ಪ್ರಮುಖ ವಸ್ತುಗಳ ಕಾರಕಗ್ರಹಗಳ ಬಗೆಗೆ ಈ ಕೆಳಗಿನಂತೆ ವಿವರಿಸಲಾಗಿದೆ.

ಅವಲಕ್ಕಿ, ರವಾ, ಉಪ್ಪಿನಕಾಯಿ. ಹಪ್ಪಳ, ಬ್ರೆಡ್,ಬಿಸ್ಕೀಟ, ಪೇಪರಮೆಂಟ, ಕೇಕ ಮೊದಲಾದ ಯಾವುದೇ ಆಹಾರ ಹಾಗೂ ಖಾದ್ಯ ವಸ್ತುಗಳಿಗೆ ಸಂಬಂಧಿಸಿದ ಉದ್ಯಮಕ್ಕೆ, ಹಾಲಿಗೆ ಸಂಬಂಧಿಸಿದ ಉದ್ಯಮ, ನೀರು ಹಾಗೂ ಪ್ರವಾಹಿಗೆ ಸಂಬಂಧಿಸಿದ ಉದ್ಯಮ, ತಂಪಾದ ಪಾನೀಯ ಸಂಬಂಧಿಸಿದ ಉದ್ಯಮ, ಬಾಣಂತಿಯರು ಹಾಗೂ ಚಿಕ್ಕ ಮಕ್ಕಳಿಗೆ ಬೇಕಾಗಬಹುದಾದ ತಿನ್ನುಣ್ಣುವ ಸಾಮಾನು ಉದ್ದಿಮೆ, ಹೋಟೆಲ, ಬೋರ್ಡಿಂಗ-ಲಾಜಿಂಗ ಉದ್ದಿಮೆ, ಔಷಧೀ ಉದ್ದಿಮೆ ಮತ್ಸ್ಯೋದ್ಯಮ, ತೋಟಗಾರಿಕೆಯ ಉಪಕರಣಗಳ ಉದ್ದಿಮೆ, ಡೋಣಿ – ನಾವೆ – ಹಡಗುಗಳಿಗೆ ಸಂಬಂಧಿಸಿದ ಉದ್ಯಮ ಇವೇ ಮೊದಲಾದ ವಸ್ತುಗಳಿಗೆ ಹಾಗೂ ಉದ್ದಿಮೆಗಳಿಗೆ ಚಂದ್ರನು ಕಾರಕನಿದ್ದು ಚಂದ್ರನು ಬಲಾಢ್ಯನಿರುವ ವ್ಯಕ್ತಿಗಳು ಮೇಲೆ ಬರೆದ ಉದ್ದಿಮೆಗಳಲ್ಲಿ ಯಶಸ್ವಿಯಾಗುತ್ತಾರೆ.

ಇದರಂತೆ ಸಾಯಿಕಲ್, ಮೊಪೆಡ್, ಸ್ಕೂಟರ, ರಿಕ್ಷಾ, ಕಾರು, ಟ್ರಕ, ಟೆಂಪೋ ಮೊದಲಾದ ಎಲ್ಲ ಪ್ರಕಾರದ ವಾಹನಗಳ ಉತ್ಪಾದನೆ ಇಲ್ಲವೆ ಇಂಜಿನಿಗೆ, ಮಶಿನರಿಗೆ ಬೇಕಾಗುವ ಉಪಕರಣಗಳ ಉದ್ದಿಮೆ, ಪಟಾಕ್ಷಿ-ಮದ್ದು-ಗುಂಡು-ಬಂದೂಕು ಮೊದಲಾದ ಯುದ್ಧಕ್ಕೆ ಬೇಕಾಗಬಹುದಾದ

ಉಪಕರಣಗಳು, ಮಾದಕ ವಸ್ತುಗಳ ಉದ್ದಿಮೆ, ವೈದ್ಯಕೀಯ ಆದರ-ಲ್ಲಿಯೂ ಶಸ್ತ್ರಕ್ರೀಯೆಗೆ ಸಂಬಂಧಿಸಿದ ಉಪಕರಣ ಉದ್ದಿಮೆ.

ಎಲ್ಲ ಪ್ರಕಾರದ ಯಂತ್ರಗಳನ್ನು ತಯಾರಿಸುವ ಹಾಗೂ ಯಂತ್ರಗಳ ಬಿಡಿಭಾಗಗಳ ಉದ್ದಿಮೆ,ಇಲೆಕ್ಟ್ರಿಕಲ್ ವಸ್ತುಗಳ ಇಲೆಕ್ಟ್ರಾನಿಕ್ ಸಂಬಂಧಿಸಿದ ಉದ್ಯಮಗಳು,ತಂಬಾಕ ಹಾಗೂ ತಂಬಾಕಕ್ಕೆ ಸಂಬಂಧಿಸಿದ ಬೀಡಿ,ಸಿಗರೇಟ, ನಶ್ಯ ಮೊದಲಾದ ಉದ್ಯಮಗಳು, ತಾಮ್ರ ಹಾಗೂ ತಾಮ್ರಕ್ಕೆ ಸಂಬಂಧಿಸಿದ ಉದ್ಯಮಗಳು, ರೇಡಿಯೋ-ಟೀವಿ, ಹಾಗೂ ಇವುಗಳ ಬಿಡಿಭಾಗಗಳಿಗೆ ಸಂಬಂಧಿಸಿದ ಉದ್ಯಮಗಳು, ಕಡ್ಡಿ ಪೆಟ್ಟಿಗೆ ಉದ್ಯಮ, ವರ್ಕ ಶಾಪ, ಮಶೀನ ಶಾಪಗಳಲ್ಲಿಯ ಉದ್ಯಮ ಇವೇ ಮೊದಲಾದ ವಸ್ತುಗಳ ಹಾಗೂ ಉದ್ಯಮಗಳಿಗೆ ಮಂಗಳ ( ಕುಜ )ನು ಕಾರಕನಿದ್ದು ಕುಜನು ಬಲಾಢ್ಯನಿರುವ ಜಾತಕರು ಮೇಲೆ ಬರೆದ ಉದ್ದಿಮೆಗಳಲ್ಲಿ ಯಶಸ್ವಿಯಾಗುತ್ತಾರೆ.

ಇದರಂತೆ ರಟ್ಟು- ಕಾರ್ಡಬೋರ್ಡ, ಕಾಗದ ಹಾಗೂ ಕಾಗದಕ್ಕೆ ಸಂಬಂಧಿಸಿದ ಉದ್ಯಮಗಳು, ಯುವಕರು ಉಪಯೋಗಿಸುವ ವಸ್ತು-ಒಡವೆಗಳ ಎಲ್ಲ ಉದ್ಯಮಗಳು, ಮುದ್ರಣಕ್ಕೆ ಬೇಕಾಗಬಹುದಾದ ಉಪಕರಣಗಳ ಉದ್ಯಮಗಳು, ಮಸಿ, ಪೆನ್ನು, ಪೇನ್ಸಿಲ, ಬಾಲ ಪೆನ್ನು, ಮೊದಲಾದ ಬರೆಯುವ ಎಲ್ಲ ವಸ್ತುಗಳ ಉದ್ಯಮ, ಕಾರ್ಬನ ಪೇಪರ, ಟೈಪರೈಟಿಂಗ ಮಶೀನಿನ ರಿಬ್ಬನ್ ಮೊದಲಾದ ಉದ್ಯಮಗಳು, ಸಾರಿಗೆ ಹಾಗೂ ಸಂಪರ್ಕಕ್ಕೆ ಸಂಬಂಧಿಸಿದ ಉದ್ಯಮಗಳು, ಹಣಕಾಸಿಗೆ ಸಂಬಂಧಿಸಿದ, ಹಾಗೂ ಪತ್ರಿಕೆಗಳಿಗೆ ಸಂಬಂಧಿಸಿದ ಉದ್ಯಮಗಳು.

ಇವೇ ಮೊದಲಾದ ವಸ್ತುಗಳಿಗೆ ಬುಧನು ಕಾರಕನಿದ್ದು ಆತ ಬಲಾಢ್ಯನಿರುವ ಜಾತಕರು ಮೇಲೆ ಬರೆದ ಉದ್ದಿಮೆಗಳಲ್ಲಿ ಯಶಸ್ವಿಯಾಗುತ್ತಾರೆ.

ಬೆಲ್ಲ–ಸಕ್ಕರೆ–ಸಿಹಿ–ಮಧುರ ಪದಾರ್ಥಗಳ ಸಂಬಂಧದ ಉದ್ದಿಮೆಗಳು (ಸಕ್ಕರೆ ಕಾರಖಾನೆಗಳು), ಪ್ಲಾಸ್ಟಿಕ್ ಹಾಗೂ ಜುಟ ನಾರಿಗೆ ಸಂಬಂಧಿಸಿದ ಉದ್ಯಮಗಳು, ಬೆಳ್ಳಿ, ಬಂಗಾರ ಬೀಜೋತ್ಪಾದನೆಯ ಉದ್ಯಮ, ಎಲ್ಲ ಪ್ರಕಾರದ ಮಧ್ಯಮ ಹಾಗೂ ಸಣ್ಣ ಕೈಗಾರಿಕೆಗಳು ಉತ್ಪಾದಿಸುವ ವಸ್ತುಗಳ ಉದ್ದಿಮೆಗಳು, ವಿದ್ಯಾರ್ಥಿಗಳ ಶಿಕ್ಷಣಕ್ಕೆ ಸಂಬಂಧಿಸಿದ ವಸ್ತುಗಳ ಉತ್ಪಾದನೆ, ದೇವಾಲಯ – ಮಠಗಳಿಗೆ ಸಂಬಂಧಿಸಿದ ವಸ್ತುಗಳ ಉತ್ಪಾದನೆ ಇವೇ ಮೊದಲಾದ ವಸ್ತುಗಳಿಗೆ ಗುರುವು ಕಾರಕನಿದ್ದು, ಗುರುವು ಬಲಾಢ್ಯನಿರುವ ಜಾತಕರು ಮೇಲೆ ಬರೆದ ವಸ್ತುಗಳ ಉದ್ದಿಮೆಗಳಲ್ಲಿ ಯಶಸ್ವಿಯಾಗುತ್ತಾರೆ.

ಅದರಂತೆ ಜವಳಿ ಉದ್ದಿಮೆ, ಟೆರಿಲಿನ್, ಟೆರಿಕಾಟ, ರೇಶಿಮೆ, ಬೆಳ್ಳಿ – ಬಂಗಾರ – ವಜ್ರ – ವೈಢೂರ್ಯ ಮೊದಲಾದ ಒಡವೆಗಳ ಸ್ತ್ರೀಯರು ಉಪಯೋಗಿಸುತ್ತಿರುವ ಎಲ್ಲ ಸೌಂದರ್ಯವರ್ಧಕ ವಸ್ತುಗಳ ಉದ್ಯಮ, ಕುಂಕುಮ, ಅರಿಸಿಣ, ಸ್ನೋ, ಪೌಡರ ಮುಖಕ್ಕೆ ಹಚ್ಚುವ ಸಾಬೂಣ, ಊದಿನ ಕಡ್ಡಿ, ಸುಗಂಧಿತ ಹಾಗೂ ಅಲಂಕಾರಕ ವಸ್ತುಗಳ ಉದ್ಯಮ, ಬಳೆ ಹಾಗೂ ಕಾಜುಗಳ ಉದ್ಯಮ, ಫೋಟೋಗ್ರಾಫಿ ಹಾಗೂ ಚಲನಚಿತ್ರಕ್ಕೆ ಸಂಬಂಧಿಸಿದ ಉದ್ಯಮಗಳು, ಸ್ಟೇಶನರೀ ವಸ್ತುಗಳ ಸ್ಟೇನ–ಲೆಸ್ ಸ್ಟೀಲ ವಸ್ತುಗಳ ಉದ್ಯಮಗಳು, ಎಲ್ಲ ಪ್ರಕಾರದ ಗೃಹ ಹಾಗೂ ಗುಡಿ ಕೈಗಾರಿಕೆಗಳು ಉತ್ಪಾದಿಸುವ ಉದ್ಯಮಗಳು, ಬಣ್ಣದ ಕೈಗಾರಿಕೆಗಳು, ಲಲಿತ ಕಲೆಗೆ ಸಂಬಂಧಿಸಿದ ಉಪಕರಣಗಳ ಉದ್ಯಮ.

ಇವೇ ಮೊದಲಾದ ವಸ್ತುಗಳಿಗೆ ಶುಕ್ರನು ಕಾರಕನಿದ್ದು ಶುಕ್ರನು ಬಲಾಢ್ಯನಿದ್ದ ಜಾತಕರು ಮೇಲೆ ಬರೆದ ವಸ್ತುಗಳ ಉದ್ದಿಮೆಗಳಲ್ಲಿ ಯಶಸ್ವಿಯಾಗುತ್ತಾರೆ.

ಇದರಂತೆ ಎಲ್ಲ ಪ್ರಕಾರದ ಕಟ್ಟಿಗೆ ಕೈಗಾರಿಕೆ, ಎಲ್ಲ ಪ್ರಕಾರದ ಎಣ್ಣೆ ಉದ್ಯಮ, ಕೃಷಿ ಉಪಕರಣಗಳ ಉದ್ಯಮ, ಗೊಬ್ಬರ ಉದ್ದಿಮೆ, ಕಬ್ಬಿಣ–

ಉಕ್ಕುಗಳಿಗೆ ಸಂಬಂಧಿಸಿದ ಉದ್ಯಮ, ಚರ್ಮಕ್ಕೆ ರಬ್ಬರಿಗೆ ಸಂಬಂಧಿಸಿದ ಉದ್ಯಮ, ಮುದ್ರಣಕ್ಕೆ ಬೇಕಾಗಬಹುದಾದ ಉಪಕರಣಗಳ ಉದ್ಯಮ, ಫೌಂಡರಿಗೆ ಸಂಬಂಧಿಸಿದ ಉದ್ಯಮ, ಸಿಮೆಂಟ-ಇಟ್ಟಿಂಗಿ-ವಾಟರಪ್ರೂಫ-ಸೌಂಡ ಪ್ರೂಫ ವಸ್ತು ಇವೇ ಮೊದಲಾದ ಕಟ್ಟಡಕ್ಕೆ ಸಂಬಂಧಿಸಿದ ವಸ್ತುಗಳ ಉತ್ಪಾದನೆ, ಎಲ್ಲ ಪ್ರಕಾರದ ಗ್ಯಾಸುಗಳ ಉತ್ಪಾದನೆಯ ಉದ್ಯಮ, ವೃದ್ಧರು ಉಪಯೋಗಿಸುತ್ತಿರುವ ಎಲ್ಲ ವಸ್ತುಗಳ ಉತ್ಪಾದನೆ ಉದ್ಯಮ.

ಇವೇ ಮೊದಲಾದ ವಸ್ತುಗಳಿಗೆ ಶನಿಯು ಕಾರಕನಿದ್ದು, ಶನಿಯು ಬಲಾಢ್ಯನಿದ್ದ ಜಾತಕರು ಮೇಲೆ ಬರೆದ ವಸ್ತುಗಳ ಉದ್ಯಮದಲ್ಲಿ ಯಶಸ್ವಿಯಾಗುತ್ತಾರೆ.

ಎಲ್ಲ ಪ್ರಕಾರದ ಮದ್ಯಗಳನ್ನು ಉತ್ಪಾದಿಸುವ ಉದ್ಯಮಗಳಿಗೆ ರಾಹು ಕಾರಕನು. ರಾಹು ಬಲಾಢ್ಯನಿರದೆ ಮದ್ಯದ ಉದ್ದಿಮೆಯಲ್ಲಿ ಯಾರೂ ಯಶಸ್ಸು ಪಡೆಯಲಾರರು.

ಎಲ್ಲ ಪ್ರಕಾರದ ದೊಡ್ಡ ಹಾಗು ಮಧ್ಯಮ ಉದ್ದಿಮೆಗಳಿಗೆ ಸರಕಾರದ ಕೋಟಾ ನಿಯಂತ್ರಿತವಾಗಿ ಸರಬರಾಜು ಮಾಡುವ ಕಚ್ಚಾ ವಸ್ತುಗಳಿಗೆ ಸಂಬಂಧಿಸಿದ ಉದ್ಯಮಗಳಿಗೂ ಸಾರ್ವಜನಿಕರಿಂದ ಸೇರುಗಳನ್ನು ಸಂಗ್ರಹಿಸಿ ಕೈಕೊಳ್ಳುವ ಎಲ್ಲ ಪ್ರಕಾರದ ಉದ್ಯಮಗಳಿಗೂ ವೈದ್ಯಕೀಯಕ್ಕೆ ಸಂಬಂಧಿಸಿದ (ಮೆಡಿಕಲ್) ಉಪಕರಣಗಳ ಉದ್ಯಮಗಳಿಗೂ ದೇಹದ ಅವಯವಗಳಿಗೆ ಸಂಬಂಧಿಸಿದ ಕೃತ್ರಿಮ ಅಂಗಾಂಗಳ ಉದ್ದಿಮೆಗಳಿಗೆ, ಉದಾ: ಕಣ್ಣು, ಕಿವಿ, ಹಲ್ಲುಗಳಿಗೆ ಸಂಬಂಧಿಸಿದ ಕೃತ್ರಿಮ ಅಂಗಾಂಗಗಳು, ಕೃತ್ರಿಮ ಹಲ್ಲುಗಳು ಕನ್ನಡಕ್ಕೆ ಸಂಬಂಧಿಸಿದ ಉಪಕರಣ ಬಧಿರರು ಉಪಯೋಗಿಸುವ ಶ್ರವಣ ಯಂತ್ರಗಳು ಇವೇ ಮೊದಲಾದ ಉದ್ಯಮಗಳಿಗೆ ರವಿಯು ಕಾರಕನಿದ್ದು ರವಿಯು ಬಲಾಢ್ಯನಿರುವ ಜಾತಕರು ಮೇಲೆ ಬರೆದ ವಸ್ತುಗಳ ಉದ್ಯಮದಲ್ಲಿ ಯಶಸ್ವಿಯಾಗುತ್ತಾರೆ.

ಇನ್ನು ಕೆಲ ಉದ್ಯಮಗಳಿಗೆ ಕೆಲ ವಸ್ತು-ಒಡವೆಗಳಿಗೆ ಎರಡು-ಮೂರು ಗ್ರಹಗಳು ಕಾರಕವಿರುತ್ತವೆ. ಆಗ ಆವೆಲ್ಲವಕ್ಕೆ ಸಂಬಂಧವಿರುವ ಎಲ್ಲ ಗ್ರಹಗಳ ಬಲಾಬಲವನ್ನು ಪರಿಶೀಲಿಸಿ ಉದ್ಯೋಗಕ್ಕೆ ಕೈಹಾಕಬೇಕು. ಉದಾ: ಕಡ್ಡಿಪೆಟ್ಟಿಗೆ ಕೈಗಾರಿಕೆಗೆ ಕಡ್ಡಿಗಳಿಗೆ ಶನಿಯು ಕಾರಕನು, ಮದ್ದುಗಳಿಗೆ ಮಂಗಳ-ರಾಹು ಗ್ರಹಗಳು ಕಾರಕರು. ಆದ್ದರಿಂದ ಕಡ್ಡಿಪೆಟ್ಟಿಗೆ ಕೈಗಾರಿಕೆ ಕೈಕೊಳ್ಳುವವರಿಗೆ ಶನಿ-ರಾಹು,ಶನಿ-ಮಂಗಳ ಬಲಾಬಲವನ್ನು ಪರಿಶೀಲಿಸಬೇಕು. ಇದರಂತೆ ಮುದ್ರಣ ವ್ಯವಸಾಯಕ್ಕೆ ಮುದ್ರಕರಿಗೆ ಮೂರು ಗ್ರಹಗಳು ಕಾರಕರು. ಕಾಗದಕ್ಕೆ ಬುಧನು ಕಾರಕನಿದ್ದರೆ, ಮುದ್ರಣ ಮಶೀನರಿಗೆ ಹಾಗೂ ಕೇಸು ಮೊದಲಾದವುಗಳ ಮೇಲೆ ಶನಿಯು ಕಾರಕನು, ಯಾವುದೇ ಪ್ರಕಾರದ ಮಶೀನರಿಗೆ ಮಂಗಳನು ಕಾರಕನು. ಆದ್ದರಿಂದ ಮುದ್ರಕರಿಗೆ ಮುದ್ರಣ ಉದ್ದಿಮೆಗಳಿಗೆ ಬುಧ—ಶನಿ—ಮಂಗಳ ಕಾರಕರು. ಅದರಲ್ಲಿಯೂ ಬುಧ—ಶನಿಯರು ಹೆಚ್ಚು ಕಾರಕರು. ಇದರಂತೆ ಔಷಧೀ ಉದ್ಯಮಗಳಿಗೆ ಕೂಡ ಎರಡು ಗ್ರಹಗಳು ಕಾರಕರು. ಔಷಧಿ, ಸಸ್ಯ ಹಾಗೂ ವನಸ್ಪತೀ ಕಾರಕನು ಆದ ಚಂದ್ರನೊಂದಿಗೆ ರಸಾಯನ ಶಾಸ್ತ್ರದ ಹಾಗೂ ಔಷಧೀ ತಯಾರಿಸುವ ಶಾಸ್ತ್ರದ ಕಾರಕನಾದ ಶನಿಯು ಕಾರಕನಿರುತ್ತಾನೆ. ಹೀಗೆ ಔಷಧೀ ತಯಾರಿಸುವ ಉದ್ಯಮಕ್ಕೆ ಶನಿ—ಚಂದ್ರರು ಕಾರಕರಿರುತ್ತಾರೆ. ಹೀಗೆ ಯಾವುದೊಂದು ಉದ್ಯಮಕ್ಕೆ ಕಾರಕ ವಸ್ತುಗಳ ಆಯಾ ಲಗ್ನದ ಯೋಗಕಾರಕಗಳ ಬಲಾಬಲವನ್ನು ವಿಶಿಷ್ಟ ಉದ್ಯಮಕ್ಕೆ ಪೂರಕವಾದ ಗ್ರಹಗಳ ಬಲಾಬಲವನ್ನು ಪರಿಶೀಲಿಸಬೇಕು. ಉದಾಹರಣೆಗೆ ಖಾದ್ಯತೈಲದ ಎಣ್ಣೆಯ ವೃತ್ತಿಯನ್ನೇ ತೆಗೆದುಕೊಳ್ಳಿರಿ.

ಯಾವುದೇ ಪ್ರಕಾರದ ಎಣ್ಣೆಗೆ ಶನಿಯು ಕಾರಕನು. ಆದ್ದರಿಂದ ಎಣ್ಣೆಯ ಉದ್ಯೋಗಕ್ಕೆ ಶನಿಯ ಬಲಾಬಲವನ್ನಂತೂ ಪರಿಶೀಲಿಸಲೇಬೇಕು ಶನಿಯು ಬಲಾಢ್ಯನಿರದೆ ಯಾರೂ ಎಣ್ಣೆಯ ಉದ್ಯೋಗ ಕೈಕೊಳ್ಳಲಾರರು. ಆದರೆ ಎಣ್ಣೆಯ ಗಾಣವನ್ನು ಇಟ್ಟುಕೊಳ್ಳುವವರಿಗೆ ಅಂದರೆ ಎತ್ತಿನಿಂದ ಎಣ್ಣೆ ತೆಗೆದು ಮಾರುವವರಿಗೆ ಅದೂ ಸಹ ಕಿರುಕುಳವಾಗಿ ಮಾರುವವರಿಗೆ

ಶನಿಯು ಕೇವಲ ರಾಶಿ ಬಲದವನಾಗಿದ್ದು ವ್ಯಾಪಾರಕಾರ ಕಾರಕ ಗ್ರಹವಾದ ಬುಧನು ರಾಶಿ ಬಲದವನೂ ಸ್ಥಾನ ಬಲದವನೂ ಇರಬೇಕಾಗುತ್ತದೆ. ಆದರೆ ಎಣ್ಣೆ ಮಶೀನಿನಿಂದ ಅಂದರೆ ಗೃಹ ಕೈಗಾರಿಕೆ ವೃತ್ತಿ ಕೈಕೊಳ್ಳುವವರಿಗೆ ಶನಿಯು ರಾಶಿ ಬಲದವನೂ ಸ್ಥಾನ ಬಲದವನೂ ಇರಬೇಕು. ಇದರಂತೆ ಎಣ್ಣೆ ಎಕ್ಸಪೆಲರ, ಎಣ್ಣೆಯ ದೊಡ್ಡ ಪ್ರಮಾಣದ ಮಿಲ್ಲ, ಸಣ್ಣ ಕೈಗಾರಿಕೆ–ಮಧ್ಯಮ ಕೈಗಾರಿಕೆ ಉದ್ಯಮ ಪ್ರಾರಂಭಿಸುವವರಿಗೆ ಶನಿಯ ಸಂಗಡ ಉಳಿದ ಯೋಗಕಾರಕ ಗ್ರಹಗಳೂ ಬಲಾಢ್ಯವಿರಲೇಬೇಕಾಗುತ್ತದೆ.

**ಕಾರಕ ಸ್ಥಾನ** :— ಸ್ಥಾನದೃಷ್ಟಿಯಿಂದ ಪರಿಶೀಲಿಸಿದರೆ ಉದ್ಯಮ ವೃತ್ತಿಯ ಸ್ಥಾನವಾದ ಚತುರ್ಥ ಸ್ಥಾನವಂತೂ ಪೂರಕವಿರಲೇಬೇಕು. ಚತುರ್ಥದ ನಂತರ ಅನೇಕ ಸ್ಥಾನಗಳನ್ನು ಪರಿಶೀಲಿಸಬೇಕಾಗುತ್ತದೆ. ಏಕೆಂದರೆ ಹಿಂದೆ ಹೇಳಿದಂತೆ ಉದ್ಯಮದಲ್ಲಿ ಅನೇಕ ಪ್ರಕಾರಗಳಿದ್ದು ವಿಭಿನ್ನ ಉದ್ಯಮಗಳಿಗೆ ವಿಭಿನ್ನ ಪ್ರಕಾರದ ಸ್ಥಾನಗಳು ಕಾರಕವಿರುತ್ತವೆ, ಅವುಗಳ ವಿವರಗಳನ್ನು ಕೆಳಗಿನಂತೆ ವಿಶ್ಲೇಷಿಸಲಾಗಿದೆ.

೧) ಗುಡಿ ಕೈಗಾರಿಕೆಗೆ ಚತುರ್ಥದೊಂದಿಗೆ ತೃತೀಯ ಸ್ಥಾನವನ್ನು ಪರಿಶೀಲಿಸಬೇಕಾಗುತ್ತದೆ. ಆದ್ದರಿಂದ ಚತುರ್ಥ–ಚತುರ್ಥೇಶ, ತೃತೀಯ–ತೃತೀಯೇಶರು ಬಲಾಢ್ಯರಿದ್ದವರು ಗುಡಿ ಕೈಗಾರಿಕೆಯಲ್ಲಿ ಯಶಸ್ವಿಯಾಗುತ್ತಾರೆ.

೨) ಏಕೆಂದರೆ ಗುಡಿ ಕೈಗಾರಿಕೆ ಕುಶಲ ಕೈಗಾರಿಕೆಯಲ್ಲಿ ಬರುತ್ತದೆ. ಅಲ್ಲದೆ ಗುಡಿ ಕೈಗಾರಿಕೆ ವೃತ್ತಿಯನ್ನು ಕೈಕೊಳ್ಳುವವರು ಕಲಾಕಾರರಿರುತ್ತಾರೆ. ಅಲ್ಲದೇ ಇವರು ಸ್ವತಃ ಕೆಲಸ ಮಾಡಬೇಕಾಗುತ್ತಾರೆ. ಆದ್ದರಿಂದ ಚತುರ್ಥ–ತೃತೀಯ ಸ್ಥಾನಗಳು ಹಾಗೂ ಸ್ಥಾನಾಧೀಶರು ಬಲಾಢ್ಯರಿರಬೇಕಾಗುತ್ತದೆ.

೨) ಗೃಹ ಕೈಗಾರಿಕೆಗೆ ಚತುರ್ಥ ಸ್ಥಾನವೇ ಮೂಲ ಹಾಗೂ ಮುಖ್ಯವಿರುತ್ತದೆ. ಗೃಹ ಕೈಗಾರಿಕೆಯ ಹೆಸರೇ ಸೂಚಿಸುವಂತೆ ಗೃಹ

ಅಂದರೆ ಮನೆ. ಜಾತಕದಲ್ಲಿ ಮನೆಯ ಸ್ಥಾನವೂ ಕೈಗಾರಿಕೆಯ ಸ್ಥಾನವೂ ಆದ ಚತುರ್ಥ ಸ್ಥಾನವೇ ಪ್ರಬಲ ಹಾಗೂ ಮುಖ್ಯವಿರುತ್ತದೆ. ಗೃಹ ಕೈಗಾರಿಕೆಯಲ್ಲಿ ಹೆಚ್ಚಾಗಿ ಕುಟುಂಬದ ಸದಸ್ಯರೇ ಕೆಲಸ ಮಾಡುತ್ತಾರೆ. ಆಳು-ಹೋಳುಗಳಾಗಲಿ ನೌಕರ-ಚಾಕರರಾಗಲಿ ಇದ್ದರೂ ಸಹ ಅಂಥವರ ಸಂಖ್ಯೆ ಕಡಿಮೆ. ಇದಲ್ಲದೆ ಗೃಹ ಕೈಗಾರಿಕೆಯನ್ನು ಹೆಚ್ಚಾಗಿ ತಾವು ವಾಸಿಸುವ ಮನೆಯಲ್ಲಿಯೇ ಕೈಕೊಳ್ಳುತ್ತಾರೆ. ಆದ್ದರಿಂದ ಚತುರ್ಥ ಸ್ಥಾನ-ಚತುರ್ಥೇಶ ಬಲಾಢ್ಯರಿರದೆ ಯಾರೂ ಗೃಹ ಕೈಗಾರಿಕೆಯಲ್ಲಿ ಯಶಸ್ವಿಯಾಗರು.

೩) ಮಧ್ಯಮ ಹಾಗೂ ಸಣ್ಣ ಕೈಗಾರಿಕೆಗಳಿಗೆ ಲಗ್ನ, ಪಂಚಮ, ನವಮ ಸ್ಥಾನಗಳು ಕಾರಕವಿರುತ್ತವೆ. ಏಕೆಂದರೆ ಮಧ್ಯಮ ಹಾಗೂ ಸಣ್ಣ ಕೈಗಾರಿಕೆಗಳನ್ನು ಉದ್ಯಮಗಳಿಗಾಗಿ ನಿರ್ಮಿತವಾದ ಪ್ರದೇಶಗಳಲ್ಲಿ (ಇಂಡಸ್ಟ್ರಿಯಲ್ ಇಸ್ಟೇಟ) ಯೇ ಕೈಕೊಳ್ಳುವುದು ಹೆಚ್ಚು, ಇದಲ್ಲದೆ ಕೂಲಿ ಆಳುಗಳು ನೌಕರಚಾಕರರ ಸಂಖ್ಯೆಯೂ ಹೆಚ್ಚಿರುತ್ತದೆ, ಇದಲ್ಲದೆ ಹೆಚ್ಚು ಬಂಡವಾಳವನ್ನು ತೊಡಗಿಸಬೇಕಾಗುತ್ತದಲ್ಲದೆ ದೊಡ್ಡ ದೊಡ್ಡ ಯಂತ್ರ ( ಮಶಿನರಿ ) ಉಪಕರಣಗಳನ್ನು ಬಳಸಲಾಗುತ್ತದೆ. ಈ ಎಲ್ಲ ಸಂಗತಿಗಳಿಗಾಗಿ ಲಗ್ನ, ಪಂಚಮ, ಭಾಗ್ಯ ಈ ಮೂರು ಸ್ಥಾನಗಳು ಹಾಗೂ ಸ್ಥಾನಾಧೀಶರು ಬಲಾಢ್ಯರಿರಬೇಕಾಗುತ್ತದೆ. ಆದ್ದರಿಂದ ಮಧ್ಯಮ ಹಾಗೂ ಸಣ್ಣ ಕೈಗಾರಿಕೆಗೆ ಲಗ್ನ, ಪಂಚಮ, ಭಾಗ್ಯ ( ನವಮ ) ಸ್ಥಾನಗಳೂ ಈ ಸ್ಥಾನಾಧೀಶರೂ ಬಲಾಢ್ಯರಿರದೆ ಯಾರೂ ಈ ಉದ್ಯಮಗಳಲ್ಲಿ ಯಶಸ್ವಿಯಾಗರು.

**ಲಗ್ನ** :— ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ಕರ್ಕ, ಸಿಂಹ, ವೃಶ್ಚಿಕ, ಧನು ಈ ಲಗ್ನಗಳು ಮಧ್ಯಮ ಕೈಗಾರಿಕೆಗಳಿಗೂ, ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ವೃಶ್ಚಿಕ, ಧನು, ಮಕರ ಈ ಲಗ್ನಗಳು ಸಣ್ಣ ಕೈಗಾರಿಕೆಗಳಿಗೂ, ಮೇಷ, ವೃಷಭ, ಮಿಥುನ, ಕರ್ಕ, ಕನ್ಯಾ, ತುಳಾ, ಕುಂಭ, ಮೀನ ಈ ಲಗ್ನಗಳು ಗೃಹ ಕೈಗಾರಿಕೆಗಳಿಗೂ,

ಮೇಷ, ವೃಷಭ, ಮಿಥುನ, ಕರ್ಕ, ತುಲಾ, ಮಕರ, ಕುಂಭ ಈ ಲಗ್ನ-ಗಳು ಗುಡಿ ಕೈಗಾರಿಕೆಗಳಿಗೂ ಪ್ರೇರಕವೂ ಕಾರಕವೂ ಇರುತ್ತವೆ.

**ರಾಶಿ :—** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿ-ಯಾವರೇ ಉದ್ಯಮ ವೃತ್ತಿ ಕೈಕೊಳ್ಳುತ್ತಾರೆಯೆಂದು ಹೇಳಲುಬಾರದು. ಆದಾಗ್ಯೂ ಪುರುಷ ರಾಶಿಯಲ್ಲಿ ಅನೇಕ ಗ್ರಹಗಳಿರುವ ಅದರಲ್ಲಿಯೂ ಚಂದ್ರ, ಮಂಗಳ, ರವಿಯರು ಪುರುಷ ರಾಶಿಯಲ್ಲಿರುವವರು ಉದ್ಯಮ ವೃತ್ತಿಯಲ್ಲಿಯಶಸ್ವಿಯಾಗುತ್ತಾರೆ. ಏಕೆಂದರೆ ಉದ್ಯಮ ವೃತ್ತಿ ಕೈಕೊಳ್ಳುವವರು ಸಾಹಸೀ ಪ್ರವೃತ್ತಿಯಾವರು ಇರಬೇಕಾಗುತ್ತದೆ. ಇವರು ಧಾಡಸಿ, ಸಾಹಸಿ ದೃಢನಿಶ್ಚಯಿ ಸತತೋದ್ಯೋಗಿಯಾಗಿರಬೇಕಾಗುತ್ತದೆ. ಇದಲ್ಲದೆ ಹೇರಳವಾಗಿ ಹಣತೊಡಗಿಸುವ ಪ್ರವೃತ್ತಿಯುಳ್ಳವರಿರಬೇಕಾಗುತ್ತದಲ್ಲದೆ ಎಂಥ ಪ್ರಸಂಗದಲ್ಲಿಯೂ ಎದೆಗುಂದಬಾರದು. ಅನೇಕ ಸಂದರ್ಭದಲ್ಲಿ ರಿಸ್ಕ್ ಮೈಮೇಲೆ ತೆಗೆದುಕೊಂಡು ಕೆಲಸ ಮಾಡಬೇಕಾಗುತ್ತದೆ. ಈ ಎಲ್ಲ ಗುಣ-ಧರ್ಮಗಳು ರವಿ-ಮಂಗಳರು ಬಲಾಢ್ಯರಿರುವ ಚಂದ್ರನು ಪುರುಷ ರಾಶಿಯ-ಲ್ಲಿರುವ ಜಾತಕದವರಿಗೆ ಮಾತ್ರ ಸಾಧಿಸುತ್ತವೆ. ಆದರೆ ಈ ಎಲ್ಲ ಗುಣ ಧರ್ಮದವರು ಮಾಧ್ಯಮ ಹಾಗೂ ಸಣ್ಣ ಕೈಗಾರಿಕೆ ವೃತ್ತಿಯುಳ್ಳವರಿಗೆ. ಗೃಹ-ಗುಡಿ ಕೈಗಾರಿಕೆಗಳಿಗೆ ಚಂದ್ರನು ಸ್ತ್ರೀರಾಶಿಯವನಾಗಿಯೂ ಬುಧ-ಶುಕ್ರರು ರಾಶಿಬಲದವರಾಗಿಯೂ ಸ್ಥಾನಬಲದವರಾಗಿಯೂ ಇರಬೇಕು.

**ಯೋಗಗಳು:**

೧) ಲಗ್ನ-ಲಗ್ನೇಶ, ಪಂಚಮ-ಪಂಚಮೇಶ, ಭಾಗ್ಯ-ಭಾಗ್ಯೇಶ, ಚತುರ್ಥ-ಚತುರ್ಥೇಶ ಹಾಗೂ ರವಿ-ಮಂಗಳ ಈ ಹತ್ತು ಸಂಗತಿಗಳಲ್ಲಿ ಯಾವುದೇ ಆರು ಸಂಗತಿಗಳು ಪೂರಕವಿದ್ದ ಜಾತಕರು ಯಾವುದೇ ಪ್ರಕಾರದ ಕೈಗಾರಿಕೆ ವೃತ್ತಿಯಲ್ಲಿ ಪಳಗಬಲ್ಲರು.

೨) ಮೇಷ, ಕರ್ಕ, ಸಿಂಹ, ವೃಶ್ಚಿಕ, ಧನು ಈ ಯಾವುದೊಂದು ಲಗ್ನವಿದ್ದು ರವಿ-ಮಂಗಳ-ಗುರುಗಳಲ್ಲಿ ಯಾವುದೇ ಎರಡು ಗ್ರಹಗಳು ಬಲಾಢ್ಯವಿರುವ ಜಾತಕನು ಉದ್ಯಮ ವೃತ್ತಿಯಲ್ಲಿ ಯಶಸ್ವಿಯಾಗುತ್ತಾನೆ.

೩) ವಯಸ್ಸಿನ ೨೦ರಿಂದ ೫೦ರವರೆಗೆ ಬಲಾಢ್ಯಯೋಗಕಾರಕ ಗ್ರಹಗಳ ಮಹಾರ್ದಶೆ ಇದ್ದು ಸಾಡೇಸಾತಿ ಹಾಗೂ ಪಂಚಮಾಷ್ಟಮ ಶನಿ ಇರದಿರುವ ವ್ಯಕ್ತಿಗಳು ಉದ್ಯಮದಲ್ಲಿ ಯಶಸ್ವಿಯಾಗುತ್ತಾರೆ.

೪) ರವಿ ಬಲಾಢ್ಯನಿರುವ ಉದ್ಯಮದಾರರಿಗೆ ಸರಕಾರದ ಸಹಾಯ-ಸೌಕರ್ಯ ಸಾಕಷ್ಟು ಸಿಗುತ್ತದೆ.

೫) ಚತುರ್ಥ ಸ್ಥಾನ ಹಾಗೂ ಚತುರ್ಥೇಶ ಬಲಾಢ್ಯವಿರುವ ಉದ್ಯಮದಾರರಿಗೆ ಆಳು-ಹೋಳುಗಳ, ನೌಕರ-ಚಾಕರರ ಸಹಾಯ-ಸಹಕಾರ ಸಾಕಷ್ಟು ಸಿಗುತ್ತದೆ. ಸಂಪು-ಬಂದ-ಮುಷ್ಕರಗಳು ಕಡಿಮೆ.

೬) ಮಂಗಳನು ಬಲಾಢ್ಯನಿರುವ ಉದ್ಯಮದಾರರಿಗೆ ಮಶೀನರಿ (ಯಂತ್ರಗಳ) ತೊಂದರೆ ಆಗುವುದಿಲ್ಲಾ.

೭) ಲಗ್ನ-ಲಗ್ನೇಶ, ಪಂಚಮ-ಪಂಚಮೇಶ, ಭಾಗ್ಯ-ಭಾಗ್ಯೇಶ ಈ ಆರು ಸಂಗತಿಗಳು ಪೂರಕವಿರುವ ಉದ್ಯಮದಾರರಿಗೆ ಬಂಡವಾಳ ಸಮಸ್ಯೆ ಉಂಟಾಗುವುದಿಲ್ಲಾ.

೮) ರವಿ, ಮಂಗಳ, ಚಂದ್ರ ಹಾಗೂ ಚತುರ್ಥ ಸ್ಥಾನ, ಚತುರ್ಥೇಶ ಈ ಸಂಗತಿಗಳು ಪೂರಕವಿರುವ ಉದ್ಯಮದಾರರಿಗೆ ಉತ್ಪಾದನಾ ಸಮಸ್ಯೆ ಉಂಟಾಗುವುದಿಲ್ಲ.

೯) ಶನಿ-ಮಂಗಳ, ಶನಿ-ಚಂದ್ರ, ಶನಿ-ರವಿ ಇವರ ಯುತಿಯೋಗ, ಪ್ರತಿಯೋಗ, ದೃಷ್ಟಿಯೋಗ ಲಗ್ನ, ಚತುರ್ಥ, ದಶಮ, ಸಪ್ತಮ ಭಾಗ್ಯದಲ್ಲಿರುವವರು ಉದ್ಯಮ ವೃತ್ತಿಗೆ ಕೈಹಾಕಬಾರದು.

೧೦) ಶನಿ ದೃಷ್ಟಿತ ರವಿ ಇರುವ ಉದ್ಯಮದಾರರಿಗೆ ಸರಕಾರದಿಂದಲೂ ಅಧಿಕಾರಗಳಿಂದಲೂ ಕಿರುಕಳ ಬಹಳ.

೧೧) ಶನಿ ದೃಷ್ಟಿತ ಮಂಗಳನಿರುವ ಉದ್ಯಮದಾರರಿಗೆ ಯಂತ್ರಗಳ (ಮಶಿನರಿ) ತೊಂದರೆ ಬಹಳ.

೧೨ ಶನಿ ದೃಷ್ಟಿತ ಚಂದ್ರ, ರಾಹುಯುಕ್ತ ಚಂದ್ರನಿದ್ದು ಚತುರ್ಥೇಶ ಚತುರ್ಥ ಸ್ಥಾನ ಹಾಗೂ ಲಗ್ನ-ಲಗ್ನೇಶ ದುರ್ಬಲವಿರುವ ಉದ್ಯಮದಾರರಿಗೆ ನೌಕರರಿಂದ ತೊಂದರೆ ಬಹಳ,

೧೩ ಚತುರ್ಥದಲ್ಲಿ ಅನೇಕ ಪಾಪ ಗ್ರಹಗಳು ಹಾಗೂ ಚತುರ್ಥೇಶ ದುರ್ಬಲವಿರುವವರು ಉದ್ಯಮ ವೃತ್ತಿಗೆ ಕೈಹಾಕಬಾರದು.

೧೪ ಚಂದ್ರ-ಶುಕ್ರರು ಬಲಾಢ್ಯರಿರುವ ವ್ಯಕ್ತಿಗಳು ಗುಡಿ ಕೈಗಾರಿಕೆಯಲ್ಲಿ ಯಶಸ್ವಿಯಾಗುತ್ತಾರೆ.

೧೫ ಬುಧ-ಶುಕ್ರ-ಚಂದ್ರರು ಬಲಾಢ್ಯರಿದ್ದು ದ್ವಿತೀಯ ಸ್ಥಾನ ದ್ವಿತೀಯೇಶ ಹಾಗೂ ಪಂಚಮ ಸ್ಥಾನ ಪಂಚಮೇಶರು ಬಲಾಢ್ಯರಿದ್ದ ಉದ್ಯಮದಾರರಿಗೆ ಉತ್ಪಾದಿಸಿದ ಸರಕು-ವಸ್ತುಗಳ ಮಾರಾಟವು ಸಮಸ್ಯೆಯಾಗುವುದಿಲ್ಲ.

೧೬ ಲಗ್ನ-ಲಗ್ನೇಶ, ಭಾಗ್ಯ-ಭಾಗ್ಯೇಶ, ಚತುರ್ಥ-ಚತುರ್ಥೇಶ, ಪಂಚಮ-ಪಂಚಮೇಶ ಹಾಗೂ ರವಿ, ಚಂದ್ರ ಈ ಆರು ಸಂಗತಿಗಳಲ್ಲಿ ಯಾವುದೇ ಮೂರು ಸಂಗತಿಗಳು ಪೂರಕವಿದ್ದ ಉದ್ಯಮದಾರರಿಗೆ ಕಚ್ಚಾ ಮಾಲು-ಸಾಮಗ್ರಿಗಳ ತೊಂದರೆ ಉಂಟಾಗುವುದಿಲ್ಲ.

(೧೭) ರವಿ-ಮಂಗಳ ಹಾಗೂ ಚತುರ್ಥ ಸ್ಥಾನ, ಚತುರ್ಥೇಶರು ಬಲಾಢ್ಯರಿರುವ ಉದ್ಯಮದಾರರಿಗೆ ವಿದ್ಯುತ್ ಪೂರೈಕೆಯು ಸಮಸ್ಯೆಯಾಗುವುದಿಲ್ಲ.

(೧೮) ಶನಿ-ಚಂದ್ರ, ಶನಿ-ಮಂಗಳರ ಯುತಿಯೋಗ ಪ್ರತಿಯೋಗ ದೃಷ್ಟಿಯೋಗವಿದ್ದು ಚತುರ್ಥೇಶ, ಚತುರ್ಥ ಸ್ಥಾನ ಹಾಗೂ ಷಷ್ಠ-ಷಷ್ಠೇಶ ದುರ್ಬಲವಿರುವ ಉದ್ಯಮದಾರರಿಗೆ ಕಳ್ಳ-ಕಾಡುಗುಗಳಿಂದಲೂ ವಾಹನ ಅಪಘಾತಗಳಿಂದಲೂ ಹಾನಿಯುಂಟಾಗುತ್ತದೆ.

(೧೯) ರವಿ, ಗುರು ಹಾಗೂ ಭಾಗ್ಯ-ಭಾಗ್ಯೇಶ, ಸಪ್ತಮ-ಸಪ್ತಮೇಷ, ಚತುರ್ಥ-ಚತುರ್ಥೇಶರು ಬಲಾಢ್ಯರಿರುವ ಉದ್ಯಮದಾರರು ಉತ್ಪಾದಿಸಿದ ವಸ್ತುಗಳನ್ನು ಪರದೇಶಗಳಿಗೆ ನಿರ್ಯಾತ ಮಾಡಬಲ್ಲರು.

(೨೦) ಚತುರ್ಥ-ಚತುರ್ಥೇಶ ಹಾಗೂ ಭಾಗ್ಯ-ಭಾಗ್ಯೇಶ, ರವಿ-ಚಂದ್ರರು ಬಲಾಢ್ಯರಿರುವ ಉದ್ಯಮದಾರರು ಉತ್ಪಾದಿಸಿದ ಸರಕುಗಳ ಮಾರಾಟ-ಸಾಗಾಟ-ನಿರ್ಯಾತಗಳಿಗೆ ವ್ಯತ್ಯಯವುಂಟಾಗುವುದಿಲ್ಲ.



# ೭

# ವ್ಯಾಪಾರವೃತ್ತಿ

ಸ್ವತಂತ್ರ ಉದ್ಯೋಗಸ್ಥರಲ್ಲಿ ಅತ್ಯಧಿಕ ಸಂಖ್ಯೆಯ ವೃತ್ತಿಯವರಿರುವ ಕೃಷಿಕರ ವರ್ಗ ಮೊದಲನೆಯದಾದರೆ ವ್ಯಾಪಾರಸ್ಥರದು ಎರಡನೆಯದು. ಅದಕ್ಕೆಂದೇ " ಉತ್ತಮ ಬೇಸಾಯ, ಮಧ್ಯಮ ವ್ಯಾಪಾರ, ಕನಿಷ್ಟ ನೌಕರಿ" ಎಂಬ ನಾಣ್ಣುಡಿಯಿದೆ. ವ್ಯಾಪಾರ ಹಾಗೂ ವಾಣಿಜ್ಯ ಇವೂ ಕೂಡ ಬಂಡವಲಗಾರಿಕೆ ವ್ಯವಸ್ಥೆಯ ಅವಿಭಾಜ್ಯ ಅಂಗಗಳು. ವ್ಯಾಪಾರ ಹಾಗೂ ವಾಣಿಜ್ಯ ರಂಗದಲ್ಲೂ ಬಂಡವಾಳ ತೊಡಗಿಸುವುದು ಅವಶ್ಯವಾದರೂ ಇದಕ್ಕೂ ಉದ್ಯಮಗಳಿಗೂ ಇರುವ ವ್ಯತ್ಯಾಸವೆಂದರೆ— ಉದ್ಯಮದಲ್ಲಿ ಉತ್ಪಾದನೆ ಇದ್ದರೆ ವ್ಯಾಪಾರ ಹಾಗೂ ವಾಣಿಜ್ಯದಲ್ಲಿ ಕ್ರಯಕ್ಕಾಗಿ ವಸ್ತು-ಒಡವೆಗಳ ವಿನಿಮಯವಿರುತ್ತದೆ. ಆದುದರಿಂದ ವ್ಯಾಪಾರಸ್ಥರ ಕಾರಕ ಗ್ರಹ-ಲಗ್ನ ರಾಶ್ಯಾದಿಗಳಾವವು ಎಂಬುದನ್ನು ಪರಿಶೀಲಿಸುವಾ.

ವ್ಯಾಪಾರ ವೃತ್ತಿಯ ಕಾರಕ ಗ್ರಹ ಯಾವುದೆಂಬುದನ್ನು ತಿಳಿಯುವ ಮೊದಲು ವ್ಯಾಪಾರ ವೃತ್ತಿಯ ಪ್ರಕಾರಗಳನ್ನು ತಿಳಿಯುವುದು ಅವಶ್ಯವು. ಏಕೆಂದರೆ ವ್ಯಾಪಾರ ವೃತ್ತಿಯಲ್ಲಿಯೂ ಅನೇಕ ಪ್ರಕಾರಗಳಿದ್ದು ಒಂದು ವ್ಯಾಪಾರ ವೃತ್ತಿಯಲ್ಲಿ ಯಶಸ್ವಿಯಾಗಬಲ್ಲ ಜಾತಕನು ಇನ್ನೊಂದು ಪ್ರಕಾರದ ವ್ಯಾಪಾರ ವೃತ್ತಿಯಲ್ಲಿ ಯಶಸ್ವಿಯಾಗುವನೆಂದು ಹೇಳಲಿಕ್ಕಾಗದು. ಆದುದ-ರಿಂದ ಮೊದಲು ವ್ಯಾಪಾರ ವೃತ್ತಿಯಲ್ಲಿಯ ಪ್ರಕಾರಗಳನ್ನು ಪರಿಶೀಲಿಸುವಾ.

**ವ್ಯಾಪಾರ ವೃತ್ತಿಯಲ್ಲಿಯ ಪ್ರಕಾರಗಳು.**

ವ್ಯಾಪಾರ ವೃತ್ತಿಯನ್ನು ಎರಡು ಪ್ರಕಾರಗಳನ್ನಾಗಿ ವರ್ಗೀಕರಿಸಬಹುದು.

೧) ಆಯಾತ-ನಿರ್ಯಾತದ ವ್ಯಾಪಾರಿಗಳು, ದಲ್ಲಾಳಿ ವ್ಯಾಪಾರಿಗಳು, ತೋಕವ್ಯಾಪಾರಸ್ಥರು, ಹಂಚಿಕೆದಾರರು ಹೀಗೆ ಒಂದು ಬಗೆಯ ವರ್ಗೀಕರಣ
೨) ವಿಭಿನ್ನ ವಸ್ತು-ಒಡವೆಗಳ ಸರಕು-ಸಾಮಾಗ್ರಿಗಳ ವ್ಯಾಪಾರ ವೃತ್ತಿಯದು

ಈ ಎರಡು ಪ್ರಕಾರದ ವ್ಯಾಪಾರ ವೃತ್ತಿಯ ಕಾರಕ ಗ್ರಹ- ಲಗ್ನ-ಸ್ಥಾನ-ರಾಶ್ಯಾದಿಗಳಾವವು ಎಂಬುದನ್ನು ಪರಿಶೀಲಿಸುವಾ.

ವ್ಯಾಪಾರ ಹಾಗೂ ವಾಣಿಜ್ಯಗಳು ಆಂತರಿಕವಾಗಿರಬಹುದು, ಬಾಹ್ಯವಾಗಿರಬಹುದು. ಅದು ಆಂತರಿಕವಾದಾಗ ದೇಶದೊಳಗೆ ಈ ಚಟುವಟಿಕ ನಡೆಸಲಾಗುತ್ತದೆ. ಬಾಹ್ಯವಾದಾಗ ಒಂದು ದೇಶದಿಂದ ಇನ್ನೊಂದು ದೇಶಕ್ಕೆ ಅಥವಾ ಅನೇಕ ಪರದೇಶಗಳಿಗೆ ಅದು ವಿಸ್ತಾರಗೊಂಡಿರುತ್ತದೆ. ಅಂತೆಯೇ ಆಯಾತ-ನಿರ್ಯಾತ ಎಂದು ದ್ವಿಮುಖವಾಗಿದೆ. ಇದರಂತೆ ಯಾವನೊಬ್ಬ ವ್ಯಾಪಾರಸ್ಥನು ಸ್ವತಃ ಬಂಡವಾಳನ್ನು ತೊಡಗಿಸದೆ ವಸ್ತು-ಒಡವೆಗಳ ವಿನಿಮಯವನ್ನು ಏರ್ಪಡಿಸುವ ಕಾರಣದಿಂದಾಗಿ ತನ್ನ ಪರಿಶ್ರಮಕ್ಕಾಗಿ ದಲ್ಲಾಳಿಯನ್ನು (ಕಮೀಶನ) ಪಡೆಯುವ ಈ ಪ್ರಕಾರದ ವ್ಯಾಪಾರಸ್ಥರಿಗೆ ಕಮಿಶನ್ ಏಜೆಂಟರೆಂದೂ ಹಂಚಿಕೆದಾರರೆಂದೂ ಕರೆಯುತ್ತಾರೆ. ಇದರಂತೆ ವಸ್ತುಗಳನ್ನು ದೊಡ್ಡ ಪ್ರಮಾಣದಲ್ಲಿ ಆಯಾತಿ (ಹೋಲಸೇಲ) ದಲ್ಲಿ ಖರಿದಿಸಿ ಸಣ್ಣ ಸಣ್ಣ ವ್ಯಾಪಾರಸ್ಥರಿಗೆ ಹೆಚ್ಚಿನ ದರದಲ್ಲಿ ಮಾರಾಟ ಮಾಡುವ ಈ ವ್ಯಾಪಾರಸ್ಥರಿಗೆ ಠೋಕ ವ್ಯಾಪಾರಸ್ಥರೆನ್ನುತ್ತಾರೆ. ಇದರಂತೆ ಅಲ್ಪ ಬಂಡವಾಳ ತೊಡಗಿಸಿ ಅಲ್ಪ ಪ್ರಮಾಣದಲ್ಲಿ ವಸ್ತು-ಸರಕುಗಳನ್ನು ಖರಿದಿಸಿ ಚಿಲ್ಲರೆ ಮಾರುವ ವ್ಯಾಪಾರಸ್ಥರಿಗೆ ಕಿರುಕಳ ವ್ಯಾಪಾರಸ್ಥರೆನ್ನುತ್ತಾರೆ.

**ಕಾರಕ ಗ್ರಹ:**— ಆಯಾತ-ನಿರ್ಯಾತ ವ್ಯಾಪಾರಿಯೇ ಇರಲಿ, ಠೋಕ ವ್ಯಾಪಾರಸ್ಥರೇ ಇರಲಿ, ಹಂಚಿಕೆದಾರರೇ ಇರಲಿ, ದಲ್ಲಾಳಿ ವ್ಯಾಪಾರಸ್ಥರೆ ಇರಲಿ, ಕಿರುಕಳ ವ್ಯಾಪಾರಸ್ಥರೆ ಇರಲಿ ಯಾವುದೇ ಪ್ರಕಾರದ ಯಾವುದೇ ಸ್ವರೂಪದ ವ್ಯಾಪಾರವಿರಲಿ, ವ್ಯಾಪಾರದ ಹಾಗೂ ವ್ಯಾಪಾರಸ್ಥರ ಕಾರಕ ಗ್ರಹವೆಂದರೆ ಬುಧನು. ಬುಧನು ಜಾತಕದಲ್ಲಿ ಬಲಾಢ

ನಿರದೆ ಯಾರೂ ಶ್ರೇಷ್ಠ ವ್ಯಾಪಾರಸ್ಥರಾಗಲಾರರು. ಯಾವುದೇ ಪ್ರಕಾರದ ಯಾವುದೇ ಸ್ವರೂಪದ ವ್ಯಾಪಾರ ವೃತ್ತಿ ಕೈಕೊಳ್ಳಲು ಜಾತಕದಲ್ಲಿ ಬುಧನು ರಾಶಿ ಬಲದವನೂ ಸ್ಥಾನ ಬಲದವನೂ ಇರಬೇಕು.

ಇನ್ನು ವಿಭಿನ್ನ ಸ್ವರೂಪದ ವ್ಯಾಪಾರಕ್ಕೆ ಬುಧನೊಂದಿಗೆ ಇತರ ಗ್ರಹಗಳ ಬಲಾಬಲವನ್ನೂ ಪರಿಶೀಲಿಸಬೇಕಾಗುತ್ತದೆ. ದಲ್ಲಾಳಿ (ಕಮಿಶನ್ ಏಜೆಂಟ) ವ್ಯಾಪಾರಸ್ಥರಿಗೆ ಹಾಗೂ ಹಂಚಿಕೆದಾರರಿಗೆ ಬುಧನೊಂದಿಗೆ ಮಂಗಳನ ಬಲಾಬಲವನ್ನೂ ಪರಿಶೀಲಿಸಬೇಕು. ಆದರೆ ಇಲ್ಲಿ ಮಹತ್ವದ ಅಂಶವೆಂದರೆ— ಬುಧನು ರಾಶಿಬಲದವನೂ ಸ್ಥಾನ ಬಲದವನೂ ಇದ್ದರೆ ಮಂಗಳ (ಕುಜ) ನು ಕೇವಲ ರಾಶಿಬಲದವನಿದ್ದರಾಯಿತು. ಇದರಂತೆ ಶೋಕಿ ವ್ಯಾಪಾರಸ್ಥರಿಗೆ ಬುಧನೊಂದಿಗೆ ಮಂಗಳ - ಶುಕ್ರರ ಬಲಾಬಲವನ್ನೂ ಪರಿಶೀಲಿಸಬೇಕು. ಇಲ್ಲಿಯೂ ಅಷ್ಟೇ, ಬುಧನು ರಾಶಿಬಲದವನೂ ಸ್ಥಾನಬಲದವನೂ ಇದ್ದರೆ ಶುಕ್ರ-ಮಂಗಳರು ಕೇವಲ ರಾಶಿಬಲದವರಿರಬಹುದು. ಇದರಂತೆ ಒಬ್ಬರಿಗಿಂತ ಹೆಚ್ಚು ಮಂದಿ ಕೂಡಿ ಪಾಲುಗಾರಿಕೆಯಿಂದ ವ್ಯಾಪಾರ ಮಾಡಲು ಕಂಪನಿ - ಫರ್ಮ ಪತಿಯಿಂದ ವ್ಯಾಪಾರ ಮಾಡಲು ಬುಧನೊಂದಿಗೆ ಶುಕ್ರ-ಚಂದ್ರರನ್ನು ಪರಿಶೀಲಿಸಬೇಕು. ಇಲ್ಲಿಯೂ ಬುಧನು ರಾಶಿಬಲದವನೂ ಸ್ಥಾನಬಲದವನೂ ಇದ್ದರೆ ಶುಕ್ರ-ಚಂದ್ರರ ಕೇವಲ ರಾಶಿಬಲದವರಿರಬೇಕಾಗುತ್ತದೆ.

ಇದರಂತೆ ದೇಶ-ವಿದೇಶಗಳಿಂದ ಆಯಾತ-ನಿರ್ಯಾತದಂತಹ ದೊಡ್ಡ ಪ್ರಮಾಣದ ವ್ಯಾವಾರ ಮಾಡುವ ವ್ಯಾಪಾರಸ್ಥರಿಗೆ ಬುಧನಂತೂ ಬಲಾಢ್ಯ-ನಿರಲೇಬೇಕು. ಅಲ್ಲದೆ ಈ ಹಿಂದೆ ಉದ್ಯಮ ವೃತ್ತಿಯಲ್ಲಿ ಹೇಳಿದಂತೆ ವಿಭಿನ್ನ ಲಗ್ನಗಳ ಯೋಗಕಾರಕಗ್ರಹಗಳು ಬಲಾಢ್ಯವಿರಬೇಕು. ವಿಶೇಷತಃ ಈ ವರ್ಗದ ವ್ಯಾಪಾರಸ್ಥರಿಗೆ ರವಿ— ಗುರುಗಳು ಬಲಾಢ್ಯರಿರಬೇಕು. ಇಲ್ಲಿಯೂ ಅಷ್ಟೇ, ಬುಧನು ರಾಶಿ ಬಲದವನೂ ಸ್ಥಾನಬಲದವನಿದು ವಿಭಿನ್ನ ಗ್ರಹಗಳಲ್ಲಿನ ಕಾರಕ ಗ್ರಹಗಳು ಹಾಗೂ ರವಿ–ಗುರುಗಳು ಕೇವಲ ರಾಶಿ ಬಲದವರಿದ್ದರಾಯಿತು. ಇನ್ನು ಕಿರುಕಳ ವ್ಯಾಪಾರಸ್ಥರಿಗೆ ಬುಧನು

ಕೇವಲ ರಾಶಿ ಬಲದವನಿದ್ದರೆ ನಡೆಯುತ್ತದೆ.

**ಕಾರಕ ಸ್ಥಾನ :—** ಸ್ಥಾನದೃಷ್ಟಿಯಿಂದ ಪರಿಶೀಲಿಸಿದರೆ ನೈಸರ್ಗಿಕ ವ್ಯಾಪಾರದ ಸ್ಥಾನವಾದ ದಶಮ ಸ್ಥಾನ, ದಶಮೇಶರೆಂಬೂ ಎಲ್ಲ ಪ್ರಕಾರದ ವ್ಯಾಪಾರಸ್ಥರಿಗೆ ಬಲಾಢ್ಯರಿರಬೇಕು. ಅಲ್ಲದೆ ವ್ಯಾಪಾರ ವೃತ್ತಿಯಲ್ಲಿ ಮಾತುಗಾರಿಕೆಯೇ ಮುಖ್ಯವಿರುವದರಿಂದ ಮಾತುಗಾರಿಕೆಯ ಸ್ಥಾನವಾದ ದ್ವಿತೀಯ ಸ್ಥಾನ ಹಾಗೂ ದ್ವಿತೀಯೇಶರು ಎಲ್ಲ ಪ್ರಕಾರದ ವ್ಯಾಪಾರಸ್ಥರಿಗೆ ಬಲಾಢ್ಯರಿರಬೇಕಾಗುತ್ತದೆ. ಅಲ್ಲದೆ ವಿಭಿನ್ನ ಪ್ರಕಾರದ ವ್ಯಾಪಾರಸ್ಥರಿಗೆ ವಿಭಿನ್ನ ಸ್ಥಾನಗಳು ಕಾರಕವಿರುತ್ತವೆ.

ಠೋಕ ವ್ಯಾಪಾರಸ್ಥರಿಗೆ ದಶಮ, ದ್ವಿತೀಯದೊಂದಿಗೆ ಪಂಚಮ ಸ್ಥಾನವು ಕಾರಕವಿದ್ದು ಪಂಚಮ ಸ್ಥಾನ ಹಾಗೂ ಪಂಚಮೇಶರೂ ಬಲಾಢ್ಯರಿರಬೇಕಾಗುತ್ತದೆ.ಇದರಂತೆ ದಳ್ಳಾಳಿ ವ್ಯಾಪಾರಸ್ಥರಿಗೂ(ಕಮೀಶನ ಏಜೆಂಟರಿಗೂ) ಹಂಚಿಕೆದಾರರಿಗೂ ದಶಮ-ದ್ವಿತೀಯ ಸ್ಥಾನದೊಂದಿಗೆ ಅಷ್ಟಮ ಸ್ಥಾನ ಕಾರಕವಿದ್ದು ಅಷ್ಟಮೇಶ ಹಾಗೂ ಅಷ್ಟಮ ಸ್ಥಾನ ಬಲಾಢ್ಯರಿರಬೇಕಾಗುತ್ತದೆ. ಆದರೆ ಆಯಾತ-ನಿರ್ಯಾತದಂಥ ದೊಡ್ಡ ಪ್ರಮಾಣದ ವ್ಯಾಪಾರಸ್ಥರಿಗೆ ಲಗ್ನ, ಭಾಗ್ಯ, ಸಪ್ತಮ ಸ್ಥಾನಗಳು ಕಾರಕವಿದ್ದು ಲಗ್ನೇಶ-ಸಪ್ತಮೇಶ-ಭಾಗ್ಯೇಶರು ಹಾಗೂ ಈ ಸ್ಥಾನಗಳು ಬಲಾಢ್ಯವಿರಬೇಕಾಗುತ್ತದೆ.

ಇದರಂತೆ ಒಬ್ಬರಿಗಿಂತ ಹೆಚ್ಚು ಮಂದಿ ಕೂಡಿ ಪಾಲುಗಾರಿಕೆ ವ್ಯಾಪಾರ ಮಾಡುವವರಿಗೆ ಕಂಪನಿ-ಫರ್ಮ ಮೊದಲಾದ ಸಂಸ್ಥೆ ಪದ್ಧತಿಯಿಂದ ವ್ಯಾಪಾರ-ಮಾಡುವವರಿಗೆ ಸಪ್ತಮ, ಚತುರ್ಥ ಸ್ಥಾನಗಳು ಕಾರಕವಿದ್ದು ಸಪ್ತಮೇಶ-ಚತುರ್ಥೇಶ ಬಲಾಢ್ಯರಿರಬೇಕಾಗುತ್ತದೆ. ಕೆಲವೇ ಜನರಿರುವ ಪಾಲುಗಾರಿಕೆ ವ್ಯಾಪಾರಕ್ಕೆ ಸಪ್ತಮ ಸ್ಥಾನ-ಸಪ್ತಮೇಶ ಕಾರಕರಿದ್ದರೆ, ಕಂಪನಿ-ಫರ್ಮಗಳಿರುವ ವ್ಯಾಪಾರಕ್ಕೆ ಚತುರ್ಥ ಸ್ಥಾನ-ಚತುರ್ಥೇಶರು ಕಾರಕರಿರುತ್ತಾರೆ.

**ಲಗ್ನ :—** ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ, ಕರ್ಕ, ಸಿಂಹ, ಕನ್ಯಾ, ಧನು, ಮಕರ, ಮೀನ ಈ ಲಗ್ನದವರು ಯಾವುದೇ

ಪ್ರಕಾರದ ವ್ಯಾಪಾರದಲ್ಲಿ ಯಶಸ್ವಿಯಾಗುತ್ತಾರೆ. ಅರ್ಥಾತ್ ಇವು ವ್ಯಾಪಾರಸ್ಥರ ಲಗ್ನಗಳಿರುತ್ತವೆ. ಆಯಾತ-ನಿರ್ಯಾತಗಳಂಥ ದೊಡ್ಡ ಪ್ರಮಾಣದ ವ್ಯಾಪಾರಸ್ಥರಿಗೆ ಮೇಷ, ವೃಷಭ, ಮಿಥುನ, ಸಿಂಹ, ವೃಶ್ಚಿಕ, ಧನು, ಮೀನ ಈ ಲಗ್ನಗಳು ಕಾರಕವಿದ್ದರೆ ಕಮೀಶನ್ ಏಜೆಂಟರಿಗೂ ಹಂಚಿಕೆದಾರರಿಗೂ ಮೇಷ, ಕರ್ಕ, ಸಿಂಹ, ವೃಶ್ಚಿಕ, ಧನು, ಮಕರ ಈ ಲಗ್ನಗಳು ಕಾರಕವಿರುತ್ತವೆ. ಆದರೆ ಠೋಕ ವ್ಯಾಪಾರಸ್ಥರಿಗೆ (ಹೋಲಸೇಲ) ಮೇಷ, ವೃಷಭ, ಮಿಥುನ, ಕರ್ಕ, ತುಳಾ, ಧನು, ಮಕರ, ಕುಂಭ ಲಗ್ನಗಳು ಕಾರಕವಿರುತ್ತವೆ. ಇದರಂತೆ ಫರ್ಮ-ಕಂಪನಿ ಪಾಲುಗಾರಿಕೆಯ ವ್ಯಾಪಾರಸ್ಥರಿಗೆ ಮೇಷ, ಮಿಥುನ, ಕರ್ಕ, ಕನ್ಯಾ, ತುಳಾ, ವೃಶ್ಚಿಕ, ಧನು, ಕುಂಭ, ಮೀನ ಈ ಲಗ್ನಗಳು ಕಾರಕವಿರುತ್ತವೆ.

**ರಾಶಿ :—** ರಾಶಿ ದೃಷ್ಟಿಯಿಂದ ನೋಡಿದರೆ ಮಿಥುನ, ತುಳಾ, ಕುಂಭ, ವೃಷಭ, ಕನ್ಯಾ, ಮೀನ ಈ ರಾಶಿಯವರು ಯಾವುದೇ ಪ್ರಕಾರ ವ್ಯಾಪಾರದಲ್ಲಿ ಯಶಸ್ವಿಯಾಗುತ್ತಾರೆ. ಅದರಲ್ಲಿಯೂ ಮಿಥುನ, ತುಳಾ, ಕುಂಭ ರಾಶಿಯವರಂತೂ ಜನ್ಮತಃ ವ್ಯಾಪಾರಸ್ಥರಾಗಿಯೇ ಹುಟ್ಟಿರುತ್ತಾರೆ; ಅರ್ಥಾತ್ ವ್ಯಾಪಾರದಲ್ಲಿ ಪಳಗಿದವರೂ, ಪ್ರವೀಣರೂ, ಪ್ರಖ್ಯಾತರೂ ಆಗುತ್ತಾರೆ. ಆದರೆ ಠೋಕ ಹಾಗೂ ಕಮೀಶನ್ ಏಜೆಂಟ, ಹಂಚಿಕೆದಾರ ವ್ಯಾಪಾರಸ್ಥರು ಹೆಚ್ಚಾಗಿ ಮೇಷ, ಮಿಥುನ, ಸಿಂಹ, ತುಳಾ, ವೃಶ್ಚಿಕ, ಧನು, ಮಕರ, ಕುಂಭ ಈ ರಾಶಿಯವರಿರುತ್ತಾರೆ. ಆದರೆ ನಿರ್ದಿಷ್ಟ ರಾಶಿಯವರೇ ಆಯಾತ-ನಿರ್ಯಾತ ವ್ಯಾಪಾರಸ್ಥರಿರುತ್ತಾರೆ ಎಂಬ ನಿಯಮವಿಲ್ಲದಿದ್ದರೂ ಮಿಥುನ, ತುಳಾ, ಕುಂಭ ರಾಶಿಯವರಿರುವುದು ಕಂಡುಬರುತ್ತದೆ. ಇದರಂತೆ ಪಾಲುಗಾರಿಕೆ ಹಾಗೂ ಕಂಪನಿ-ಫರ್ಮಗಳಿಂದ ವ್ಯಾಪಾರ ಮಾಡುವವರು ಹೆಚ್ಚಾಗಿ ವೃಷಭ, ಮಿಥುನ, ಕರ್ಕ, ಕನ್ಯಾ, ತುಳಾ, ಕುಂಭ, ಮೀನ ಈ ರಾಶಿಯವರಿರುವುದು ಕಂಡುಬರುತ್ತದೆ.

ಇನ್ನು ವಿಭಿನ್ನ ವಸ್ತುಗಳ ವ್ಯಾಪಾರಸ್ಥರ ಕಾರಕ ಗ್ರಹ ಲಗ್ನಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

ಭಿನ್ನ ಭಿನ್ನ ವಸ್ತು-ಒಡವೆ, ಸರಕು-ಸಾಮಗ್ರಿಗಳ ವ್ಯಾಪಾರ ಮಾಡಲು ಭಿನ್ನ ಭಿನ್ನ ಗ್ರಹಗಳ ಬಲಾಬಲವನ್ನು ಏಕೆ ಪರಿಶೀಲಿಸಬೇಕು ಎಂಬುದು ಸಮಸ್ಯೆಯೇ ಸರಿ. ಉದಾಹರಣೆಗೆ— ಯಾವನೊಬ್ಬ ಬೇಸಾಯ ಗಾರನು ಗೋದಿ ಬೆಳೆಯುವುದರಲ್ಲಿ ನಿಪುಣನಿದ್ದರೆ ಅವನಿಗೆ ಬತ್ತ ಬೆಳೆ ಯಲು ಬರುವುದಿಲ್ಲದೆಂದು ಅರ್ಥ ಮಾಡಬಹುದ? ಹತ್ತಿ ಬೆಳೆಯುವ ಬೇಸಾಯುಗಾರ ಬೇರೆ, ಜೋಳ ಬೆಳೆಯುವ ಬೇಸಾಯುಗಾರ ಬೇರೆ ಹೀಗ ವಿಂಗಡಿಸಬಹುದೆ? ಹತ್ತಿ ಬೆಳೆಯುವ ಬೇಸಾಯುಗಾರನಿಗ ಬತ್ತ ಬೆಳೆ- ಯಲು ಅದೇಕೆ ಬರುವುದಿಲ್ಲ? ಭಿನ್ನ ಭಿನ್ನ ಧಾನ್ಯಗಳ ಬೆಳೆಗಳನ್ನು ಬೆಳೆಯಲು ಅಲ್ಲಿಯ ಹವೆ-ಭೂಮಿ-ಮಳೆಗಳೇ ಕಾರಣವೇ ವಿನಹ ಹತ್ತಿ ಬೆಳೆಯುವವನ ಜಾತಕದಲ್ಲಿರುವ ಯೋಗಗಳು ಬತ್ತ ಬೆಳೆಯುವ- ವನ ಜಾತಕದಲ್ಲಿ ಇರುವುದಿಲ್ಲ ಎಂಬ ಅರ್ಥವಲ್ಲ ಒಂದು ವೇಳೆ ಹೀಗೆ ಅರ್ಥ ಹಚ್ಚುತ್ತಿದ್ದರೆ ಎಲ್ಲ ಬತ್ತ ಬೆಳೆಯುವ ಜನರ ಜಾತಕದಲ್ಲಿ ಒಂದೇ ಪ್ರಕಾರದ ಗ್ರಹಗತಿಗಳು ಇರಬಹುದಾಗಿತ್ತು; ಹಾಗ ಇರುವುದಿಲ್ಲ. ಆದರೆ ಯಾವುದೇ ಬೆಳೆ ಬೆಳೆಯಲು ಎಲ್ಲ ಕೃಷಿ ವೃತ್ತಿಯುವರ ಕಾರಕ ಗ್ರಹ ಲಗ್ನ ಸ್ಥಾನಾದಿಗಳು ಮಾತ್ರ ಸಾಮಾನ್ಯವಾಗಿ ಒಂದೇ ಇರುತ್ತವೆ. ಹಾಗೆಯೇ ಯಾವುದೇ ಪ್ರಕಾರದ ಯಾವುದೇ ವಸ್ತುವಿನ ವ್ಯಾಪಾರ ಮಾಡುವಂಥವರ ಸ್ಥಾನ ಕಾರಕ ಗ್ರಹವಾದ ಬುಧನಂತೂ ಬಲಾಢ್ಯನಿರಲೇ ಬೇಕು. ಆದರೆ ವಿಭಿನ್ನ ವಸ್ತುಗಳ ಕಾರಕ ಗ್ರಹಗಳು ವಿಭಿನ್ನವಿರುವುದ- ರಿಂದ ಬುಧನೊಂದಿಗೆ ಆಯಾ ವಸ್ತುವಿನ ಕಾರಕ ಗ್ರಹಗಳ ಮೇರೆಗೆ ವ್ಯಾಪಾರ ಮಾಡಿದಲ್ಲಿ ಹೆಚ್ಚು ಲಾಭವಾಗುತ್ತದೆ. ಇದಲ್ಲದೆ ಕಾರಕ ಗ್ರಹಗಳಿರುವ ವಸ್ತುಗಳು ಜಾತಕನಿಗೆ ಸುಲಭವಾಗಿ ಲಭ್ಯವಿರುತ್ತವೆ. ಆದುದರಿಂದ ಭಿನ್ನ ಭಿನ್ನ ವಸ್ತುಗಳ ವ್ಯಾಪಾರ ಮಾಡಲು ಕಾರಕ ಗ್ರಹ ಗಳಾವವು ಎಂಬುದನ್ನು ಪರಿಶೀಲಿಸುವಾ.

ವಸ್ತುಗಳು, ಸರಕು-ಸಾಮಗ್ರಿಗಳು ಅಸಂಖ್ಯವಿರುವುದರಿಂದ ಕೆಲ ಪ್ರಮುಖ ವಸ್ತುಗಳ ಕಾರಕ ಗ್ರಹಗಳ ಬಗೆಗೆ ಮಾತ್ರ ಇಲ್ಲಿ ವಿವೇಚಿಸ ಲಾಗಿದೆ. ಇದಲ್ಲದೆ ವಿಭಿನ್ನ ವಸ್ತುಗಳ ಕಾರಕಗಳಾವವು ಎಂಬುದರ

ವಿಷಯವಾಗಿ ಇದೇ ಗ್ರಂಥದ ಉದ್ಯಮ ವೃತ್ತಿಯ ೫ನೇ ಪ್ರಕರಣದಲ್ಲಿ ೧೬೩ ಪುಟದಿಂದ ೧೬೮ ಪುಟದವರೆಗೆ ಕೊಡಲಾಗಿದೆ.

೧) ಆಲಮೇರಾ, ಟ್ರೇಜರಿ, ಭಾರಿ ಬೆಲೆಯುಳ್ಳ ವಸ್ತು, ಒಡವೆ, ಬಂಗಾರ-ಬೆಳ್ಳಿ-ರೇಶಿಮೆ-ಉಣ್ಣೆ-ವಿಲಾಸೀ ಹಾಗೂ ಅಲಂಕಾರಕ ವಸ್ತು, ಸ್ತ್ರೀಯರ ಉಪಯೋಗದ ಎಲ್ಲ ಪ್ರಕಾರದ ವಸ್ತುಗಳು ಸೌಂದರ್ಯವರ್ಧಕಗಳು, ಸುಗಂಧ ದ್ರವ್ಯ, ಹೂ, ಚಲಚಿತ್ರ ಹಾಗೂ ಹಾಗೂ-ಫೋಟೋಗ್ರಾಫಿಗೆ ಸಂಬಂಧಿಸಿದ ಉಪಕರಣಗಳು, ಎಲ್ಲ ಪ್ರಕಾರದ ಸ್ಟೇಶನರೀ ವಸ್ತುಗಳ, ಸ್ಟೇನಲೆಸ್ ಸ್ಟೀಲ ಭಾಂಡಿಗಳ ಹಾಗೂ ನಯನಮನೋಹರ ವಸ್ತುಗಳು, ಎಲ್ಲ ಪ್ರಕಾರದ ಜವಳ ವಸ್ತುಗಳಿಗೆ ಅದರಲ್ಲಿಯೂ ಟೆರಿಲೀನ್-ಟೆರಿಕಾಟ ಮೊದಲಾದ ವಸ್ತುಗಳ, ಎಲ್ಲ ಬಗೆಯ ವಾಚ-ಗಡಿಯಾರಗಳಿಗೆ ಇವೇ ಮೊದಲಾದ ವಸ್ತುಗಳಿಗೆ ಶುಕ್ರನು ಕಾರಕನಿದ್ದು ಜಾತಕದಲ್ಲಿ ಶುಕ್ರನು ಬಲಾಢ್ಯನಿದ್ದ ವ್ಯಕ್ತಿಗಳು (ಬುಧನೊಂದಿಗೆ) ಮೇಲೆ ಬರೆದ ವಸ್ತುಗಳ ವ್ಯಾಪಾರ ಮಾಡಿದಲ್ಲಿ ಹೆಚ್ಚಿನ ಲಾಭ ಗಳಿಸುತ್ತಾರೆ.

೨) ಎಲ್ಲ ಪ್ರಕಾರದ ಕಾಗದ ಹಾಗೂ ಮುದ್ರಣಕ್ಕೆ ಸಂಬಂಧಿಸಿದ, ಪುಸ್ತಕಗಳಿಗೆ ಸಂಬಂಧಿಸಿದ ವ್ಯಾಪಾರ, ಯುವಕರು ಹಾಗೂ ವಿದ್ಯಾರ್ಥಿಗಳು ಉಪಯೋಗಿಸುವ ವಸ್ತುಗಳ ವ್ಯಾಪಾರ, ಕಿರಾಣಿ, ದವಸ-ಧಾನ್ಯಗಳ ವ್ಯಾಪಾರ, ಟೈಪರೈಟಿಂಗ ಉಪಕರಣಗಳು, ಇವೇ ಮೊದಲಾದ ವಸ್ತುಗಳಿಗೆ ಬುಧನು ಕಾರಕನು.

೩) ಎಲ್ಲ ಪ್ರಕಾರದ ವಾಹನಗಳು, ಮಶಿನರಿಗಳು, ಯಂತ್ರಗಳು, ರೇಡಿಯೋ-ಟೀವಿ ಉಪಕರಣಗಳು, ತಂಬಾಕಕ್ಕೆ ಸಂಬಂಧಿಸಿದ ವಸ್ತುಗಳು, ಮದ್ದು-ಗುಂಡುಗಳ ವ್ಯಾಪಾರ, ವಿದ್ಯುತ್ ಉಪಕರಣ, ವಿದ್ಯುತ್ ವಸ್ತುಗಳು, ತಾಮ್ರಕ್ಕೆ ಸಂಬಂಧಿಸಿದ ವಸ್ತುಗಳು ಇವೇ ಮೊದಲಾದ ವಸ್ತುಗಳಿಗೆ ಮಂಗಳನು ಕಾರಕನಿದ್ದು, ಮಂಗಳನು ಬಲಾಢ್ಯನಿರುವ ವ್ಯಾಪಾರಸ್ಥರು ಈ ವಸ್ತುಗಳ ವ್ಯಾಪಾರದಲ್ಲಿ ಹೆಚ್ಚಿನ ಲಾಭ ಗಳಿಸುತ್ತಾರೆ.

೪) ಬೆಲ್ಲ-ಸಕ್ಕರೆ-ಸಿಹಿ ಹಾಗೂ ಮಧುರ ಪದಾರ್ಥಗಳ ವ್ಯಾಪಾರ, ಶಿಕ್ಷಣಕ್ಕೆ ಸಂಬಂಧಿಸಿದ, ವಿದ್ಯಾರ್ಥಿಗಳಿಗೆ ಸಂಬಂಧಿಸಿದ, ಮಠಾಧೀಶರಿಗೆ ಸಂಬಂಧಿಸಿದ ವಸ್ತುಗಳು ಮೊದಲಾದ ವಸ್ತುಗಳ ವ್ಯಾಪಾರಕ್ಕೆ ಗುರುವು ಕಾರಕನು.

೫) ಎಲ್ಲ ಪ್ರಕಾರದ ಎಣ್ಣೆ-ಕಟ್ಟಿಗೆ-ಕಬ್ಬಿಣ-ಉಕ್ಕು-ಗೊಬ್ಬರ ಮೊದಲಾದ ಕೃಷಿಕರು ಉಪಯೋಗಿಸುವ ವಸ್ತುಗಳು ಹಾಗೂ ಉಪಕರಣಗಳು, ಕಟ್ಟಡಕ್ಕೆ ಬೇಕಾಗಬಹುದಾದ ಕಲ್ಲು-ಇಟ್ಟಂಗಿ-ಸುಣ್ಣ-ಸಿಮೆಂಟ-ಉಸುಕು ಮೊದಲಾದ ವಸ್ತುಗಳು. ಎಲ್ಲ ಪ್ರಕಾರದ ಗ್ಯಾಸುಗಳು, ಗ್ರಾಮವಾಸಿಗಳು ಉಪಯೋಗಿಸುವ ವಸ್ತುಗಳು, ವೃದ್ಧರು ಉಪಯೋಗಿಸುವ ವಸ್ತುಗಳು, ಚರ್ಮ-ಕಿರಾಣಿ-ಹಳೇ (ಒಡಕತಡಕ ಸಹಿತ) ವಸ್ತುಗಳು ಇವೇ ಮೊದಲಾದ ವಸ್ತುಗಳಿಗೆ ಶನಿಯು ಕಾರಕನಿದ್ದು, ಶನಿಯು ಬಲಾಢ್ಯ ವಿದ್ದ ವ್ಯಕ್ತಿಗಳು ಮೇಲೆ ಬರೆದ ವಸ್ತುಗಳ ವ್ಯಾಪಾರದಲ್ಲಿ ನಿಷ್ಣಾತರಾಗುತ್ತಾರೆ.

೬) ಎಲ್ಲ ಪ್ರಕಾರದ ತಿನ್ನುಣ್ಣುವ ವಸ್ತುಗಳು, ಖಾದ್ಯ-ಆಹಾರ ಸಾಮುಗ್ರಿಗಳು, ನೀರು ಹಾಗೂ ಪ್ರವಾಹಿಗೆ ಸಂಬಂಧಿಸಿದ ವಸ್ತುಗಳು, ಚಿಕ್ಕ ಮಕ್ಕಳು ಹಾಗೂ ಬಾಣಂತಿಯರು ಉಪಯೋಗಿಸುವ ವಸ್ತುಗಳು ಇವೇ ಮೊದಲಾದ ವಸ್ತುಗಳಿಗೆ ಚಂದ್ರನು ಕಾರಕನಿದ್ದು, ಚಂದ್ರನು ಬಲಾಢ್ಯನಿರುವ ವ್ಯಕ್ತಿಗಳು ಮೇಲ್ಕಂಡ ವಸ್ತುಗಳ ವ್ಯಾಪಾರದಲ್ಲಿ ಪಳಗುತ್ತಾರೆ.

೭) ಸರಕಾರದವರು, ರಾಜಕಾರಣಿಗಳು, ಅಧಿಕಾರಿಗಳು, ಗಿರಣಿ-ಕಾರಖಾನೆ-ಟಾಕೀಜಗಳ ಮಾಲಕರು ಇವರೇ ಮೊದಲಾದ ಸಮಾಜದ ಪ್ರತಿಷ್ಠಿತ ಹಾಗೂ ಗಣ್ಯ ವ್ಯಕ್ತಿಗಳು ಖರಿದಿಸುವ ಎಲ್ಲ ವಸ್ತು, ಪರದೇಶದ ಆಯಾತ-ನಿರ್ಯಾತದ ಎಲ್ಲ ವಸ್ತುಗಳು ಇವೇ ಮೊದಲಾದ ವಸ್ತುಗಳಿಗೆ ರವಿಯು ಕಾರಕನಿದ್ದು, ರವಿಯು ಬಲಾಢ್ಯನಿರುವ ಜಾತಕದವರು ಮೇಲೆ ಬರೆದ ವಸ್ತುಗಳ ವ್ಯಾಪಾರದಲ್ಲಿ ಯಶ ಗಳಿಸುವರು.

(೮) ಮದ್ಯ-ಮೀನು-ಮಾಂಸಾದಿ ವ್ಯಾಪಾರಕ್ಕೆ ರಾಹುಕಾರಕನಿರುತ್ತಾನೆ.

ಇದಲ್ಲದೆ ಕೆಲ ವಸ್ತುಗಳಿಗೆ ಎರಡೆರಡು ಗ್ರಹಗಳು ಕಾರಕವಿರುತ್ತವೆ. ಉದಾಹರಣೆಗೆ— ಕಿರಾಣಿ ವ್ಯಾಪಾರಕ್ಕೆ ಬುಧ-ಶನಿಯರು ಕಾರಕರಿದ್ದರೆ, ವಿದೇಶಿ ಬೆಲೆಯುಳ್ಳ ವಸ್ತುಗಳಿಗೆ ರವಿ-ಶುಕ್ರರು ಕಾರಕರಿರುತ್ತಾರೆ. ವಿದೇಶಗಳಿಂದ ಬರುವ ಯಂತ್ರ—ಮಶಿನರಿಗಳಿಗೆ ರವಿ— ಮಂಗಳರು ಕಾರಕರು. ಇದರಂತೆ ವಿದೇಶಗಳಿಗೆ ಕಳಿಸಿ ಕೊಡುವ ಮಶಿನರಿ ಹಾಗೂ ಮಶಿನರಿ ಬಿಡಿ ಭಾಗಗಳಿಗೆ ರವಿ—ಶನಿ-ಮಂಗಳರು ಕಾರಕರು. ಗ್ರಾಮೀಣ ಹಾಗೂ ಸ್ವದೇಶಿ ವಸ್ತುಗಳಿಗೆ ಶನಿಯು ಕಾರಕನು. ಹೀಗೆ ವಿಭಿನ್ನ ವಸ್ತುಗಳಿಗೆ ವಿಭಿನ್ನ ಗ್ರಹಗಳು ಕಾರಕವಿರುತ್ತವೆ.

**ಕಾರಕ ಲಗ್ನ:**—(೧) ರವಿಯ ಗುಣಧರ್ಮದ ವಸ್ತುಗಳ ವ್ಯಾಪಾರಸ್ಥರಿಗೆ ಮೇಷ, ಕರ್ಕ, ಸಿಂಹ, ವೃಶ್ಚಿಕ, ಧನು ಲಗ್ನಗಳು ಪೋಷಕವಿರುತ್ತವೆ.

(೨) ಚಂದ್ರನ ಕಾರಕ ವಸ್ತುಗಳ ವ್ಯಾಪಾರಸ್ಥರಿಗೆ ಮೇಷ, ಕರ್ಕ, ತುಲಾ, ವೃಶ್ಚಿಕ, ಮಕರ, ಮೀನ ಲಗ್ನಗಳು ಪೋಷಕವಿರುತ್ತವೆ.

೩) ಮಂಗಳನ ಕಾರಕ ವಸ್ತುಗಳ ವ್ಯಾಪಾರ ಮಾಡುವ ವ್ಯಾಪಾರಸ್ಥರಿಗೆ ಮೇಷ, ಕರ್ಕ, ಸಿಂಹ, ವೃಶ್ಚಿಕ, ಧನು, ಮಕರ ಲಗ್ನಗಳು ಪೋಷಕವಿರುತ್ತವೆ,

೪) ಬುಧನ ಕಾರಕ ವಸ್ತುಗಳ ವ್ಯಾಪಾರ ಮಾಡುವ ವ್ಯಾಪಾರಸ್ಥರಿಗೆ ವೃಷಭ, ಮಿಥುನ, ಸಿಂಹ, ಕನ್ಯಾ, ಧನು, ಮಕರ, ಮೀನ ಲಗ್ನಗಳು ಪೋಷಕವಿರುತ್ತವೆ.

೫) ಗುರುವಿನ ಕಾರಕ ವಸ್ತುಗಳ ವ್ಯಾಪಾರ ಮಾಡುವ ವ್ಯಾಪಾರಸ್ಥರಿಗೆ ಮೇಷ, ಮಿಥುನ, ಕರ್ಕ ಸಿಂಹ, ಕನ್ಯಾ, ವೃಶ್ಚಿಕ, ಧನು, ಮೀನ ಲಗ್ನಗಳು ಪೋಷಕವಿರುತ್ತವೆ.

೬) ಶುಕ್ರನ ಕಾರಕ ವಸ್ತುಗಳ ವ್ಯಾಪಾರ ಮಾಡುವ ವ್ಯಾಪಾರಸ್ಥರಿಗೆ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಮಕರ, ಕುಂಭ ಲಗ್ನಗಳು ಕಾರಕವಿರುತ್ತವೆ.

೭) ಶನಿಯ ಕಾರಕ ವಸ್ತುಗಳ ವ್ಯಾಪಾರ ಮಾಡುವ ವ್ಯಾಪಾರಸ್ಥರಿಗೆ ಮೇಷ, ವೃಷಭ, ಮಿಥುನ, ತುಲಾ, ವೃಶ್ಚಿಕ, ಮಕರ, ಕುಂಭ ಲಗ್ನಗಳು ಪೋಷಕವಿರುತ್ತವೆ.

ಹೀಗೆ ವಿಭಿನ್ನ ಗ್ರಹಗಳ ಕಾರಕವಸ್ತು ವ್ಯಾಪಾರ ಮಾಡುವ ವ್ಯಾಪಾರಸ್ಥರಿಗೆ ವಿಭಿನ್ನ ಕಾರಕ ಲಗ್ನಗಳಿರುತ್ತವೆ.

# ೭

## ಏಜನ್ಸಿ ಹಾಗೂ ಕಾಂಟ್ರ್ಯಾಕ್ಟ (ಗುತ್ತಿಗೆ) ವ್ಯವಹಾರಸ್ಥರ ವೃತ್ತಿ

ಆಧುನೀಕರಣ ಬೆಳೆದಂತೆ ಯಾವ ವ್ಯಕ್ತಿಗೂ ತನ್ನ ಎಲ್ಲ ಕೆಲಸಗಳನ್ನು ತಾನೇ ಮಾಡಿಕೊಳ್ಳಲು ಸಾಧ್ಯವಾಗದಾಗಿದೆ. ತನ್ನ ನೌಕರಿಯನ್ನು ಸಂಬಾಳಿಸಿ ಕೊಂಡು ಹೋಗುವುದು ತನ್ನ ವೃತ್ತಿಯನ್ನು ಮುಂದುವರಿಸಿಕೊಂಡು ಹೋಗುವುದು ಕಠಿಣವಾಗುವಂಥ ಪರಿಸ್ಥಿತಿ ನಿರ್ಮಾಣವಾಗಿದೆ. ಅಂತೆಯೇ ವಿವಿಧ ಕ್ಷೇತ್ರಗಳಲ್ಲಿ ಏಜೆನ್ಸಿಗಳು, ಹಾಗೂ(ಏಜೆಂಟ) ಗುತ್ತಿಗೆ(ಕಂಟ್ರ್ಯಾಕ್ಟರ) ವ್ಯವಹಾರಸ್ಥರ ವೃತ್ತಿ ಬೆಳೆದುನಿಂತಿವೆ. ಇವೂ ಕೂಡ ಸ್ವತಂತ್ರ ವೃತ್ತಿಯಾಗಿ ಬೆಳೆದಿವೆ. ಆದುದರಿಂದ ಏಜೆನ್ಸಿ ಹಾಗೂ ಗುತ್ತಿಗೆ ವೃತ್ತಿಯವರ ಕಾರಕ ಗ್ರಹ ಸ್ಥಾನ ಲಗ್ನ ರಾಶ್ಯಾದಿಗಳಾವವು ಎಂಬುದನ್ನು ಪರಿಶೀಲಿಸುವಾ.

ಏಜೆನ್ಸಿ ಹಾಗೂ ಗುತ್ತಿಗೆ ವ್ಯವಹಾರಸ್ಥರ ಕಾರಕ ಗೃಹ ಲಗ್ನ ಸ್ಥಾನ ರಾಶ್ಯಾದಿಗಳು ವಿಭಿನ್ನವಿರುವುದರಿಂದ ಅವನ್ನು ಪ್ರತ್ಯೇಕವಾಗಿ ಬರೆಯಲಾಗಿದೆ.

ಏಜೆನ್ಸಿ ವೃತ್ತಿಯ ಕಾರಕ ಗ್ರಹ ಯಾವುದೆಂಬುದನ್ನು ತಿಳಿಯುವ ಮೊದಲು ಏಜೆನ್ಸಿಯಲ್ಲಿಯ ಪ್ರಕಾರಗಳನ್ನು ತಿಳಿಯುವುದು ಆವಶ್ಯಕ. ಏಜೆನ್ಸಿ ವೃತ್ತಿಯಲ್ಲಿ ಅನೇಕ ಪ್ರಕಾರಗಳದ್ದು ಒಂದು ಏಜೆನ್ಸಿ ವೃತ್ತಿಯಲ್ಲಿ ಯಶಸ್ವಿಯಾಗಬಲ್ಲ ಜಾತಕನು ಇನ್ನೊಂದು ಏಜೆನ್ಸಿ ವೃತ್ತಿಯಲ್ಲಿ ಯಶಸ್ವಿ ಯಾಗುತ್ತಾನೆಂದು ಹೇಳಲಿಕ್ಕಾಗದು, ಆದುದರಿಂದ ಮೊದಲು ಏಜೆನ್ಸಿ ವೃತ್ತಿ ಯಲ್ಲಿಯ ಪ್ರಕಾರಗಳನ್ನು ಪರಿಶೀಲಿಸುವಾ,

## ಏಜೆನ್ಸಿ ವೃತ್ತಿಯಲ್ಲಿಯ ಪ್ರಕಾರಗಳು.

ಏಜೆನ್ಸಿ ವೃತ್ತಿಯವರಲ್ಲಿ ಅನೇಕ ಪ್ರಕಾರದವರಿದ್ದು ಮುಖ್ಯವಾಗಿ ೮ ಬಗೆಯ ಏಜೆಂಟರ ವಿಷಯವಾಗಿ ಮಾತ್ರ ಇಲ್ಲಿ ವಿವರಿಸಲಾಗಿದೆ.

(೧) ವಿಮಾ ಏಜೆಂಟ
(೨) ಸ್ಟ್ಯಾಂಪ ವೆಂಡರ
(೩) ಟ್ರ್ಯಾವೆಲಿಂಗ ಏಜೆಂಟ
(೪) ಪ್ರವಾಸಿ ಮಾರ್ಗದರ್ಶಿ ಏಜೆಂಟ
(೫) ನ್ಯೂಜಪೇಪರ ಏಜೆಂಟ
(೬) ಜಾಹೀರಾತ ಏಜೆಂಟ
(೭) ವಿಭಿನ್ನ ವಸ್ತುಗಳ ಏಜೆಂಟ ( ಮೆಡಿಕಲ್ ರಿಪ್ರೆಜೆಂಟೆಟಿವ್ಹ ಇತ್ಯಾದಿ )
(೮) ಪ್ರಾಯವೇಟ ಡಿಟೆಕ್ಟಿವ್ಹ ಮತ್ತು ಸೆಕ್ಯುರಿಟಿ ಏಜೆಂಟ

ಇದಲ್ಲದೆ ಆರ್. ಟಿ. ಓ. ಕಚೇರಿಯಲ್ಲಿಯ ಏಜೆಂಟರು ಮೊದಲಾದ ಅನೇಕ ಏಜೆನ್ಸಿಯ ಏಜೆಂಟರಿದ್ದಾರೆ. ಯಾವುದೇ ಪ್ರಕಾರದ ಏಜೆನ್ಸಿಯ ಏಜೆಂಟನ ಮುಖ್ಯ ಗುಣಧರ್ಮವೆಂದರೆ, ತನ್ನ ಕಂಪನಿಯ (ಮಾಲಕನು) ವಸ್ತುವನ್ನು ಮಾರಾಟ ಮಾಡುವ ಕೆಲಸವಿರುತ್ತದೆ. ಅದೊಂದು ಕಲೆ. ಇದಕ್ಕೆ ಮಾರಾಟದ(ಸೇಲ್ಸಮನ್‌ಶಿಪ್)ಎಂದು ಕರೆಯಬಹುದು. ಏಕೆಂದರೆ ಇಬ್ಬರು ವಿಭಿನ್ನ ಶ್ರದ್ಧೆಗಳ ಹೊಂದಾಣಿಕೆಯ ಕಲೆ ಇದಕ್ಕೆ ಅವಶ್ಯವು. ಈ ಎಲ್ಲ ಪ್ರಕಾರದ ಏಜೆನ್ಸಿಯ ವೃತ್ತಿ ವರ್ಗದವರು (ಏಜೆಂಟರು)ಕೈಕೊಳ್ಳುವ ಕೆಲಸ, ಮಾಡುವ ರೀತಿ ಒಂದೇ. ಆದಾಗ್ಯೂ ಒಂದೊಂದು ರೀತಿಯ ಏಜೆನ್ಸಿಗೆ ಒಂದೊಂದು ರೀತಿಯ ಜ್ಞಾನ್ಯ, ತಜ್ಞತೆ ಬೇಕಾಗುತ್ತದೆ. ಆದುದರಿಂದ ಯಾರು ಯಾವ ಪ್ರಕಾರದ ಏಜೆನ್ಸಿ ವೃತ್ತಿ ಮಾಡಿದಲ್ಲಿ ಯಶಸ್ಸು ಲಭಿಸುತ್ತದೆ ಎಂಬುದನ್ನು ಪರಿಶೀಲಿಸುವ ಮೊದಲು ಎಲ್ಲ ಪ್ರಕಾರದ ಏಜೆನ್ಸಿಯ

ಏಜೆಂಟರುಗಳಲ್ಲಿಯ ಸಾಮಾನ್ಯ ಕಾರಕ ಗ್ರಹ ಸ್ಥಾನ ಲಗ್ನಗಳನ್ನು ವಿವರಿಸಿ ಆ ಬಳಿಕ ವಿಶಿಷ್ಟ ಪ್ರಕಾರದ ಏಜೆನ್ಸಿಯ ಏಜೆಂಟರ ಕಾರಕ ಗ್ರಹಾದಿಗಳನ್ನು ನೋಡುವಾ.

**ಕಾರಕ ಗ್ರಹ :—** ಯಾವುದೇ ಪ್ರಕಾರದ ಯಾವುದೇ ಸ್ವರೂಪದ ಏಜೆನ್ಸಿ ಇರಲಿ, ಏಜೆನ್ಸಿ ವೃತ್ತಿಯ, ಏಜೆಂಟನ ಕಾರಕ ಗ್ರಹವೆಂದರೆ ಬುಧನು. ಬುಧನು ಬಲಾಢ್ಯನಿರದ ಯಾರೂ ಯಾವುದೇ ಏಜೆಂಟಗಿರಿಯಲ್ಲಿ ಯಶಸ್ವಿಯಾಗರು. ಏಕೆಂದರೆ ಏಜೆನ್ಸಿಯ ವೃತ್ತಿಯು ಕೂಡ ಒಂದು ಬಗೆಯ ವ್ಯಾಪಾರಿ ವೃತ್ತಿಇದ್ದಂತೆ. ಆದುದರಿಂದ ವ್ಯಾಪಾರ ಕಾರಕ ಗ್ರಹವಾದ ಬುಧನು ಬಲಾಢ್ಯನೆಂದರೆ ರಾಶಿ ಬಲದವನೂ ಸ್ಥಾನ ಬಲದವನೂ ಯೋಗ ಕಾರಕನೂ ಇರಬೇಕು. ಬುಧನ ತರುವಾಯ ಶುಕ್ರ-ಚಂದ್ರರ ಬಲಾಬಲವನ್ನು ಪರಿಶೀಲಿಸಬೇಕು. ಏಕೆಂದರೆ ಮಾರಾಟವೂ ಒಂದು ಕಲೆ. ಶುಕ್ರ-ಚಂದ್ರರು ಬಲಾಢ್ಯರಿರದ ಯಾರಿಗೂ ಈ ಕಲೆ ಕರಗತವಾಗಲಾರದು.

**ಕಾರಕಸ್ಥಾನ :—** ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಯಾವುದೇ ಏಜೆನ್ಸಿಯ ಏಜೆಂಟರ ಕಾರಕ ಸ್ಥಾನವೆಂದರೆ ದ್ವಿತೀಯ ಸ್ಥಾನವು, ಏಕೆಂದರೆ ಏಜೆಂಟರ ಮುಖ್ಯ ಬಂಡವಾಳವೆಂದರೆ ಮಾತುಗಾರಿಕೆ. ತಮ್ಮ ಮಾತುಗಾರಿಕೆಯಿಂದ ಗ್ರಾಹಕರ ಮನಸ್ಸನ್ನು ಸೂರೆಗೊಳ್ಳಲು ದ್ವಿತೀಯ ಸ್ಥಾನ ಬಲಾಢ್ಯವಿರದೆ ಅದು ಸಾಧಿಸದು. ಆದುದರಿಂದ ದ್ವಿತೀಯ ಸ್ಥಾನ ಹಾಗೂ ದ್ವಿತೀಯೇಶರು ಬಲಾಢ್ಯರಿರಬೇಕು. ಅದರಲ್ಲಿಯೂ ಬುಧ-ಗುರು-ಶುಕ್ರ-ಚಂದ್ರರು ದ್ವಿತೀಯ ಸ್ಥಾನದಲ್ಲಿರುವುದು, ಇಲ್ಲವೆ ಬುಧ-ಗುರು-ಶುಕ್ರ-ಚಂದ್ರರೂ ದ್ವಿತೀಯೇಶರೂ ಬಲಾಢ್ಯರಿದ್ದ ಜಾತಕರು ಯಶಸ್ವಿ ಏಜೆಂಟರಾಗುವುದರಲ್ಲಿ ಸಂದೇಹವಿಲ್ಲ.

**ಕಾರಕ ಲಗ್ನ —** ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ, ಕನ್ಯಾ, ತುಲಾ, ಧನು, ಮಕರ, ಕುಂಭ, ಮೀನ ಈ ಲಗ್ನಗಳು ಯಾವುದೇ ಪ್ರಕಾರದ ಏಜನ್ಸಿಯ ಏಜೆಂಟರ ಕಾರಕ ಲಗ್ನಗಳು.

**ಸ್ಥಾನ :—** ಸ್ಥಾನ ದೃಷ್ಟಿಯಿಂದ ನೋಡಿದರೆ ವೃಷಭ, ಮಿಥುನ,

ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯವರು ಯಾವುದೇ ಎಜೆನ್ಸಿ ವೃತ್ತಿಯಲ್ಲಿ ನಿಷ್ಣಾತರಾಗುವರು. ಈಗ ಎಲ್ಲ ಪ್ರಕಾರದ ಎಜೆನ್ಸಿಯ ವೃತ್ತಿಯಾ ಎಜೆಂಟರ ಕಾರಕ ಗ್ರಹ ಲಗ್ನ ಸ್ಥಾನಾದಿಗಳನ್ನು ವಿವರಿಸಿದ್ದಾಯಿತು. ಇನ್ನು ವಿಶಿಷ್ಟ ಪ್ರಕಾರದ ಎಜೆನ್ಸಿ ವೃತ್ತಿ ಎಜೆಂಟನ ಕಾರಕ ಗ್ರಹಾದಿಗಳನ್ನು ನೋಡೋಣ.

೧) ವಿವಾ ಏಜೆಂಟ ( ವಿವಾ ಏಜೆನ್ಸಿ )

ವಿವಾ ಎಜೆನ್ಸಿ ವೃತ್ತಿಯನ್ನು ಕೈಕೊಳ್ಳಲು ಜಾತಕ ಹೇಗಿರಬೇಕು, ಕಾರಕ ಗ್ರಹ ಲಗ್ನ ಸ್ಥಾನಾದಿಗಳಾವವು ಎಂಬುದು ಸಮಸ್ಯೆಯಾಗಿದೆ, ಏಕೆಂದರೆ ವಿಮಾ ಎಜೆನ್ಸಿಯಲ್ಲಿಯೂ ಕೂಡ ಎರಡು ಪ್ರಕಾರಗಳಿವೆ.

(೧) ಜೀವ ವಿಮೆ

(೨) ಸಾಮಾನ್ಯ ವಿಮೆ

ಇನ್ನು ಸಾಮಾನ್ಯ ವಿಮೆಯಲ್ಲಿಯೂ ಕೂಡ ಅನೇಕ ಪ್ರಕಾರಗಳಿವೆ. ಬೆಂಕಿ ವಿಮೆ, ವಾಹನಗಳ ಅಪಘಾತದ ವಿಮೆ, ಎಮ್ಮೆ-ಆಕಳು ಮೊದಲಾದ ಪ್ರಾಣಿಗಳ ವಿಮೆ, ಕೋಳಿ ಮೊದಲಾದ ಪಕ್ಷಿಗಳ ವಿಮೆ ಇದಲ್ಲದೆ ಕೆಲ ಪ್ರಾಂತ ಗಳಲ್ಲಿ ಬೆಳೆಗಳ ವಿಮೆಯೂ ಸಹ ಇದೆ. ಹೀಗೆ ವಿಮೆಯಲ್ಲಿ ಪ್ರಕಾರಗಳಿ ರುವುದರಿಂದ ವಿಭಿನ್ನ ಪ್ರಕಾರದ ಎಜೆನ್ಸಿ ವೃತ್ತಿಗೆ ವಿಭಿನ್ನ ಗ್ರಹ ಲಗ್ನ ಸ್ಥಾನಾ ದಿಗಳು ಕಾರಕವಿರುತ್ತವೆ. ಆದರೆ ಒಂದು ಸಂಗತಿ ನಿಜ, ಯಾವುದೇ ಪ್ರಕಾರದ ವಿಮೆ ಎಜೆಂಟನಿಗೆ ಹೊರಗಡೆ ಹೆಚ್ಚು ಜನರ ಸಂಪರ್ಕ ಪಡೆಯಬೇಕಾಗುತ್ತದೆ. ವಿಮೆಯ ಅವಶ್ಯಕತೆಯು ಬಗೆಗೆ ಅದರ ಲಾಭಾನುಕೂಲತೆಗಳ ಬಗೆಗೆ ವಿವರಿ ಸಲು ಜನರೊಂದಿಗೆ ಹೆಚ್ಚು ಸಮಯ ಕಳೆದು ಜನರ ವೈಯಕ್ತಿಕ ಸಮಸ್ಯೆ ಗಳನ್ನು ತಿಳಿದುಕೊಂಡು ಅವರ ಆರ್ಥಿಕ ಕಷ್ಟ-ಕಾರ್ಪಣ್ಯಗಳನ್ನು ಅರಿತು, ವಿಮೆ ಮೂಲಕ ಅವುಗಳಿಗೆ ಪರಿಹಾರ ಹೇಗೆ ಲಭ್ಯವಾಗುತ್ತದೆ. ವೃದ್ಧಾ ಪ್ಯದಲ್ಲಿ, ನಿವೃತ್ತಿಯ ನಂತರ ಇಲ್ಲವೆ ಮಕ್ಕಳ ವಿದ್ಯಾಭ್ಯಾಸಕ್ಕೆ, ಮಕ್ಕಳ ಮದುವೆಗೆ-ಮುಂಜವಿಗೆ, ಅದರಲ್ಲಿಯೂ ಹೆಣ್ಣು ಮಕ್ಕಳ ಮದುವೆಗೆ

ವಿಮೆ ಹೇಗೆ ಸಹಾಯಕವಾಗುತ್ತದೆ, ವೃದ್ಧಾಪ್ಯದಲ್ಲಿ ಆರಾಮ ಜೀವನ ನಡೆಸಲು ಜೀವ ವಿಮೆ ಹೇಗೆ ಅನುಕೂಲ ಮಾಡಿಕೊಡುತ್ತದೆ, ಅದೆಷ್ಟು ಉಪಯುಕ್ತವಿದೆ; ಇದರಂತೆ ಅನಿರೀಕ್ಷಿತವಾದ ಬಂದೊದಗಬಹುದಾದ ಬೆಂಕಿ ಮೊದಲಾದ ಅಪಘಾತಗಳಿಂದಾಗಿ ಆಸ್ತಿ-ಪಾಸ್ತಿಗಳಿಗಾಗುವ ನಷ್ಟ ಹಾನಿಯನ್ನು ತಡೆಗಟ್ಟಲು ಆಸ್ತಿಗಳ ಬೆಂಕಿ ವಿಮೆ, ವಾಹನಗಳ ವಿಮೆ, ಎಮ್ಮೆ-ಆಕಳು-ಎತ್ತು-ಕೋಳಿ ಮೊದಲಾದ ಸಾಕು ಪ್ರಾಣಿಗಳ ಹಾನಿಯನ್ನು ಸಾಮಾನ್ಯ ವಿಮೆ ಹೇಗೆ ತುಂಬಿಕೊಡುತ್ತದೆ ಎಂಬುದನ್ನು ಮನಂಬುಗುವಂತೆ ತಿಳಿಸಿ ಹೇಳಿ ವಿಮೆ ಇಳಿಸಲು ಅವರಿಗೆ ಆಸಕ್ತಿ ಕುದುರಿಸಿ ಪ್ರೇರೇಪಿಸುವುದು ಒಂದು ಕಲೆಯೇ ಆಗಿದೆ. ಈ ಕಲೆ ಎಲ್ಲರಿಗೂ ಕರಗತವಾಗಲಾರದು. ನಿರ್ದಿಷ್ಟವಾದ ಗ್ರಹಯೋಗವಿದ್ದರೇನೇ ಈ ಏಜೆಂಟಗಿರಿಯಲ್ಲಿ ಯಶಸ್ವಿಯಾಗುತ್ತಾರೆ. ಆದ್ದರಿಂದ ವಿಮಾ ಏಜೆಂಟ ವೃತ್ತಿಗೆ ಕಾರಕ ಗ್ರಹ ಸ್ಥಾನ ಲಗ್ನಾದಿಗಳಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ :** ಹಿಂದೆ ಹೇಳಿದಂತೆ ಯಾವುದೇ ಏಜೆನ್ಸಿ ವೃತ್ತಿಯೂ ಒಂದು ಬಗೆಯ ವ್ಯಾಪಾರ ವೃತ್ತಿಯಿದ್ದ ಹಾಗೆಯೇ. ಆದ್ದರಿಂದ ವ್ಯಾಪಾರ ಕಾರಕ ಗ್ರಹವಾದ ಬುಧನಂತೂ ಬಲಾಢ್ಯನಿರಲೇ ಬೇಕು. ಬುಧನ ತರುವಾಯ ಶನಿ, ಚಂದ್ರ, ಶುಕ್ರರನ್ನು ಪರಿಶೀಲಿಸಬೇಕು. ಅದರಲ್ಲಿಯೂ ಜೀವ ವಿಮೆ ಏಜನ್ಸಿಗಾಗಿ ಬುಧನೊಂದಿಗೆ ಶನಿ-ಶುಕ್ರರನ್ನು ಕಡ್ಡಾಗಿ ಪರಿಶೀಲಿಸಬೇಕು. ಏಕೆಂದರೆ ವಿಮೆ ಏಜೆಂಟರ ಕೆಲಸಕ್ಕೆ ನಿಗದಿಯಾದ ನಿರ್ದಿಷ್ಟ ಸಮಯವಿರುವುದಿಲ್ಲ. ಆತ ತನ್ನ ಕಾರ್ಯ ಹಾಗೂ ತನ್ನ ಸಮಯಕ್ಕೆ ತಾನೇ ಯಜಮಾನನಾಗಲಾರ. ಪಾಲಿಸಿದಾರರಾಗಲು ಕೋರಬಹುದಾದ ಬರ ಹೇಳಿದಾಗ ಇಲ್ಲವೆ ಅವರು ಮನಸ್ಸು ಮಾಡಿದಾಗ ಈತ ಹೋಗಿ ಅವರ ಪಾಲಿಸಿ ಮಾಡಿಸಬೇಕಾಗುತ್ತದೆ. ಇದಕ್ಕೆ ತಾಳ್ಮೆ ಬೇಕಾಗುತ್ತದೆ. ತಾಳ್ಮೆ ಈ ಗುಣವು ಶನಿಯದು. ಜನರನ್ನು ಒಲಿಸುವುದು, ಅವರೊಂದಿಗೆ ಸಹೃದಯದಿಂದ, ಸೌಜನ್ಯದಿಂದ ವರ್ತಿಸುವುದು ಶುಕ್ರನ ಗುಣಧರ್ಮ. ಹೇಗೋ ಎಂತೋ ತನ್ನ ಕಾರ್ಯ ಸಾಧಿ

ಕೊಳ್ಳುವುದು ಬುಧನ ಗುಣಧರ್ಮ. ಆದ್ದರಿಂದ ಬುಧ-ಶನಿ-ಶುಕ್ರರು ಜೀವ ವಿಮೆ ಕಾರಕರಿದ್ದು ಬುಧ-ಶನಿ-ಶುಕ್ರರು ಬಲಾಢ್ಯರಿದ್ದವರೇ ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

ಇದರಂತೆ ದನಕರುಗಳ ವಿಮೆ ಏಜೆನ್ಸಿ ವೃತ್ತಿಗೆ ಬುಧನೊಂದಿಗೆ ಶನಿ-ಚಂದ್ರರನ್ನು ಪರಿಶೀಲಿಸಬೇಕು. ಏಕೆಂದರೆ ದನ-ಕರುಗಳಿಗೆ, ಪ್ರಾಣಿಗಳಿಗೆ, ಬೆಳೆಗಳಿಗೆ ಶನಿ-ಚಂದ್ರರು ಕಾರಕರು. ಆದುದರಿಂದ ಬುಧ-ಶನಿ-ಚಂದ್ರರು ಬಲಾಢ್ಯರಿದ್ದವರೇ ಈ ಏಜೆನ್ಸಿ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ. ಬೆಂಕಿ, ವಾಹನ ಮೊದಲಾದ ಸಾಮಾನ್ಯ ವಿಮೆಗಳಿಗಾಗಿ ಬುಧನೊಂದಿಗೆ ಮಂಗಳನನ್ನು ಪರಿಶೀಲಿಸಬೇಕು. ಏಕೆಂದರೆ ಬೆಂಕಿ, ವಾಹನಗಳಿಗೆ ಮಂಗಳನು ಕಾರಕನು. ಆದರೆ ಒಂದು ಸಂಗತಿ— ಬುಧನು ರಾಶಿ ಬಲದವನೂ ಸ್ಥಾನ ಬಲದವನೂ ಇದ್ದರೆ, ಮಂಗಳನು ಕೇವಲ ರಾಶಿ ಬಲದವನಿದ್ದರಾಯಿತು.

**ಕಾರಕ ಸ್ಥಾನ:—** ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಹಿಂದೆ ಹೇಳಿದಂತೆ ಯಾವುದೇ ಏಜೆನ್ಸಿ ವೃತ್ತಿಗೆ ಏಜೆನ್ಸಿಗಾರಿಕೆಗೆ ದ್ವಿತೀಯ ಸ್ಥಾನವೇ ಮೂಲ ಹಾಗೂ ಮುಖ್ಯವಿರುತ್ತದೆ. ಈ ವೃತ್ತಿಯಲ್ಲಿ ಮಾತುಗಾರಿಕೆಗೆ ಮಹತ್ವವಿದೆ. ಮಾತಾಡದವನು, ಮೂಕನು, ಮುಖಹೀನನು ಈ ವೃತ್ತಿಯಲ್ಲಿ ಯಶಸ್ವಿಯಾಗುವುದಿಲ್ಲ. ಪ್ರಭಾವ ಪೂರಿತವಾಗಿಯೂ ಪರಿಣಾಮಕಾರಿಯಾಗಿಯೂ ಮಾತಾಡಿ ಜನರಿಂದ ಪಾಲಿಸಿ ಮಾಡಿಸಿಕೊಳ್ಳುವುದರಲ್ಲಿ ದ್ವಿತೀಯ ಸ್ಥಾನ ಹಾಗೂ ದ್ವಿತೀಯೇಶ ಇವರು ಬಲಾಢ್ಯರಿರಬೇಕಾಗುತ್ತದೆ.

**ಲಗ್ನ :—** ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಮಿಥುನ, ಸಿಂಹ, ಕನ್ಯಾ, ವೃಶ್ಚಿಕ, ಕುಂಭ ಈ ಲಗ್ನದವರು ಯಶಸ್ವಿ ವಿಮಾ ಏಜೆಂಟರಾಗಬಲ್ಲರು.

**ರಾಶಿ :—** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯವರೇ ಯಶಸ್ವಿ

ವಿಮಾ ಏಜೆಂಟರಾಗಬಲ್ಲರು.

**ಯೋಗಗಳು:—**

೧) ಜಾತಕದಲ್ಲಿ ರವಿಯು ಬಲಾಢ್ಯನಿರುವ ಏಜೆನ್ಸಿ ವೃತ್ತಿಯು ವರಿಗೆ ಏಜೆಂಟರರಿಗೆ ಸರಕಾರಿ ಅಧಿಕಾರಿಗಳ, ನೌಕರ ವರ್ಗಗಳ, ರಾಜಕಾರಣಿಗಳ ಬೆಂಬಲ-ಸಹಕಾರ-ಸಹಾಯ ಸಾಕಷ್ಟು ದೊರೆಯುತ್ತಿವೆ. ಹಾಗೂ ಇವರೇ ಹೆಚ್ಚಿನ ಸಂಖ್ಯೆಯಲ್ಲಿ ಪಾಲಿಸಿದಾರರಾಗುತ್ತಾರೆ.

೨) ಶನಿ-ಮಂಗಳರು ಬಲಾಢ್ಯರಿರುವ ಏಜೆಂಟರಿಗೆ ಉದ್ಯಮದಾರರು ಹೆಚ್ಚಿನ ಸಂಖ್ಯೆಯಲ್ಲಿ ಪಾಲಿಸಿದಾರರಾಗುತ್ತಾರೆ.

೩) ಬುಧನು ಬಲಾಢ್ಯನಿರುವ ವ್ಯಕ್ತಿಗಳಿಗೆ ವ್ಯಾಪಾರಿಗಳು ಹೆಚ್ಚಿನ ಸಂಖ್ಯೆಯಲ್ಲಿ ಪಾಲಿಸಿದಾರರು ಇರುವರಲ್ಲದೆ ಅಂಚೆ ಖಾತೆಯಲ್ಲಿ ರಾಷ್ಟ್ರೀಯ ಉಳಿತಾಯ ಸರ್ಟಿಫಿಕೇಟಿನ ಏಜೆನ್ಸಿಯಲ್ಲಿ ಹೆಚ್ಚು ಲಾಭ ಗಳಿಸುತ್ತಾರೆ.

೪) ಶುಕ್ರ-ಚಂದ್ರರು ಬಲಾಢ್ಯರಿರುವ ಏಜೆಂಟರಿಗೆ ಮಹಿಳಾ ಪಾಲಿಸಿದಾರ ಹಾಗೂ ಕಲಾಕಾರ ಪಾಲಿಸಿದಾರರ ಸಂಖ್ಯೆ ಹೆಚ್ಚಿರುತ್ತದೆ.

೫) ಗುರುವು ಬಲಾಢ್ಯನಿರುವ ವ್ಯಕ್ತಿಗಳಿಗೆ ಶಿಕ್ಷಕರೇ ಹೆಚ್ಚಿನ ಸಂಖ್ಯೆಯಲ್ಲಿ ಪಾಲಿಸಿದಾರರಿರುತ್ತಾರೆ.

**೨) ಸ್ಟ್ಯಾಂಪವೆಂಡರ ವೃತ್ತಿ**

ಖರೀದಿ ವಿಕ್ರಿಪತ್ರಗಳಾಗಲಿ, ವೃತ್ತಿ ಪತ್ರಗಳಾಗಲಿ, ಮೃತ್ಯು ಪತ್ರಗಳಾಗಲಿ, ವಿಭಾಗಣೆ ಪತ್ರಗಳಾಗಲಿ, ದತ್ತಕ-ದಾನ-ಭಕ್ಷಿಸ ಮೊದಲಾದ ವ್ಯವಹಾರದ ಮಹತ್ವದ ದಾಖಲೆ ಪತ್ರಗಳನ್ನು ನೋಂದಣಿ ಕಚೇರಿಯಲ್ಲಿ ನೋಂದಾಯಿಸಲು ಛಾಪಾ ಕಾಗದದ ಮೇಲೆ (ಸ್ಟ್ಯಾಂಪ ಪೇಪರ) ಬರೆಯಬೇಕಾಗುತ್ತದೆ. ಈ ಛಾಪಾ ಕಾಗದವು ಎಲ್ಲ ಕಡೆಗೂ ಸಿಗುವುದಿಲ್ಲ. ಅದು ಯಾವುದೇ ಅಂಗಡಿಯಲ್ಲಿ ದೊರೆಯುವ ವಸ್ತುವಲ್ಲ. ಸರಕಾರದಿಂದ ಅಧಿಕೃತವಾಗಿ ನಿಯಮಿಸಲ್ಪಡುವ, ಸರಕಾರದಿಂದ ಮನ್ನಣೆ ಪಡೆದ

ವ್ಯಕ್ತಿಗಳಲ್ಲಿ ಮಾತ್ರ ಲಭ್ಯವಿರುತ್ತವೆ. ಇಂಥ ಛಾಪಾ ಕಾಗದ ಮಾರುವ ವರಿಗೆ ಕಮಿಶನ್ ದೊರೆಯುತ್ತದೆ. ಇವರೇ ಸ್ಟ್ಯಾಂಪವೆಂಡರರು. ಈ ಸ್ಟ್ಯಾಂಪವೆಂಡರ ವೃತ್ತಿಗೆ ಇತ್ತೀಚೆಗೆ ಬಹಳ ಪ್ರಾಮುಖ್ಯತೆ ಬಂದಿದೆ. ಆದಾಗ್ಯೂ ಎಲ್ಲ ಸ್ಟ್ಯಾಂಪವೆಂಡರರ ವೃತ್ತಿ ಚನ್ನಾಗಿ ನಡೆಯುತ್ತಿದೆಯೆಂದು ಹೇಳಲುಬಾರದು. ಆದ್ದರಿಂದ ಫಲಜ್ಯೋತಿಷ್ಯದಲ್ಲಿ ಈ ವೃತ್ತಿ ಕೈ-ಕೊಳ್ಳಲು ಜಾತಕ ಹೇಗಿರುತ್ತದೆ, ಕಾರಕ ಗ್ರಹ ಲಗ್ನ ಸ್ಥಾನಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ :—** ಕಾಗದದ ಮೇಲಿ ಅದರಲ್ಲಿಯೂ ಛಾಪಾ ಕಾಗದದ ಮೇಲೆ ಬುಧನು ಕಾರಕನು. ಅದು ಅಲ್ಲದೆ ಯಾವುದೇ ಪ್ರಕಾರದ ಬರೆವಣಿಗೆಗೆ ಬರೆವಣಿಗೆ ಉಪಕರಣಗಳ ಮೇಲೆ ಟೇಬಲ್ಲಿನ ಮೇಲೆ ಬುಧನು ಕಾರಕನು. ಅಲ್ಲದೆ ಎಲ್ಲ ಪ್ರಕಾರದ ಎಜೆನ್ಸಿಗೂ ವ್ಯಾಪಾರಕ್ಕೂ ಬುಧನೇ ಕಾರಕನು. ಆದ್ದರಿಂದ ಬುಧನು ಬಲಾಢ್ಯನಿರದೆ ಯಾರೂ ಈ ವೃತ್ತಿಯಲ್ಲಿ ಹಾಗೂ ಈ ಎಜೆನ್ಸಿಯಲ್ಲಿ ಯಶಸ್ವಿಯಾಗಲಾರರು. ಬಲಾಢ್ಯನೆಂದರೆ ಬುಧನು ರಾಶಿ ಬಲದವನೂ ಸ್ಥಾನ ಬಲದವನೂ ಇರಬೇಕು.

**ಸ್ಥಾನ:—** ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ವ್ಯಾಪಾರಿಯ ಸ್ಥಾನವಾದ ದಶಮವೂ ವೃತ್ತಿಯ ಸ್ಥಾನವಾದ ತೃತೀಯವೂ ಕಾರಕವಿದ್ದು ದಶಮೇಶ-ತೃತೀಯೇಶರು ಹಾಗೂ ಈ ಸ್ಥಾನಗಳು ಬಲಾಢ್ಯರಿದ್ದವರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

**ಕಾರಕ ಲಗ್ನ :—** ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ, ಕನ್ಯಾ, ಧನು, ಮಕರ, ಮೀನ ಈ ಲಗ್ನದವರೂ ತದನಂತರ ಮೇಷ, ಕರ್ಕ ಲಗ್ನದವರೂ ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

**ರಾಶಿ :—** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ವ್ಯಾಪಾರಿಯ ಹಾಗೂ ಎಜೆನ್ಸಿಯ ಪೋಷಕ ರಾಶಿಗಳಾದ ಮಿಥುನ, ತುಲಾ, ಕುಂಭ ರಾಶಿಯವರು ಈ ವೃತ್ತಿಯಲ್ಲಿ ನಿಷ್ಣಾತರು. ಇವರ ನಂತರ ವೃಷಭ, ಕರ್ಕ, ಕನ್ಯಾ, ಮೀನ ಈ ರಾಶಿಯವರು ಸ್ಟ್ಯಾಂಪವೆಂಡರ ವೃತ್ತಿಯಲ್ಲಿ

ಪಳಗಿದವರಿರುವುದು ಕಂಡುಬರುತ್ತದೆ.

## (೩) ಟ್ರಾವಲಿಂಗ ಏಜೆನ್ಸಿ

ಪ್ರವಾಸ ಕೈಕೊಳ್ಳುವವರ ಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚಾಗತೊಡಗಿದೆ. ಅಂತೆಯೇ ಪ್ರವಾಸೋದ್ಯಮ ಇತ್ತೀಚಿಗೆ ತೀವ್ರ ಪ್ರಗತಿಯನ್ನು ಹೊಂದುತ್ತಿದೆ. ಇದರಿಂದಾಗಿ ಟ್ರಾವಲಿಂಗ ಎಜೆನ್ಸಿ ಸಂಸ್ಥೆಗಳು ಅಸ್ತಿತ್ವಕ್ಕೆ ಬಂದಿವೆ. ಅವು ಪ್ರಯಾಣಿಕರ, ಪ್ರವಾಸಿಗರ ಯಾತ್ರಿಕರ ಸೇವೆಗಾಗಿಯೇ ಮೀಸಲಾದ ಸಂಸ್ಥೆಗಳು, ಪ್ರವಾಸಿಗರಿಗೆ ಯೋಗ್ಯ ಮಾರ್ಗದರ್ಶನ ಮಾಡುವುದು ಅವಶ್ಯ. ಸಲಹೆ ನೀಡುವುದು ಪ್ರವಾಸಿಗರ, ಪ್ರಯಾಣಿಕರು ಯಾತ್ರಿಕರಿಗೆ ಪ್ರಯಾಣ ಸಮಯದಲ್ಲಿ ಬಂದ ಹಲವಾರು ಸಮಸ್ಯೆಗಳಿಗೆ ಪರಿಹಾರ ಸೂಚಿಸುವುದಲ್ಲದೆ ಕೆಲ ತಾಂತ್ರಿಕ ಔಪಚಾರಿಕಗಳನ್ನು ಪೂರೈಸಿ ಪ್ರವಾಸ ಸುಖಕರವಾಗಲು ನೆರವಾಗುವುದರಲ್ಲಿ ಇಂಥ ಲೋಕೋಪಯುಕ್ತ ಟ್ರಾವಲಿಂಗ ಎಜೆನ್ಸಿಯ ವೃತ್ತಿ ಕೈಕೊಳ್ಳುವವರ ಟ್ರಾವಲಿಂಗ ಎಜೆಂಟರ ಜಾತಕ ಹೇಗಿರುತ್ತವೆ, ಕಾರಕ ಗ್ರಹಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ** :—ಟ್ರಾವಲಿಂಗ ಎಜೆಂಟರ ಮುಖ್ಯ ಗುಣಧರ್ಮವೆಂದರೆ ನಿರರ್ಗಳವಾಗಿ ಪ್ರಾಂತೀಯ ಭಾಷೆಯಲ್ಲದೆ ಇಂಗ್ಲಿಷ-ಹಿಂದಿ, ಮೊದಲಾದ ಹಲವಾರು ಭಾಷೆಗಳನ್ನು ಮಾತನಾಡ ಬಲ್ಲ ಓದು–ಬರೆಹ ಬಲ್ಲ ವ್ಯಕ್ತಿ ಇರಬೇಕಾಗುತ್ತದೆ. ಆದುದರಿಂದ ಬಹು ಭಾಷಾ ಪ್ರಾವೀಣ್ಯ ಕಾರಕನೂ ಎಜೆನ್ಸಿ ವೃತ್ತಿ ಕಾರಕನೂ ಆದ ಬುಧನು ಕಾರಕನು.

ಎಜೆನ್ಸಿ ವೃತ್ತಿಕಾರಕನಾದ ಬುಧನಂತೂ ಬಲಾಢ್ಯನಿರಲೇಬೇಕು. ಅಲ್ಲದೆ ರವಿ-ಚಂದ್ರ–ಗುರುಗಳ ಬಲಾಬಲವನ್ನು ಪರಿಶೀಲಿಸಬೇಕು. ಏಕೆಂದರೆ ಟ್ರಾವಲಿಂಗ ಎಜೆಂಟರಿಗೆ ವಿವಿಧ ಪ್ರಾಂತಗಳ ವಿವಿಧ ದೇಶಗಳ ರೀತಿ–ನೀತಿ-ನಿಯಮಗಳನ್ನು ತಿಳಿದಿರಬೇಕಲ್ಲದೆ ಪ್ರೇಕ್ಷಣೀಯ ಸ್ಥಳಗಳ ಯಾತ್ರಾ ಸ್ಥಳಗಳ ಪುಣ್ಯ ಕ್ಷೇತ್ರಗಳ ಸಾಂಸ್ಕೃತಿಕ ಭೌಗೋಲಿಕ ಐತಿಹಾಸಿಕ ಪೌರಾಣಿಕ ಮಹತ್ವ ಅರಿತಿರಬೇಕಾಗುತ್ತದೆ. ಅಲ್ಲದೆ ಅಲ್ಪ ವೆಚ್ಚದಲ್ಲಿ ಪ್ರವಾಸಿಗರಿಗೆ ಸುಖಕರ ಪ್ರವಾಸವನ್ನು ಒದಗಿಸಲು ಸಮರ್ಥನಿರಬೇಕು. ಓರ್ವ ಪ್ರವಾಸಿಗರು ಪ್ರವಾಸ

ಯೋಜನೆಯನ್ನು ಸೂಚಿಸಿದರೆ ಟ್ರಾವಲ್ ಏಜೆಂಟನು ಹಲವಾರು ಪ್ರವಾಸ ಯೋಜನೆಗಳನ್ನು ಸೂಚಿಸಬೇಕು. ಇಷ್ಟೇ ಅಲ್ಲ, ಪ್ರಯಾಣಿಕರಿಗೆ ಮುಂದಿನ ಪ್ರವಾಸದ ಸ್ಥಳ ಕಾಯ್ದಿರಿಸುವುದಕ್ಕೂ ಕೂಡ ಪ್ರಯತ್ನಿಸಬೇಕಾಗುತ್ತದೆ. ಈ ಎಲ್ಲ ಗುಣಧರ್ಮವು ಗುರು-ಚಂದ್ರ-ರವಿಯರದು; ಅವರು ಬಲಾಢ್ಯರಿರ ತಕ್ಕದ್ದು.

**ಕಾರಕ ಸ್ಥಾನ :—** ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಎಲ್ಲ ಏಜೆಂಟರ ವೃತ್ತಿಯ ಸ್ಥಾನವೂ ವಾಕ್ ಸ್ಥಾನವೂ ಆದ ದ್ವಿತೀಯ ಸ್ಥಾನ, ದ್ವಿತೀಯೇಶರ ಬಲಾಬಲವಂತೂ ಇರಬೇಕು. ಅಲ್ಲದೆ ಲಗ್ನ-ಪಂಚಮ ಸ್ಥಾನ ಗಳೂ ಸ್ಥಾನಾಧೀಶರೂ ಬಲಾಢ್ಯರಿರಬೇಕಾಗುತ್ತದೆ.

**ಲಗ್ನ :—** ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಮಿಥುನ, ಕರ್ಕ, ಕನ್ಯಾ, ಧನು, ಮಕರ ಲಗ್ನಗಳು ಹೆಚ್ಚಾಗಿರುವುದು ಕಂಡು ಬರುತ್ತದೆ.

**ರಾಶಿ :—** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಮಿಥುನ, ತುಲಾ, ಕುಂಭ ರಾಶಿಯವರೂ, ಅನಂತರ ವೃಷಭ, ಕನ್ಯಾ, ಸಿಂಹ, ಮೀನ ರಾಶಿಯ ವರು ಟ್ರಾವಲಿಂಗ ಏಜೆಂಟ ವೃತ್ತಿಯಲ್ಲಿ ನಿಷ್ಣಾತರು.

### ೪) ಟೂರಿಸ್ಟ ಗಾಯಿಡ ವೃತ್ತಿ

**ಪ್ರವಾಸಿ ಮಾರ್ಗದರ್ಶಿ(ಟೂರಿಸ್ಟ ಗೈಡ)**ವಿದೇಶಿ ಪ್ರವಾಸಿಗರಿಗೆ, ದೇಶದ ವಿಭಿನ್ನ ಪ್ರಾಂತಗಳ ಜನರಿಗೆ ದೇಶದ ಪ್ರೇಕ್ಷಣೀಯ ಸ್ಥಳಗಳನ್ನು ತೋರಿಸಲು ಆಯಾ ಸ್ಥಳದ ಪ್ರೇಕ್ಷಣೀಯ ಮಹತ್ವ, ಪೌರಾಣಿಕ ಮಹತ್ವ, ಐತಿಹಾಸಿಕ ಮಹತ್ವ, ಭೌಗೋಲಿಕ ಮಹತ್ವ, ರಾಜಕೀಯ-ಸಾಂಸ್ಕೃತಿಕ ಮಹತ್ವ, ಸ್ಥಳದ ತಗಇತಿಹಾಸ ಮೊದಲಾದವುಗಳನ್ನು ಬಲ್ಲವನಾಗಿರ ಬೇಕು. ಅಲ್ಲದೆ ಈ ವೃತ್ತಿ ಕೈಕೊಳ್ಳುವವರು ಬಹು ಭಾಷಾ ತಜ್ಞರಿರಬೇಕಾ ಗುತ್ತದೆ. ಇಂಥ ವೃತ್ತಿ ಕೈಕೊಳ್ಳುವವರ ಕಾರಕ ಗ್ರಹಾದಿಗಳು ಹೇಗಿರಬೇಕು ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ** :—ಮೇಲೆ ವಿವರಿಸಿದ ವಿಷಯಗಳ ಜ್ಞಾನ-ಪಾಂಡಿತ್ಯ ಉಳ್ಳವನೇ ಈ ವೃತ್ತಿ ಕೈಕೊಳ್ಳಬಹುದಾಗಿದೆ. ಅಲ್ಲದೆ ಈ ವೃತ್ತಿ ಕೈಕೊಳ್ಳುವವರಿಗೆ ತಾವು ಆಯಾ(ಲೋಕಲ್) ಪ್ರಾಂತದ ದೇಶದ ಭಾಷೆಯನ್ನು ನಿರರ್ಗಳವಾಗಿ ಮಾತನಾಡಲು ಬರೆಯಲು ಓದಲು ಬಲ್ಲವರಾಗಿರಬೇಕು. ಅಲ್ಲದೆ ಇಂಗ್ಲಿಷ-ಹಿಂದಿ ಮೊದಲಾದ ಹಲವಾರು ಭಾಷೆಗಳನ್ನು ಬರೆಯಲು ಓದಲು ಮಾತನಾಡಲು ಕೂಡ ಬಲ್ಲವರಿರಬೇಕು. ಆದುದರಿಂದ ಬಹು ಭಾಷಾ ತಜ್ಞ ಕಾರಕವಾದ ಬುಧನಂತೂ ಕಾರಕನಿದ್ದೇ ಇರುತ್ತಾನೆ. ಅಲ್ಲದೆ ಆಯಾ ಭಾಷೆಯಲ್ಲಿ ಪ್ರೌಢಿಮೆಯಿರಲು ಪ್ರೌಢಿಮೆ ಕಾರಕನಾದ ಗುರುವು ಕಾರಕನಿರುತ್ತಾನೆ. ಆದುದರಿಂದ ಬುಧ-ಗುರುಗಳು ಬಲಾಢ್ಯರಿದ್ದವರು ಪ್ರವಾಸಿ ಮಾರ್ಗದರ್ಶನ (ಟೂರಿಸ್ಟ ಗೈಡ) ವೃತ್ತಿಯಲ್ಲಿ ಯಶಸ್ವಿಯಾಗಬಲ್ಲರು.

**ಕಾರಕ ಸ್ಥಾನ** :—ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಮಾತುಗಾರಿಕೆಯೇ ಈ ವೃತ್ತಿಯ ಬಂಡವಾಳು. ದೋಷರಹಿತವಾಗಿಯೂ ನಿರರ್ಗಳವಾಗಿಯೂ ಪ್ರಭಾವಯುತವಾಗಿಯೂ ಆಕರ್ಷಕವಾಗಿಯೂ ಮಾತನಾಡಲು ದ್ವಿತೀಯ ಸ್ಥಾನ ದ್ವಿತೀಯೇಶ ಬಲಾಢ್ಯರಿಲ್ಲದೆ ಸಾಧಿಸದು. ದ್ವಿತೀಯ ಸ್ಥಾನದಲ್ಲಿ ಬುಧ-ಗುರು-ಶುಕ್ರ-ಚಂದ್ರರಲ್ಲಿ ಯಾರೊಬ್ಬರು ಬಲಾಢ್ಯರಾಗಿದ್ದು ದ್ವಿತೀಯೇಶ ಬಲಾಢ್ಯನಿದ್ದ ವ್ಯಕ್ತಿಗಳು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ,

ಲಗ್ನ :— ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಮಿಥುನ, ಸಿಂಹ, ಕನ್ಯಾ, ವೃಶ್ಚಿಕ, ಮೀನ ಈ ಲಗ್ನದವರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

ರಾಶಿ:— ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಮಿಥುನ, ತುಲಾ, ಕುಂಭ, ರಾಶಿಯವರೂ ಅನಂತರ ವೃಷಭ, ಕರ್ಕ, ಕನ್ಯಾ, ಮೀನ ರಾಶಿಯವರೂ ಈ ವೃತ್ತಿಯಲ್ಲಿ ನಿಷ್ಣಾತರಾಗುತ್ತಾರೆ.

ಙ) ನ್ಯೂಜಪೇಪರ ಏಜನ್ಸಿ :—

ವೃತ್ತ ಪತ್ರಿಕೆಗಳು ದೈನಿಕ-ಅರೆಸಾಪ್ತಾಹಿಕ-ಸಾಪ್ತಾಹಿಕ-

ಪಾಕ್ಷಿಕ-ಮಾಸಿಕ-ದ್ವೈಮಾಸಿಕ-ತ್ರೈಮಾಸಿಕ-ಷಾಣ್ಮಾಸಿಕ-ವಾರ್ಷಿಕ ಎಂದು ನಾನಾ ವಿಧವಾಗಿವೆ. ಅವುಗಳ ಏಜೆನ್ಸಿ ಪಡೆದು ಅವುಗಳನ್ನು ಸ್ಥಳೀಯ ಓದುಗರಿಗೆ ಹಂಚುವ, ಇಲ್ಲವೆ ಮಾರಾಟ ಮಾಡಿ ಅದರಿಂದ ಕಮಿಶನ್ ಪಡೆಯುವ ವೃತ್ತಿಯು ನ್ಯೂಜಪೇಪರ ಏಜೆನ್ಸಿಯ ಏಜೆಂಟನ ಕೆಲಸವು. ಇಂದು ನಾಡಿನಲ್ಲಿ ಪತ್ರಿಕೆಗಳ ಸಂಖ್ಯೆ ಮೊದಲಿಗಿಂತಲೂ ಬಹಳ ಹೆಚ್ಚಾಗಿ ಬೆಳೆದಿದೆ. ಅಷ್ಟೇ ಪ್ರಮಾಣದಲ್ಲಿ ಓದುಗರ ಸಂಖ್ಯೆಯೂ ಹೆಚ್ಚಾಗ ಹತ್ತಿದೆ. ಆದ್ದರಿಂದ ಈ ವೃತ್ತಿ ಚೆನ್ನಾಗಿ ಪ್ರಗತಿಹೊಂದುತ್ತ ನಡೆಯು ಹತ್ತಿದೆಯೆಂದು ಹೇಳಬಹುದು. ಆದಾಗ್ಯೂ ಎಲ್ಲ ಪೇಪರ ಏಜೆಂಟರ ವೃತ್ತಿ ಚೆನ್ನಾಗಿ ನಡೆಯುತ್ತಿದೆಯೆಂದು ಹೇಳಲುಬಾರದು. ಏಕೆಂದರೆ ಆಯಾ ಏಜೆಂಟರ ಜಾತಕಗಳು ಬೇರೆ ಬೇರೆ ಇರುತ್ತವೆ. ಆದ್ದರಿಂದ ಫಲಜ್ಯೋತಿಷ್ಯದಲ್ಲಿ ಈ ವೃತ್ತಿಯ ಕಾರಕ ಗ್ರಹಾದಿಗಳಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ** : — ಸುದ್ದಿ-ಸಮಾಚಾರ, ಮುದ್ರಣ, ಪ್ರಕಾಶನ, ಕಾಗದ; ಪ್ರಸರಣ-ಪ್ರಸಾರ ಮೊದಲಾದವುಗಳೆಲ್ಲ ಬುಧನು ಕಾರಕನು. ಆದ್ದರಿಂದ ನ್ಯೂಜಪೇಪರ ಏಜೆನ್ಸಿ ವೃತ್ತಿಗೂ ಕೂಡ ಬುಧನೇ ಕಾರಕನು. ಬುಧನು ಬಲಾಢ್ಯನಿಂದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು. ಅದರಲ್ಲಿಯೂ ಪ್ರತಿ ನಿತ್ಯ ಪ್ರಕಟವಾಗುವ ದೈನಿಕ ಪೇಪರ (ಪತ್ರ) ಗಳ ಏಜೆಂಟರಿಗಂತೂ ಬುಧನು ಬಲಾಢ್ಯನಿರಲೇಬೇಕು. ಬುಧನ ತರುವಾಯ ಗುರು-ಶುಕ್ರ-ಚಂದ್ರರ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ. ಪ್ರತಿ ನಿತ್ಯ ಪ್ರಕಟವಾಗುವ ದೈನಿಕ ಪತ್ರಿಕೆಗಳಿಗೆ ಅದರಲ್ಲಿಯೂ ಸುದ್ದಿ-ಸಮಾಚಾರ, ರಾಜಕೀಯ ಸುದ್ದಿ ಮುಖ್ಯ ವಿಷಯವಾಗಿರುವ ದಿನಪತ್ರಿಕೆಗಳಿಗೆ ಬುಧನ ಸಂಗಡ ರವಿಯನ್ನೂ ಪರಿಶೀಲಿಸಬೇಕು. ಏಕೆಂದರೆ ಪತ್ರಿಕೆಗಳ ಏಜೆನ್ಸಿ ಹಿಡಿಯುವವರಿಗೆ ಪತ್ರಿಕಾ ಮಾಲಕರಲ್ಲಿ ದೊಡ್ಡ ಮೊತ್ತದ ಠೇವಣಿ (ಡಿಪೋಜಿಟ) ಇಡಬೇಕಾಗುತ್ತದೆ. ರವಿಯು ಬಲಾಢ್ಯನಿದ್ದರೆ ಮಾತ್ರ ಠೇವಣಿ ಇಡಲು ಸಾಧ್ಯ. ಆದರೆ ಬುಧನು ರಾಶಿ ಬಲದವನೂ ಸ್ಥಾನ ಬಲದವನೂ ಇದ್ದರೆ ರವಿಯು ಕೇವಲ ರಾಶಿ ಬಲದವನಿರುತ್ತಾನೆ,

ಇದರಂತೆ ಸುದ್ದಿ-ರಾಜಕೀಯ ಕಡಿಮೆಯಿದ್ದು ಇತರ ಮನರಂಜನೆ, ಸಾಹಿತ್ಯ, ಸಾಂಸ್ಕೃತಿಕ, ಧಾರ್ಮಿಕ ಮೊದಲಾದ ವಿಷಯಗಳಿರುವ ವಾರ ಪತ್ರಿಕೆ-ಪಾಕ್ಷಿಕ-ಮಾಸ ಪತ್ರಿಕೆ-ಷಾಣ್ಮಾಸಿಕ-ವಾರ್ಷಿಕ ಪತ್ರಿಕೆಗಳ ಏಜೆನ್ಸಿ ವೃತ್ತಿಯವರಿಗೆ ಬುಧನ ಸಂಗಡ ಶುಕ್ರ-ಚಂದ್ರರ ಬಲಾಬಲವನ್ನೂ ಪರಿಶೀಲಿಸಬೇಕು. ಇಲ್ಲಿಯೂ ಅಷ್ಟೆ, ಬುಧನು ರಾಶಿ ಬಲದವನೂ ಸ್ಥಾನ ಬಲದವನೂ ಇದ್ದರೆ ಶುಕ್ರ-ಚಂದ್ರರು ಕೇವಲ ರಾಶಿ ಬಲದವರಿರಬಹುದು. ಇದರಂತೆ ವಿದ್ಯಾರ್ಥಿಗಳಿಗಾಗಿ ಶೈಕ್ಷಣಿಕ ಮಾಸ ಪತ್ರಿಕೆ-ಗೈಡುಗಳ ಏಜೆನ್ಸಿಗೆ ಬುಧನೊಂದಿಗೆ ಗುರುವನ್ನು ಪರಿಶೀಲಿಸಬೇಕು. ಇಲ್ಲಿಯೂ ಅಷ್ಟೆ, ಬುಧನು ರಾಶಿ ಬಲದವನೂ ಸ್ಥಾನ ಬಲದವನೂ ಇದ್ದರೆ ಗುರುವು ಕೇವಲ ರಾಶಿಬಲದವನಿದ್ದರೂ ನಡೆಯುತ್ತದೆ. ಆದರೆ ರೇಲ್ವೆ ನಿಲ್ದಾಣದಲ್ಲಿ, ಬಸ್ಸುಗಳ ನಿಲ್ದಾಣಗಳಲ್ಲಿ ಪುಸ್ತಕಗಳ ಪೇಪರಗಳ ಮಳಿಗೆ (ಸ್ಟಾಲ) ಗಳ ಏಜೆನ್ಸಿಗೆ ಬುಧನೊಂದಿಗೆ ರವಿಯು ಬಲಾಬಲವನ್ನೂ ಪರಿಶೀಲಿಸಬೇಕು. ಇಲ್ಲಿ ರವಿಯು ಬುಧನಂತೆ ರಾಶಿ ಬಲದವ ಹಾಗೂ ಸ್ಥಾನ ಬಲದವನಿದ್ದರಾಯಿತು. ಅಂದರೆ ಅಂಥವರಿಗೆ ಏಜೆನ್ಸಿ ದೊರೆಯುತ್ತದೆ.

**ಕಾರಕ ಸ್ಥಾನ :—** ಸ್ಥಾನದೃಷ್ಟಿಯಿಂದ ಪರಿಶೀಲಿಸಿದರೆ ಏಜೆನ್ಸಿ ವೃತ್ತಿಯ ಎಲ್ಲ ಏಜೆಂಟರ ಕಾರಕ ಸ್ಥಾನವಾದ ದ್ವಿತೀಯ ಸ್ಥಾನವಂತೂ ಕಾರಕವಿದ್ದೇ ಇರುತ್ತದೆ. ಇದಲ್ಲದೆ ಲಗ್ನ ತೃತೀಯ ಸ್ಥಾನವನ್ನೂ ಪರಿಶೀಲಿಸಬೇಕು. ಏಕೆಂದರೆ ಪೇಪರ ಮಾರಾಟವು ಅದರಲ್ಲಿಯೂ ದೈನಿಕ ಪೇಪರ ಮಾರಾಟವು-ಹಂಚುವುದು ಉಳಿದ ವ್ಯಾಪಾರಕ್ಕಿಂತ ಭಿನ್ನವಿದೆ. ಕಿರಾಣಿ-ಬಟ್ಟೆ ಸ್ಟೇಶನರಿ ಮೊದಲಾದ ವ್ಯಾಪಾರಸ್ಥರು ತಮ್ಮ ತಮ್ಮ ಅಂಗಡಿಗಳನ್ನು ಬೇಕಾದಾಗ ತೆರೆಯಬಹುದು, ೧-೨ ದಿನ ಬಂದ ಮಾಡಿದರೂ ನಡೆಯುತ್ತದೆ. ಆದರೆ ದೈನಿಕ ಪೇಪರ ಮಾರಾಟ ಹಾಗಾಗುವುದಿಲ್ಲ. ಒಂದು ದಿನ ತಡದರೆ ಅದು ದೈನಿಕವಾಗದೆ ರದ್ದಿ ಆಗಿಬಿಡುತ್ತದೆ. ಪೇಪರ ಹಂಚುವ ಹುಡುಗರು ಬಾರದಿದ್ದಾಗ (ಕೈಕೊಟ್ಟಾಗ) ಏಜೆಂಟರು ತಾವೇ ಸ್ವತಃ ಪೇಪರ ಹಂಚಬೇಕಾಗುತ್ತದೆ. ಅದಕ್ಕಾಗಿ ದ್ವಿತೀಯದೊಂದಿಗೆ ತೃತೀಯ ಹಾಗೂ ತನು ಸ್ಥಾನ

ಗಳನ್ನು ಪರಿಶೀಲಿಸಬೇಕಾಗುತ್ತದೆ. ಆದ್ದರಿಂದ ದ್ವಿತೀಯೇಶ–ತೃತೀಯೇಶ-ಲಗ್ನೇಶರು ಬಲಾಢ್ಯರಿದ್ದು ಹಾಗೂ ಈ ಸ್ಥಾನಗಳು ಬಲಾಢ್ಯರಿದ್ದವರು ಯಶಸ್ವಿ ನ್ಯೂಜ಼ಏಜೆಂಟರಾಗಬಲ್ಲರು.

**ಲಗ್ನ :—** ಲಗ್ನ ದಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಮಿಥುನ, ಸಿಂಹ, ಕನ್ಯಾ, ಧನು, ಮಕರ ಲಗ್ನದವರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

**ರಾಶಿ :—** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯವರು ನ್ಯೂಜ಼ಪೇಪರ ಎಜೆನ್ಸಿ ವೃತ್ತಿಯಲ್ಲಿ ನಿಷ್ಣಾತರಿರುತ್ತಾರೆ.

**೬) ಜಾಹೀರಾತ ಎಜೆನ್ಸಿ**

ಇಂದಿನದು ಪ್ರಚಾರ ಯುಗ. ಪ್ರಚಾರ ಯುಗದಲ್ಲಿ ಜಾಹೀರಾತು ಒಂದು ಮುಖ್ಯ ಸಾಧನವಾಗಿದೆ. ವಾಣಿಜ್ಯೋದ್ಯಮಿಗಳಿಗಂತೂ ಈ ಜಾಹೀರಾತು ಬೇಕೇಬೇಕು. ಇಂತು ಈ ಎಜೆನ್ಸಿ ವೃತ್ತಿ ಬೆಳೆಯಹತ್ತಿದೆ. ಈ ಜಾಹೀರಾತುಗಳಲ್ಲಿ ಕೂಡ ಅನೇಕ ಪ್ರಕಾರಗಳಿವೆ. ಅಲ್ಲದೆ ಜಾಹೀರಾತು ಗಳಲ್ಲಿಯೂ ಅನೇಕ ಸಾಧನಗಳಿವೆ, ಅನೇಕ ಮಾಧ್ಯಮಗಳಿವೆ. ಹೀಗಾಗಿ ಜಾಹೀರಾತ ಎಜೆನ್ಸಿ ವೃತ್ತಿ ಪ್ರಾರಂಭವಾಗಿದೆ. ಆದುದರಿಂದ ಜಾಹೀರಾತ ಎಜೆನ್ಸಿ ವೃತ್ತಿಯವರ ಕಾರಕ ಗ್ರಹಾದಿಗಳಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ:—** ಮಾರಾಟ–ಪ್ರಚಾರ-ಪ್ರಸಾರ–ಜಾಹೀರಾತ ಮೊದಲಾದವುಗಳಿಗೆ ಬುಧನು ಕಾರಕನು. ಆದುದರಿಂದ ಬುಧನು ಬಲಾಢ್ಯ ನಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗಲಾರರು. ಬುಧನ ತರುವಾಯ ಶುಕ್ರನ ಬಲಾಬಲವನ್ನು ಪರಿಶೀಲಿಸಬೇಕು. ಆಕರ್ಷಕವಾಗಿಯೂ ಪ್ರಭಾವಯುತವಾಗಿಯೂ ಪರಿಣಾಮಕಾರಕವಾಗಿಯೂ ಜಾಹೀರಾತನ್ನು ಸಿದ್ಧಪಡಿಸುವುದು ಕೂಡ ಒಂದು ಕಲೆ. ಆದುದರಿಂದ ಕಲಾಕಾರಕ ಗ್ರಹವಾದ

ಶುಕ್ರನ ಬಲಾಬಲವನ್ನೂ ಪರಿಶೀಲಿಸಬೇಕು. ಆದರೆ ಬುಧನು ರಾಶಿ ಬಲದವನೂ ಸ್ಥಾನ ಬಲದವನೂ ಇದ್ದರೆ ಶುಕ್ರನು ರಾಶಿ ಬಲದವ ಮಾತ್ರ ಇರಬಹುದು.

**ಕಾರಕ ಸ್ಥಾನ** :—ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಜಾಹೀರಾತ ಎಜನ್ಸಿ ವೃತ್ತಿಕಾರಕ ಸ್ಥಾನವೆಂದರೆ ಪಂಚಮ, ತೃತೀಯ. ಆದ ದರಿಂದ ಈ ಸ್ಥಾನಗಳೂ ಈ ಸ್ಥಾನಾಧೀಶರೂ ಬಲಾಢ್ಯರಿರಬೇಕು.

**ಲಗ್ನ**:— ಲಗ್ನ ದೃಷ್ಟಿಯಿಂದ ನೋಡಿದರೆ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಮಕರ, ಮೀನ ಈ ಲಗ್ನಗಳು ಕಾರಕವಿರುತ್ತವೆ.

**ರಾಶಿ**: — ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಮಿಥುನ, ತುಲಾ, ಕುಂಭ ರಾಶಿಯವರು, ತದನಂತರ ವೃಷಭ, ಕರ್ಕ, ಕನ್ಯಾ, ಮೀನ ರಾಶಿಯವರು ಈ ವೃತ್ತಿಯಲ್ಲಿ ನಿಷ್ಣಾತರಿರುವದು ಕಂಡುಬಂದಿದೆ.

## ೬) ವಿಭಿನ್ನ ವಸ್ತುಗಳ ಎಜೆನ್ಸಿ ( ಮಾರಾಟಗಾರ ಪ್ರತಿನಿಧಿ )

ಮಾರಾಟವು ಒಂದು ಕಲೆಯೇ. ಶ್ರೀಸಾಮಾನ್ಯನ ಆಕರ್ಷಣೆಯನ್ನು ಸೆಳೆದು ಆತನ ಆಸಕ್ತಿಯನ್ನು ಸೂರೆಗೊಳ್ಳುವುದು ಕಲೆಯಲ್ಲದೆ, ಬೇರಿನ್ನೇನು? ಈ ಕಲೆ ಕರಗತವಾಗುವುದು ಎಲ್ಲರಿಗೂ ಸಾಧ್ಯವಿಲ್ಲ. ಇದರಂತೆ ಈ ಯುಗವು ಹೇಗೆ ಪ್ರಚಾರಯುಗವಾದಿದೆಯೋ ಹಾಗೆಯೇ ಸ್ಪರ್ಧೆಯ ಯುಗವೂ ಆಗಿದೆ. ಸ್ಪರ್ಧಾತ್ಮಕ ದಿನಗಳಲ್ಲಿ ಯಶಸ್ವಿ ಮಾರಾಟ ಮಾಡಬೇಕಾದರೆ ಮಾರಾಟದ ತಂತ್ರವನ್ನು ಸಾಧಿಸಿಕೊಳ್ಳಬೇಕಾಗುತ್ತದೆ ವಿಭಿನ್ನ ವಸ್ತುಗಳ ಉತ್ಪಾದಕರು ತಮ್ಮ ತಮ್ಮ ಎಜೆನ್ಸಿಗಳ ಮೂಲಕ ಮಾರಾಟದ ಪ್ರತಿನಿಧಿಗಳನ್ನು ನಿಯಮಿಸುತ್ತಾರೆ. ಈ ಮಾರಾಟ ಪ್ರತಿನಿಧಿಗಳ ವೃತ್ತಿ ಚನ್ನಾಗಿ ನಡೆಯುತ್ತದೆ. ಆಕರ್ಷಕ ಸಂಬಳವಲ್ಲದೆ ವಾರ್ಷಿಕ ಬೋನಸ್ಸನ್ನೂ ಪ್ರವಾಸ ಭತ್ತೆಯನ್ನೂ ಊಟ-ಉಪಹಾರ-ವಸತಿಗಳ ಭತ್ತೆಯನ್ನೂ ಕೊಡುವುದಲ್ಲದೆ ಉತ್ತಮ ಮಾರಾಟಕ್ಕೆ ಬಹುಮಾನಾದಿ ಪ್ರೋತ್ಸಾಹಗಳನ್ನು ಸಹ ಕೊಡುವರು. ಅಂತೆಯೇ ಅನೇಕರು.

ಈ ವೃತ್ತಿ ಕೈಕೊಳ್ಳಲು ಹಾತೊರೆಯುತ್ತಾರೆ, ಆದರೆ ಎಲ್ಲರೂ ಇದರಲ್ಲಿ ಯಶಸ್ವಿಯಾಗುತ್ತಾರೆ ಎಂದು ಹೇಳಲುಬಾರದು. ಆದ್ದರಿಂದ ಈ ವೃತ್ತಿ ಕೈಕೊಳ್ಳುವವರ ಜಾತಕ ಹೇಗಿರುತ್ತದೆ, ಕಾರಕ ಗ್ರಹಾದಿಗಳಾವವು ಎಂಬು ದನ್ನು ಪರಿಶೀಲಿಸುವಾ.

**ಕಾರಕ ಗ್ರಹ:—** ಮಾಲಕನಾಗಿ ಯಾವದೆ ಮಾರಾಟ ಮಾಡಲಿ, ನೌಕರನಾಗಿ ಮಾರಾಟ ಮಾಡಲಿ, ಪಾಲುಗಾರಿಕೆಯಿಂದ ಮಾರಾಟ ಮಾಡಲಿ, ಕಮಿಶನ ಮೇಲಿಂದ ಮಾರಾಟ ಮಾಡಲಿ, ಠೋಕ ಮಾರಾಟ ಮಾಡಲಿ, ಕಿರುಕಳ ಮಾರಾಟ ಮಾಡಲಿ, ಏಜೆನ್ಸಿಯ ಮಾಲಕ ಮಾರಾಟ ಮಾಡಲಿ, ಇಲ್ಲವೆ ಮಾರಾಟದ ಪ್ರತಿನಿಧಿಯಾಗಿ ಮಾಡಲಿ, ಯಾವುದೇ ಸ್ವರೂಪದ ಮಾರಾಟ ಮಾಡುವ ವೃತ್ತಿಗೆ ಬುಧನು ಕಾರಕನು, ಬುಧನು ಬಲಾಢ್ಯ ನಿರದೆ ಯಾರೂ ಯಶಸ್ವೀ ಮಾರಾಟ ಪ್ರತಿನಿಧಿಯಾಗಲಾರರು, ಇಲ್ಲವೆ ಯಶಸ್ವಿ ಮಾರಾಟ ಏಜೆನ್ಸಿ ಪಡೆಯಲಾರರು. ಬುಧನ ತರುವಾಯ ಶುಕ್ರನ ಬಲಾಬಲವನ್ನು ಪರಿಶೀಲಿಸಬೇಕು. ಏಕೆಂದರೆ ಈ ಹಿಂದೆ ಹೇಳಿದಂತೆ ಮಾರಾಟವೂ ಒಂದು ಕಲೆ. ಈ ಕಲೆ ಹಸ್ತಗತವಾಗ ಬೇಕಾದರೆ ಕಲಾ ಪೋಷಕ ಗ್ರಹವಾದ ಶುಕ್ರನ ಬಲಾಬಲವನ್ನು ಪರೀಶೀ ಲಿಸಬೇಕು. ಆದರೆ ಶುಕ್ರನು ಕೇವಲ ರಾಶಿಬಲದವನಿದ್ದರೆ ಸಾಕು,

ಇನ್ನೊಂದು ಮಹತ್ವದ ಸಂಗತಿಯೆಂದರೆ— ಯಾವ ವಸ್ತುವಿನ ಮಾರಾಟ ಮಾಡಬೇಕಾಗಿದೆಯೋ ಆ ವಸ್ತುವಿನ ಕಾರಕಗ್ರಹಗಳ ಬಲಾಬಲ ವನ್ನೂ ಪರಿಶೀಲಿಸಬೇಕಾಗುತ್ತದೆ. ಉದಾಹರಣೆಗೆ— ಔಷಧಿ ಮಾರಾಟದ ಪ್ರತಿನಿಧಿಗೆ ಬುಧನೊಂದಿಗೆ ಶನಿ ಚಂದ್ರರನ್ನು, ಅಲಂಕಾರಿಕ ವಸ್ತುಗಳ ಮಾರಾಟ ಪ್ರತಿನಿಧಿಗೆ ಬುಧನೊಂದಿಗೆ ಶುಕ್ರನ ಬಲಾಬಲವನ್ನು ಪರಿಶೀ- ಲಿಸಬೇಕು. ಯಾವ ಯಾವ ವಸ್ತುಗಳಿಗೆ ಯಾವ ಯಾವ ಗ್ರಹಗಳು ಕಾರಕವೆಂಬುದನ್ನು ಇದೇ ಪುಸ್ತಕದ ೨ನೇ ಹಾಗೂ ೬ನೇ ಪ್ರಕರಣಗಳಲ್ಲಿ ವಿವರಿಸಲಾಗಿದೆ.

**ಕಾರಕ ಸ್ಥಾನ:—** ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ

ಯಾವುದೇ ಏಜೆನ್ಸಿಯ, ಯಾವುದೇ ಕಂಪನಿಯ, ಯಾವುದೇ ವಸ್ತುವಿನ ಮಾರಾಟ ಪ್ರತಿನಿಧಿಗೆ ದ್ವಿತೀಯ ಸ್ಥಾನವೇ ಮೂಲ ಹಾಗು ಮುಖ್ಯವಾಗುತ್ತದೆ. ಏಕೆಂದರೆ ಮಾರಾಟ ಪ್ರತಿನಿಧಿಗೆ ಮಾತುಗಾರಿಕೆಯು ಮಹತ್ವದ ಅಂಶವು. ಗ್ರಾಹಕರನ್ನು ಅಂದರೆ ಗಿರಾಕಿಗಳತ್ತ ಆಕರ್ಷಕ ನೋಟ, ಆಕರ್ಷಕ ಮಾತು, ಪ್ರಭಾವ ಪೂರಿತ ಶಬ್ದಗಳೇ, ಪರಿಣಾಮಕಾರಿ ಧ್ವನಿಯೇ ಅವಶ್ಯವಿರುತ್ತವೆ. ಆದುದರಿಂದ ವಾಕ್ ಸ್ಥಾನವಾದ ದ್ವಿತೀಯ ಸ್ಥಾನ, ದ್ವಿತೀಯೇಶ ಬಲಾಢ್ಯರಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು. ದ್ವಿತೀಯದ ನಂತರ ತನು ಸ್ಥಾನವೆಂದರೆ ಲಗ್ನ-ಲಗ್ನೇಶರ ಬಲಾಬಲವನ್ನು ಪರಿಶೀಲಿಸಬೇಕು. ಏಕೆಂದರೆ ಮಾರಾಟ ಪ್ರತಿನಿಧಿಗಳು ಆಕರ್ಷಕ ಪೋಷಾಕನ್ನು ಉಡಿಗೆ-ತೊಡಿಗೆಗಳನ್ನು ಹೊಂದಿರಬೇಕಾಗುತ್ತದೆ. ನೀವು ಔಷಧಿ ಮಾರಾಟದ ಪ್ರತಿನಿಧಿಗಳನ್ನು ನೋಡಿದರೆ ಇದು ನಿಮ್ಮ ಅನುಭವಕ್ಕೆ ಬಾರದೆ ಇರದು. ಒಳ್ಳೆ ಖಡಕ್ ಇಸ್ತ್ರಿ ಮಾಡಿದ ಗರಿಗರಿ ಸದ್ದಿನ ಸೂಟು, ಮುಖ ಕಾಣುವಂತೆ ಪಾಲಿಶ್ ಮಾಡಿದ ಶೂಜ(ಬೂಟ), ಅದಕ್ಕೆ ತಕ್ಕ ಇಸ್ತ್ರಿ ಮಾಡಿದ ಶರ್ಟ, ಚನ್ನಾಗಿ ಬಾಚಿಕೊಂಡ ತಲೆ, ಕೈಯಲ್ಲಿ ಆಕರ್ಷಕ ಚರ್ಮದ ಚೀಲಗಳೊಂದಿಗೆ ವಿಶ್ರಾಂತಿ ಕಾಣದ ಬಾಯಿ ಹೀಗಿರುವ ಪ್ರತಿನಿಧಿಗಳು ನಿಮಗೆ ಎಲ್ಲೆಲ್ಲೂ ಕಾಣಸಿಗುತ್ತಾರೆ. ಇದಕ್ಕೆ ವ್ಯಕ್ತಿಮತ್ವ (Personality) ವೆನ್ನಬಹುದು. ವ್ಯಕ್ತಿಮತ್ವವನ್ನು ದರ್ಶಿಸುವ ಸ್ಥಾನವೆಂದರೆ ತನು ಸ್ಥಾನ. ಆದುದರಿಂದ ಲಗ್ನ ಸ್ಥಾನ ಹಾಗೂ ಲಗ್ನೇಶರು ಬಲಾಢ್ಯರಿರುವ ಮಾರಾಟ ಪ್ರತಿನಿಧಿಗಳು ಗ್ರಾಹಕರನ್ನು ಆಕರ್ಷಿಸುವುದರಲ್ಲಿ ಸಫಲರಾಗುವರು.

**ಕಾರಕ ಲಗ್ನ:-** ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ, ಕರ್ಕ, ತುಲಾ, ಮೀನ ಈ ಲಗ್ನದವರು ಅನಂತರ ಮೇಷ, ಕನ್ಯಾ, ಲಗ್ನದವರು ಯಶಸ್ವಿ ಮಾರಾಟ ಪ್ರತಿನಿಧಿಗಳಾಗಬಲ್ಲರು.

**ರಾಶಿ: —** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಮಿಥುನ, ಕರ್ಕ, ತುಲಾ, ಕುಂಭ ಈ ನಾಲ್ಕು ರಾಶಿಯವರಂತೂ ಈ ವೃತ್ತಿಯಲ್ಲಿ ಪ್ರವೀಣರು. ಇವರ ನಂತರ ವೃಷಭ, ಕರ್ಕ, ಕನ್ಯಾ, ಮೀನ ರಾಶಿಯವರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

## ಪ್ರಾಯವೇಟ ಡಿಟೆಕ್ಟಿವ್ಹ ಹಾಗು ಸೆಕ್ಯೂರಿಟಿ ಏಜೆನ್ಸಿ

( ಖಾಸಗಿ ಪತ್ತೆದಾರಿ ಹಾಗೂ ರಕ್ಷಣಾ ದಳದ ವೃತ್ತಿ )

ಇನ್ನು ಖಾಸಗಿ ಪತ್ತೆದಾರಿ ಹಾಗೂ ರಕ್ಷಣಾ ದಳದ ಎಜೆನ್ಸಿ. ಇದು ಏಜೆನ್ಸಿಯೆಂದು ವಾಡಿಕೆಯಲ್ಲಿದ್ದರೂ ಕಾರ್ಯವಿಧಾನದಿಂದ ಇದು ಕಾಂಟ್ರಾಕ್ಟರ ವೃತ್ತಿಯಲ್ಲಿ ಬರುತ್ತದೆ. ಆದುದರಿಂದ ಈ ವಿಭಾಗದಲ್ಲಿ ಅದನ್ನು ಸಮಾವೇಶಗೊಳಿಸಲಾಗಿದೆ.

## ೨) ಕಾಂಟ್ರಾಕ್ಟರ ( ಗುತ್ತಿಗೆ ವ್ಯವಹಾರಸ್ಥರ ) ವೃತ್ತಿ

ಕಾಂಟ್ರಾಕ್ಟರ ವೃತ್ತಿಯ ಕಾರಕ ಗ್ರಹ ಯಾವುದೆಂಬುದನ್ನು ತಿಳಿಯುವ ಮೊದಲು ಕಾಂಟ್ರಾಕ್ಟರ ವೃತ್ತಿಯಲ್ಲಿಯ ಪ್ರಕಾರಗಳನ್ನು ತಿಳಿಯುವುದು ಅವಶ್ಯವು. ಏಕೆಂದರೆ ಕಾಂಟ್ರಾಕ್ಟರ ವೃತ್ತಿಯಲ್ಲಿ ಅನೇಕ ಪ್ರಕಾರಗಳಿದ್ದು ಒಂದು ಕಂಟ್ರಾಕ್ಟರ ವೃತ್ತಿಯಲ್ಲಿ ಯಶಸ್ವಿಯಾಗಲಿಲ್ಲ ಜಾತಕನು ಇನ್ನೊಂದು ಕಾಂಟ್ರಾಕ್ಟರ ವೃತ್ತಿಯಲ್ಲಿ ಯಶಸ್ವಿಯಾಗುತ್ತಾನೆಂದು ಹೇಳಲಾಗದು. ಆದುದರಿಂದ ಮೊದಲು ಕಾಂಟ್ರಾಕ್ಟರ ವೃತ್ತಿಯಲ್ಲಿಯ ಪ್ರಕಾರಗಳನ್ನು ಪರಿಶೀಲಿಸುವಾ.

### ಕಾಂಟ್ರಾಕ್ಟರ ವೃತ್ತಿಯಲ್ಲಿಯ ಪ್ರಕಾರಗಳು

ಕಾಂಟ್ರಾಕ್ಟರ ವೃತ್ತಿಯಲ್ಲಿ ಅನೇಕ ಪ್ರಕಾರಗಳಿದ್ದು ಮುಖ್ಯವಾಗಿ ಕೇವಲ ೬ ಪ್ರಕಾರದ ಕಾಂಟ್ರಾಕ್ಟರರ ಬಗೆಗೆ ಇಲ್ಲಿ ವಿವೇಚಿಸಲಾಗಿದೆ.

೧) ಸಿವಿಲ್ ಇಂಜಿನೀಯರಿಂಗ ಕಾಂಟ್ರಾಕ್ಟರರು

೨) ಸಾರಿಗೆ ಕಾಂಟ್ರಾಕ್ಟರರು

೩) ಅಡುಗೆ ಕಾಂಟ್ರಾಕ್ಟರರು

೪) ಫಾರೆಸ್ಟ ಕಾಂಟ್ರಾಕ್ಟರರು

೫) ಅಬಕಾರಿ ಕಾಂಟ್ರಾಕ್ಟರರು

೬) ಪತ್ತೆದಾರಿ ಹಾಗು ರಕ್ಷಣಾ ದಳದ ಕಾಂಟ್ರಾಕ್ಟರರು

ಇದಲ್ಲದೆ ಲಗ್ನ ಮಂಟಪ ಕಾಂಟ್ರಾಕ್ಟರರು, ವಸ್ತುಗಳ ಸರಬರಾಜು ಕಾಂಟ್ರಾಕ್ಟರರು ಹೀಗೆ ಅನೇಕರಿದ್ದಾರೆ.

### ೧) ಸಿವಿಲ್ ಇಂಜಿನಿಯರಿಂಗ ಕಾಂಟ್ರಾಕ್ಟರ ವೃತ್ತಿ

**ಕಾರಕ ಗ್ರಹ:—** ಯಾವುದೇ ಪ್ರಕಾರದ ಕಾಂಟ್ರಾಕ್ಟರರ ಮುಖ್ಯ ಗುಣಧರ್ಮವೆಂದರೆ ತಾವು ಮಾಡಿಕೊಂಡ ಒಪ್ಪಂದದ ಮೇರೆಗೆ ನಿಗದಿತ ಕೆಲಸವನ್ನು ನಿಗದಿತ ಸಮಯಕ್ಕೆ ನಿಗದಿತ ಹಣಕ್ಕೆ ಪೂರ್ತಿಗೊಳಿಸಿ ಕೊಡುವುದೇ ಮಹತ್ವದ ಅಂಶವು. ಈ ವೃತ್ತಿಯವರ ಮುಖ್ಯ ಸ್ವಭಾವಗುಣವೆಂದರೆ— ಇವರು ಧೈರ್ಯಶಾಲಿಗಳು, ಸಾಹಸಿಗಳು, ಉದ್ಯಮಶೀಲರು, ಸತತೋದ್ಯೋಗಿಗಳು, ದೃಢನಿಶ್ಚಯದವರು ಇರಬೇಕಾಗುತ್ತದೆ. ಮಳೆ-ಗಾಳಿ-ಬಿಸಿಲು-ಚಳಿಗಳನ್ನು ಲೆಕ್ಕಿಸದೆ ಹೊರಗಿನ ಕೆಲಸಗಳನ್ನು ಕೈಕೊಳ್ಳಬೇಕಾಗುತ್ತದೆ. ಈ ಗುಣಧರ್ಮದ ಕಾರಕನಾದ ಮಂಗಳನೇ ಈ ವೃತ್ತಿಗೆ ಕಾರಕ ಗ್ರಹವು. ಮಂಗಳನು ಬಲಾಢ್ಯನಿರದ ಯಾರೂ ಯಾವುದೇ ಪ್ರಕಾರದ ಕಾಂಟ್ರಾಕ್ಟ ವೃತ್ತಿಯಲ್ಲಿ ಯಶಸ್ವಿಯಾಗರು. ಮಂಗಳನ ಜೊತೆಯು ಉಳಿದ ಗ್ರಹಗಳ ಬಲಾಬಲವನ್ನೂ ಪರಿಶೀಲಿಸಬೇಕಾಗುತ್ತದೆ. ಏಕೆಂದರೆ ಹಿಂದೆ ಹೇಳಿದಂತೆ ಕಾಂಟ್ರಾಕ್ಟರ ವೃತ್ತಿಯಲ್ಲಿಯೂ ವಿವಿಧ ಪ್ರಕಾರಗಳಿದ್ದು ಒಂದು ರೀತಿಯ ಕಾಂಟ್ರಾಕ್ಟರ ವೃತ್ತಿಗೆ ಮಂಗಳನೊಂದಿಗೆ ಒಂದೊಂದು ಪ್ರಕಾರದ ಜಾಣ್ಮೆ-ತಜ್ಞತೆ ಬೇಕಾಗುತ್ತದೆ. ಆದುದರಿಂದ ವಿಭಿನ್ನ ಪ್ರಕಾರದ ಕಾಂಟ್ರಾಕ್ಟರ ವೃತ್ತಿಗೆ ಮಂಗಳನೊಂದಿಗೆ ಉಳಿದ ಗ್ರಹಗಳ ಬಲಾಬಲವನ್ನೂ ಪರಿಶೀಲಿಸಬೇಕಾಗುತ್ತದೆ. ಸಿವಿಲ್ ಇಂಜಿನಿಯರಿಂಗ ವೃತ್ತಿಗೆ ಮಂಗಳನೊಂದಿಗೆ ಶನಿಯ ಬಲಾಬಲವನ್ನೂ ಪರಿಶೀಲಿಸಬೇಕು. ಏಕೆಂದರೆ ರಸ್ತೆ-ರಹದಾರಿ-ಕಟ್ಟಡ-ಸೇತುವೆ-ಪೂಲ-ಕಾಲುವೆ ಮೊದಲಾದ ಕೆಲಸಗಳಿಗೆ ಬೇಕಾಗುವ ಕಬ್ಬಿಣ-ಉಕ್ಕು-ಕಲ್ಲು-ಇಟ್ಟಂಗಿ-ಉಸುಕು-ಕಟ್ಟಿಗೆ-ಕಂಡಿ-ಸಿಮೆಂಟ-ಗಚ್ಚು-ಮಣ್ಣು ಮೊದಲಾದ ವಸ್ತುಗಳಿಗೆ ಶನಿಯು ಕಾರಕನು. ಆದ್ದರಿಂದ ಸಿವಿ[ಲ್] ಕಾಂಟ್ರಾಕ್ಟರ ವೃತ್ತಿಗೆ ಮಂಗಳ-ಶನಿಯರು ಕಾರಕರು. ಆದರೆ ಮಂಗಳ[ನು] ರಾಶಿ ಬಲದವನೂ ಸ್ಥಾನ ಬಲದವನೂ ಇದ್ದರೆ, ಶನಿಯು [illegible]

ರಾಶಿಬಲದವನಿರಬಹುದು. ಆದರೆ ಕೆರೆ-ಕಾಲುವೆ-ಹೊಳೆ-ಹಳ್ಳ-ಬಾವಿ-ಬೋರ ವೆಲ್ಲ ಮೊದಲಾದ ನೀರು ಹಾಗೂ ನೀರಾವರಿಗೆ ಸಂಬಂಧಿಸಿದ ಕಾಂಟ್ರಾಕ್ಟ ವೃತ್ತಿಗೆ ಮಂಗಳ-ಶನಿಯರೊಂದಿಗೆ ಚಂದ್ರನ ಬಲಾಬಲವನ್ನೂ ಪರಿಶೀಲಿಸಬೇಕು, ಇಲ್ಲಿಯೂ ಅಷ್ಟೇ, ಮಂಗಳನು ರಾಶಿಬಲ ಬಲದವನೂ ಸ್ಥಾನ ಬಲದವನೂ ಇದ್ದರೆ, ಶನಿ-ಚಂದ್ರರು ಕೇವಲ ರಾಶಿ ಬಲದವರಿದ್ದರಾಯಿತು. ಇದರಂತೆ ವಾಸ್ತು ಶಿಲ್ಪಿಗಳಾಗಲಿ ಸಿವಿಲ್ ಇಂಜಿನೀಯರರಾಗಲಿ ಅವರೇ ಸ್ವಂತದ ಕಂಟ್ರಾಕ್ಟ ವೃತ್ತಿ ಕೈಕೊಂಡರೆ ಅದು ಕೂಡ ವಾಸಿಸುವ ಮನೆ-ಬಂಗ್ಲೆ. ಟಾಕೀಜ-ಕಲ್ಯಾಣ ಮಂಟಪ ಮೊದಲಾದ ಕಟ್ಟಡ ಕಟ್ಟುವ ಕಂಟ್ರಾಕ್ಟರರಿಗೆ ವೃತ್ತಿ ಕಾರಕನಾದ ಮಂಗಳನು ಕಟ್ಟಡದ ಕಾರಕನಾದ ಶನಿಯೊಂದಿಗೆ ವಾಸ್ತು ಶಿಲ್ಪಿಗಳ ಕಾರಕನಾದ ಶುಕ್ರ-ಚಂದ್ರರ ಬಲಾಬಲವನ್ನೂ ಪರಿಶೀಲಿಸಬೇಕು. ಇಲ್ಲಿಯೂ ಅಷ್ಟೇ, ಶನಿ-ಮಂಗಳರು ರಾಶಿ ಬಲದವರೂ ಸ್ಥಾನ ಬಲದವರೂ ಇದ್ದರೆ ಶುಕ್ರ-ಚಂದ್ರರು ಕೇವಲ ರಾಶಿ ಬಲದವರಿದ್ದರೂ .ನಡೆಯುತ್ತದೆ.

**ಕಾರಕ ಸ್ಥಾನ:—**

ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಯಾವುದೆ ಕಾಂಟ್ರಾಕ್ಟ ವೃತ್ತಿಗೆ ಅಷ್ಟಮ ಸ್ಥಾನವೇ ಮೂಲ ಹಾಗೂ ಮುಖ್ಯವಿರುತ್ತದೆ. ಏಕೆಂದರೆ ಕಂಟ್ರಾಕ್ಟ ವೃತ್ತಿಯಲ್ಲಿ ಲಾಭ-ಹಾನಿಯಲ್ಲಿ ಅನಿಶ್ಚಿತತೆರುತ್ತದೆ. ಆದುದರಿಂದ ಅಷ್ಟಮ ಸ್ಥಾನ,ಅಷ್ಟಮೇಶರು ಬಲಾಢ್ಯರಿರದೆ ಯಾರೂ ಯಾವುದೇ ಕಾಂಟ್ರಾಕ್ಟ ವೃತ್ತಿಯಲ್ಲಿ ಯಶಸ್ವಿಯಾಗರು. ಇನ್ನು ಸಿವಿಲ್ ಕಾಂಟ್ರಾಕ್ಟ ವೃತ್ತಿಯಲ್ಲಿ ಅಷ್ಟಮ ಸ್ಥಾನದೊಂದಿಗೆ ಲಗ್ನ-ತೃತೀಯ ಸ್ಥಾನಗಳನ್ನು ಪರಿಶೀಲಿಸಬೇಕಾಗುತ್ತದೆ. ಏಕೆಂದರೆ ಕಂಟ್ರಾಕ್ಟ ವೃತ್ತಿಯವರು ದೈಹಿಕವಾಗಿ ಸದೃಢರು, ಪರಿಶ್ರಮಿಗಳು ಇರಬೇಕಾಗುತ್ತದೆ. ಆದಕ್ಕಾಗಿ ಲಗ್ನ ಹಾಗೂ ಲಗ್ನೇಶರು ಬಲಾಢ್ಯರಿರಬೇಕಾಗುತ್ತದೆ. ಸಿವಿಲ್ ಕಾಂಟ್ರಾಕ್ಟ ವೃತ್ತಿಯವರು ಮೊದಲು ತಾವು ಬಂಡವಾಳವನ್ನಾದರೂ ತೊಡಗಿಸಬೇಕಾಗುತ್ತದೆ. ಆದಕ್ಕಾಗಿ ಪಂಚಮ ಸ್ಥಾನ-ಪಂಚಮೇಶರು ಬಲಾಢ್ಯರಿರಬೇಕಾಗುತ್ತದೆ, ಇದಲ್ಲದೆ ಇವರು ಸ್ವತಃ ಓಡಾಡಿ ಕೆಲಸ ಮಾಡಬೇಕಾಗುತ್ತದೆ. ಆದಕ್ಕಾಗಿ ತೃತೀಯ ಸ್ಥಾನ ತೃತೀಯೇಶರೂ

ಬಲಾಢ್ಯರಿರಬೇಕಾಗುತ್ತದೆ. ಹೀಗೆ ಅಷ್ಟಮ-ಲಗ್ನ-ತೃತೀಯ-ಪಂಚಮ ಸ್ಥಾನಗಳಲ್ಲಿ ಸ್ಥಾನಾಧೀಶರೂ ಬಲಾಢ್ಯರಿದ್ದವರು ಸಿವಿಲ್ ಕಾಂಟ್ರಾಕ್ಟ ವೃತ್ತಿ ಯಲ್ಲಿ ಯಶಸ್ವಿಯಾಗುತ್ತಾರೆ,

**ಕಾರಕಲಗ್ನ** :— ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ಕರ್ಕ, ಸಿಂಹ, ವೃಶ್ಚಿಕ, ಧನು, ಮಕರ ಈ ಲಗ್ನದವರು ಕಾಂಟ್ರಾಕ್ಟ ವೃತ್ತಿ ಯಲ್ಲಿ ಯಶಸ್ಸುಗಳಿಸುತ್ತಾರೆ. ಇವರ ನಂತರ ವೃಷಭ, ತುಲಾ, ಕುಂಭ ಲಗ್ನದವರೂ ಕೂಡ ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

**ರಾಶಿ** :— ರಾಶಿ ವೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿ ಯವರೇ ಕಾಂಟ್ರಾಕ್ಟ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆಂದು ಹೇಳಲು ಬಾರದು. ಪುರುಷ ರಾಶಿಯಲ್ಲಿ ಚಂದ್ರನಿದ್ದವರು ಹೆಚ್ಚಾಗಿರುವದು ಕಂಡು ಬರುತ್ತದೆ.

**ಯೋಗಗಳು** —:

(೧) ಲಗ್ನ-ಲಗ್ನೇಶ, ಅಷ್ಟಮ-ಅಷ್ಟಮೇಶ, ತೃತೀಯ-ತೃತೀಯೇಶ ಹಾಗೂ ಶನಿ-ಮಂಗಳ ಈ ಎಂಟು ಸಂಗತಿಗಳಲ್ಲಿ ಯಾವುದೇ ೫ ಸಂಗತಿಗಳು ಪೋಷಕವಿದ್ದವರು ಸಿವಿಲ್ ಕಾಂಟ್ರಾಕ್ಟ ವೃತ್ತಿಯಲ್ಲಿ ಯಶಸ್ವಿ ಯಾಗುತ್ತಾರೆ.

(೨) ಶನಿ, ಮಂಗಳ ಹಾಗೂ ಪುರುಷ ರಾಶಿಯಲ್ಲಿಯ ಚಂದ್ರನು ಬಲಾಢ್ಯನಿದ್ದವರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

(೩) ಶನಿ-ಮಂಗಳ ಹಾಗೂ ಅಷ್ಟಮ-ಅಷ್ಟಮೇಶರು ಬಲಾಢ್ಯ ರಿದ್ದವರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

೨) ಸಾರಿಗೆ ಕಾಂಟ್ರಾಕ್ಟರ ವೃತ್ತಿ

ಇನ್ನು ಸಾರಿಗೆ ಕಾಂಟ್ರಾಕ್ಟ ವೃತ್ತಿಯಲ್ಲಿಯೂ ಕೂಡ ಎರಡು ಪ್ರಕಾರ ದವರು ಇರುತ್ತಾರೆ. ಪ್ರಯಾಣಿಕರ ಸಾರಿಗೆ ವಾಹನಗಳು ಹಾಗು ಸಾಮಗ್ರಿ

ವಾಹನಗಳು. ಇವುಗಳ ವಿವರಣೆಯನ್ನು ಇದೇ ಗ್ರಂಥದ ೪ ನೇ ಪ್ರಕರಣದ ೧೪೬ ಪುಟದಿಂದ ೧೫೦ ಪುಟದವರೆಗೆ ನೀಡಲಾಗಿದೆ. ಪ್ರಸ್ತುತ ಇಲ್ಲಿ ನೋಡ ಬೇಕಾದ ಸಂಗತಿಯೆಂದರೆ— ಸಾರಿಗೆ ವೃತ್ತಿಕಾರಕ ಗ್ರಹ ಸ್ಥಾನ ಲಗ್ನಾದಿ ಗಳಲ್ಲದೆ ಕಂಟ್ರಾಕ್ಟ ವೃತ್ತಿಯ ಕಾರಕನಾದ ಮಂಗಳನೊಂದಿಗೆ ಕಂಟ್ರಾಕ್ಟ ವೃತ್ತಿಯ ಸ್ಥಾನವಾದ ಅಷ್ಟಮ ಹಾಗೂ ಅಷ್ಟಮೇಶರ ಬಲಾಬಲವನ್ನು ಪರಿಶೀಲಿಸಬೇಕು. ಇಲ್ಲಿ ಮಹತ್ವದ ಸಂಗತಿಯೆಂದರೆ— ಕಾಂಟ್ರಾಕ್ಟ ವೃತ್ತಿಯ ಕಾರಕ ಗ್ರಹ ಹಾಗೂ ಸ್ಥಾನ-ಸ್ಥಾನಾಧೀಶರು ರಾಶಿ ಬಲದವರೂ ಸ್ಥಾನ ಬಲದವರೂ ಇದ್ದರೆ, ಸಾರಿಗೆ ವೃತ್ತಿಯ ಕಾರಕ ಗ್ರಹ ಹಾಗೂ ಸ್ಥಾನಾಧೀಶರು ಕೇವಲ ರಾಶಿ ಬಲದವರಿರಬಹುದು.

## ೩) ಅಡುಗೆ ಕಂಟ್ರಾಕ್ಟ ವೃತ್ತಿ

ನಾವು ಹಿಂದೆ ಹೇಳಿದಂತೆ ಯಾವ ವ್ಯಕ್ತಿಗೂ ತನ್ನ ಎಲ್ಲ ಕೆಲಸ-ಕಾರ್ಯಗಳನ್ನು ತಾನೇ ಮಾಡಿಕೊಳ್ಳಲು ಸಾಧ್ಯವಾಗದಂಥ ಪರಿಸ್ಥಿತಿ ಇಂದು ನಿರ್ಮಾಣ ವಾಗಿದೆ. ಅದರಲ್ಲಿಯೂ ಮದುವೆ-ಮುಂಜವೆ-ಗೃಹಪ್ರವೇಶಗಳಂಥ ದೊಡ್ಡ ದೊಡ್ಡ ಸಮಾರಂಭಗಳಲ್ಲಿ ಬಂದಂಥ ಅತಿಥಿಗಳಿಗೆ ಊಟ-ಉಪಚಾರ ಕ್ಕಾಗಿ ಅಡುಗೆ ಕಾಂಟ್ರಾಕ್ಟ ಕೊಡುವ ಪದ್ಧತಿ ಇಂದು ಸರ್ವ ಸಾಮಾನ್ಯ ವಾಗಿದೆ. ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಮನೆಯ ಎಲ್ಲ ಸದಸ್ಯರು ಉದ್ಯೋಗ-ನೌಕರಿಗಾಗಿ ಹೊರಗಡೆ ಹೋಗುವುದೇ ಹೆಚ್ಚಾಗಿರುವುದರಿಂದ ಸಣ್ಣ ಪುಟ್ಟ ಸಮಾರಂಭಗಳಿಗೂ ಕೂಡ ಅಡುಗೆ ಕಾಂಟ್ರಾಕ್ಟ ಕೊಡುವುದು ಅನಿವಾರ್ಯ ಅಷ್ಟೇ ಅಲ್ಲಾ ಅತ್ಯವಶ್ಯವು ಆಗಹತ್ತಿದೆ. ಅಂತೆಯೇ ಅಡುಗೆ ಕಾಂಟ್ರಾಕ್ಟ ವೃತ್ತಿ ಈಗ ಚನ್ನಾಗಿ ನಡೆಯುಹತ್ತಿದೆ ಅದಾಗ್ಯೂ ಎಲ್ಲ ಅಡುಗೆ ಕಾಂಟ್ರಾಕ್ಟರ ವೃತ್ತಿ ಚನ್ನಾಗಿ ನಡೆಯುತ್ತಿದೆಯೆಂದು ಹೇಳಲಾಗದು. ಆದ್ದರಿಂದ ಫಲ ಜ್ಯೋತಿಷ್ಯದಲ್ಲಿ ಅಡುಗೆ ಕಾಂಟ್ರಾಕ್ಟರ ವೃತ್ತಿಯ ಕಾರಕ ಗ್ರಹಾದಿಗಳನ್ನು ಪರಿಶೀಲಿಸುವಾ.

**ಕಾರಕ ಗ್ರಹ :—** ಯಾವುದೇ ಕಾಂಟ್ರಾಕ್ಟ ವೃತ್ತಿಯ ಕಾರಕ ಗ್ರಹವಾದ ಮಂಗಳನೊಂದಿಗೆ ಖಾದ್ಯ-ಆಹಾರ ವಸ್ತುಗಳ ಕಾರಕನಾದ

ಚಂದ್ರನ ಬಲಾಬಲವನ್ನು ಪರಿಶೀಲಿಸಬೇಕು. ಆದರೆ ಒಂದು ಮಹತ್ವದ ಸಂಗತಿಯೆಂದರೆ, ಅಡುಗೆ ಕಾಂಟ್ರಾಕ್ಟ ವೃತ್ತಿಗೆ ಚಂದ್ರ-ಮಂಗಳರೀರ್ವರು ರಾಶಿ ಬಲದವರೂ ಸ್ಥಾನ ಬಲದವರೂ ಇರಬೇಕು. ಚಂದ್ರ-ಮಂಗಳರ ತರುವಾಯ ಸೇವಾ ಕಾರಕಗ್ರಹವಾದ ಶನಿಯು ಹಾಗೂ ಜನತೆಯ ಪ್ರೀತಿ-ವಿಶ್ವಾಸ ಗಳಿಸಲು ಸ್ತ್ರೀ ಗ್ರಹವಾದ ಶುಕ್ರನ ಗುಣಧರ್ಮವಿರುವದ ರಿಂದ ಶುಕ್ರನ ಬಲಾಬಲವನ್ನೂ ಪರಿಶೀಲಿಸಬೇಕು. ಆದರೆ ಶನಿ-ಶುಕ್ರರು ಕೇವಲ ರಾಶಿ ಬಲದವರಿರಬಹುದು.

**ಕಾಕರ ಸ್ಥಾನ**:— ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಕಾಂಟ್ರಾಕ್ಟ ವೃತ್ತಿಯ ಸ್ಥಾನವಾದ ಅಷ್ಟಮದೊಂದಿಗೆ ಖಾದ್ಯ ವಸ್ತುಗಳ ಸ್ಥಾನವೂ ಅಡುಗೆ ಸ್ಥಾನವೂ ಆದ ಚತುರ್ಥೇಶ ಬಲಾಢ್ಯರಿರಬೇಕಾಗುವ ದಲ್ಲದೆ ಅಡುಗೆ ಕಾಂಟ್ರಾಕ್ಟರರು ಸ್ವತಃ ಕೆಲಸ ಮಾಡಬೇಕಾಗುವದರಿಂದ ತೃತೀಯ ಸ್ಥಾನವನ್ನು ಪರಿಶೀಲಿಸಬೇಕಾಗುತ್ತದೆ. ಹೀಗೆ ಚತುರ್ಥ-ಅಷ್ಟಮ ತೃತೀಯ ಸ್ಥಾನಗಳೂ ಈ ಸ್ಥಾನಾಧೀಶರೂ ಬಲಾಢ್ಯರಿರುವ ಜಾತಕರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

**ಕಾರಕ ಲಗ್ನ**:— ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ಕರ್ಕ, ತುಲಾ, ವೃಶ್ಚಿಕ, ಮಕರ, ಮೀನ ಲಗ್ನದವರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

**ರಾಶಿ**:— ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಕರ್ಕ, ಕನ್ಯಾ, ಮೀನ ಈ ರಾಶಿಯವರು ತದನಂತರ ಮಿಥುನ, ತುಲಾ, ಕುಂಭ, ರಾಶಿಯವರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

**(೪) ಅರಣ್ಯ ಕಾಂಟ್ರಾಕ್ಟರರು(ಗುತ್ತಿಗೆದಾರರು)**

ಅರಣ್ಯ ಗುತ್ತಿಗೆ ವ್ಯವಹಾರವು ಬಹು ಪುರಾತನ ಕಾಲದಿಂದಲೂ ಬಂದಿದೆ. ಹಾಗೆ ನೋಡಿದರೆ ಸಿವಿಲ್ ಕಾಂಟ್ರಾಕ್ಟ ವೃತ್ತಿ ಹಾಗು ಅರಣ್ಯ ಕಾಂಟ್ರಾಕ್ಟ ವೃತ್ತಿ ಎರಡೇ ಕಾಂಟ್ರಾಕ್ಟ ವೃತ್ತಿಗಳು.ಇವೆರಡೂ ಮೊದಲಿನಿಂದ ಬಂದಿವೆ. ಉಳಿದ ಕಾಂಟ್ರಾಕ್ಟ ವೃತ್ತಿಗಳು ಇತ್ತೀಚಿನವು. ಏನೇ ಇರಲಿ,

ಅರಣ್ಯ ಕಾಂಟ್ರಾಕ್ಟ ವೃತ್ತಿಯ ಕಾರಕ ಗ್ರಹಾದಿಗಳನ್ನು ಪರಿಶೀಲಿಸುವಾ.

**ಕಾರಕ ಗ್ರಹ :—** ಕಟ್ಟಿಗೆಯ ಮೇಲೆ ಶನಿಯು ಕಾರಕನು ಆದುದರಿಂದ ಶನಿಯು ಬಲಾಢ್ಯನಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು. ಶನಿಯ ತರುವಾಯ ಮಂಗಳನ ಬಲಾಬಲವನ್ನು ಪರಿಶೀಲಿಸಬೇಕು. ಏಕೆಂದರೆ ಯಾವುದೇ ಕಾಂಟ್ರಾಕ್ಟ ವೃತ್ತಿಗೆ ಮಂಗಳನು ಕಾರಕನು. ಅದರ ಒಂದು ಮಹತ್ವದ ಸಂಗತಿಯೆಂದರೆ — ಶನಿ-ಮಂಗಳ ಈರ್ವರೂ ರಾಶಿ ಬಲದವರೂ ಸ್ಥಾನ ಬಲದವರೂ ಇರತಕ್ಕದ್ದು.

**ಕಾರಕ ಸ್ಥಾನ:—** ಕಾಂಟ್ರಾಕ್ಟ ವೃತ್ತಿಯ ಸ್ಥಾನವಾದ ಅಷ್ಟಮ ಸ್ಥಾನವಂತೂ ಬಲಾಢ್ಯವಿರಬೇಕು. ಅದರ ನಂತರ ಲಗ್ನ, ದಶಮಗಳನ್ನೂ ಪರಿಶೀಲಿಸಬೇಕು. ಏಕೆಂದರೆ ಅರಣ್ಯ ಕಾಂಟ್ರಾಕ್ಟರು ದೈಹಿಕವಾಗಿ ಸದೃಢರಿದ್ದು ಸ್ವತಃ ಅಡವಿಗೆ (ಜಂಗಲಿಗೆ) ಅರಣ್ಯಗಳಿಗೆ ಹೋಗಬೇಕಾಗುತ್ತದೆ. ಮಳೆ-ಗಾಳಿ-ಬಿಸಿಲು-ಚಳಿಗಳನ್ನು ತಡೆದುಕೊಳ್ಳಬೇಕಾಗುತ್ತದೆ. ಲಗ್ನ-ಲಗ್ನೇಶರು ಬಲಾಢ್ಯರಿರದೆ ಇದು ಸಾಧಿಸದು. ಅಲ್ಲದೆ ಯಾವುದೇ ಉದ್ಯೋಗದ ಸ್ಥಾನವಾದ ದಶಮವು ಪೂರಕವಿರಬೇಕು. ಹೀಗೆ ಅಷ್ಟಮ-ಲಗ್ನ-ದಶಮ ಸ್ಥಾನಗಳುಹಾಗೂ ಈ ಸ್ಥಾನಾಧೀಶರು ಬಲಾಢ್ಯರಿರುವವರು ಯಶಸ್ವಿಯಾಗುತ್ತಾರೆ.

**ಲಗ್ನ :—** ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ತುಲಾ, ವೃಶ್ಚಿಕ, ಮಕರ, ಕುಂಭ ಲಗ್ನದವರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

**ರಾಶಿ:—** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ಸಿಂಹ, ವೃಶ್ಚಿಕ, ಧನು, ಮಕರ, ಕುಂಭ ರಾಶಿಯವರು ತದನಂತರ ಮಿಥುನ, ತುಲಾ ರಾಶಿಯವರೂ ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

**ಯೋಗಗಳು:—**

(೧) ಶನಿ-ಮಂಗಳರು ಬಲಾಢ್ಯರಿದ್ದವರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

(೨) ಅನೇಕ ಗ್ರಹಗಳು ಪುರುಷ ರಾಶಿಯಲ್ಲಿರಬೇಕು.

೫) ಅಬಕಾರಿ ಕಾಂಟ್ರ್ಯಾಕ್ಟರರು

ಎಲ್ಲ ಕಾಂಟ್ರ್ಯಾಕ್ಟ ವೃತ್ತಿಗಳಲ್ಲಿ ಅಬಕಾರಿ ಕಾಂಟ್ರ್ಯಾಕ್ಟ ವೃತ್ತಿಗೆ ಇತ್ತೀಚೆಗೆ ಬಹಳ ಮಹತ್ವ ಬಂದಿದೆ. ಇಷ್ಟೇ ಅಲ್ಲಾ. ಈ ವೃತ್ತಿಯಲ್ಲಿ ಲಾಭಗಳು ಸುವಷ್ಟು ಬೇರಾವ ಗುತ್ತಿಗೆ ವ್ಯವಹಾರದಲ್ಲಿಯೂ ಲಾಭ ಗಳಿಸಲಾರರೆಂದರೆ ಅತಿಶಯೋಕ್ತಿ ಯಾಗಲಾರದು. ಇದಲ್ಲದೆ ಅಬಕಾರಿ ಕಾಂಟ್ರ್ಯಾಕ್ಟರರು ದೇಶದ ರಾಜಕೀಯವನ್ನೇ ಬದಲಾಯಿಸುವ ಮಟ್ಟಿಗೆ ಪ್ರಭಾವಶಾಲಿಯಾದವರು. ಆದ್ದರಿಂದ ಇಂಥ ವೃತ್ತಿಯನ್ನು ಕೈಕೊಳ್ಳುವವರ ಕಾರಕ ಗ್ರಹಾದಿಗಳನ್ನು ಪರಿಶೀಲಿಸೋಣ.

ಕಾರಕ ಗ್ರಹ :— ಎಲ್ಲ ಕಾಂಟ್ರ್ಯಾಕ್ಟ ವೃತ್ತಿಯ ಕಾರಕ ಗ್ರಹವಾದ ಮಂಗಳನಂತೂ ಈ ವೃತ್ತಿಗೆ ಕಾರಕನಿದ್ದು, ಇವನು ಸ್ಥಾನ ಬಲದವನೂ ರಾಶಿ ಬಲದವನೂ ಇರಬೇಕು. ಮಂಗಳನ ತರುವಾಯ ಅಬಕಾರಿ ವಸ್ತುಗಳ ಕಾರಕ ಗ್ರಹವಾದ ರಾಹುವಿನ ಬಲಾಬಲವನ್ನು ಪರಿಶೀಲಿಸಬೇಕು. ಮಂಗಳ-ರಾಹುಗಳು ಬಲಾಢ್ಯರಿದ್ದ ವ್ಯಕ್ತಿಗಳು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ. ಇಲ್ಲಿ ಮಹತ್ವದ ಅಂಶವೆಂದರೆ— ಮಂಗಳ-ರಾಹು ಎರಡು ಗ್ರಹಗಳು ರಾಶಿಬಲದವೂ ಸ್ಥಾನಬಲದವೂ ಇರಬೇಕು.

ಕಾರಕ ಸ್ಥಾನ :— ಕಾಂಟ್ರ್ಯಾಕ್ಟ ವೃತ್ತಿಯ ಸ್ಥಾನವಾದ ಅಷ್ಟಮ, ಅಷ್ಟಮೇಶ ಬಲಾಢ್ಯವಿರಬೇಕು. ಇದಲ್ಲದೆ ಇವರು ಅಧಿಕ ಮೊತ್ತದ ಹಣವನ್ನು ಸರಕಾರಕ್ಕೆ ಠೇವಣಿಯಾಗಿ ಇಡಬೇಕಾಗುವುದರಿಂದ ಠೇವಣಿ ಕಾರಕ ಸ್ಥಾನವಾದ ಪಂಚಮ-ಪಂಚಮೇಶರು ಬಲಾಢ್ಯರಿರಬೇಕು. ಅಲ್ಲದೆ ಲಗ್ನ-ದಶಮ ಸ್ಥಾನಗಳೂ ಸ್ಥಾನಾಧೀಶರೂ ಬಲಾಢ್ಯರಿರಬೇಕು. ಹೀಗೆ ಅಷ್ಟಮ-ಪಂಚಮ-ಲಗ್ನ-ದಶಮ ಸ್ಥಾನಗಳೂ ಸ್ಥಾನಾಧೀಶರೂ ಬಲಾಢ್ಯರಿದ್ದವರು ಈ ವೃತ್ತಿಯಲ್ಲಿ ಯಶಸ್ವಿಗಳಾಗುತ್ತಾರೆ.

ಕಾರಕ ಲಗ್ನ — ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ,

ಕರ್ಕ, ಸಿಂಹ, ವೃಶ್ಚಿಕ, ಧನು, ಮಕರ ಈ ಲಗ್ನದವರು ಲಚಕಾರಿ ಕಾಂಟ್ರಾಕ್ಟ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

**ರಾಶಿ :—** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಮಿಥುನ, ತುಲಾ, ಕುಂಭ ರಾಶಿಯವರೂ ತದನಂತರ ಮೇಷ, ಸಿಂಹ, ವೃಶ್ಚಿಕ, ಧನು ಈ ರಾಶಿಯವರೂ ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

ಖಾಸಗಿ ಪತ್ತೆದಾರಿ ಹಾಗೂ ರಕ್ಷಣಾ ದಳದ ವೃತ್ತಿಯು (ಪ್ರಾಯವೇಟ ಡಿಟೆಕ್ಟಿವ್ಹ ಎಂಡ ಸೆಕ್ಯೂರಿಟಿ ಎಜೆನ್ಸಿ) ಯು ಹೆಸರೇನೋ ಎಜೆನ್ಸಿ ಎಂದಿದ್ದಾಗ್ಯೂ ಇವರ ಕೆಲಸ ಗುತ್ತಿಗೆ ವ್ಯವಹಾರದಲ್ಲಿ ಬರುವುದರಿಂದ ಇದನ್ನು ಈ ಭಾಗದಲ್ಲಿ ಸಮಾವೇಶಗೊಳಿಸಲಾಗಿದೆ.

**೬) ಪ್ರಾಯವೇಟ ಡಿಟೆಕ್ಟಿವ್ಹ ಹಾಗೂ ಸೆಕ್ಯುರಿಟಿ ಏಜೆನ್ಸಿ (ಪತ್ತೆದಾರಿ ಹಾಗೂ ರಕ್ಷಣಾದಳದ ಕಾಂಟ್ರಾಕ್ಟರ ವೃತ್ತಿ)**

ಖಾಸಗಿ ಪತ್ತೇದಾರಿ ಹಾಗೂ ರಕ್ಷಣಾದಳದ ವೃತ್ತಿಗೆ ಇತ್ತೀಚೆಗೆ ಬಹಳ ಮಹತ್ವ ಬಂದಿದೆ. ಇಷ್ಟೇ ಅಲ್ಲಾ, ದಿನದಿಂದ ದಿನಕ್ಕೆ ಈ ಎಜೆನ್ಸಿಯವರಿಗೆ ಹೆಚ್ಚು ಬೇಡಿಕೆ ಬರಬಹುದಾಗಿದೆ. ಇದಕ್ಕೆ ಹಲವಾರು ಕಾರಣಗಳಿವೆ. ಆದರೂ ಪ್ರಾಮುಖ್ಯವಾಗಿ ಎರಡು ಕಾರಣಗಳು,

ಮೊದಲನೇದಾಗಿ ಸಂಪು ಬಂದ ಘೇರಾವೊ ಮೊದಲಾದ ಕೈಗಾರಿಕೆ ಕ್ಷೇತ್ರದಲ್ಲಿಯ ಅಶಾಂತತೆಯಿಂದಾಗಿ ಉದ್ಭವಿಸಿದ ಉಡಳಿತ ವರ್ಗದವರು (ಮಾಲಕರು) ತಮ್ಮ ಸಿಬ್ಬಂದಿಯ ಅಸಹಕಾರದಿಂದ ಇಲ್ಲವೆ ತಮ್ಮ ರಕ್ಷಣಾ ಸಿಬ್ಬಂದಿಯ ಮೇಲಿನ ಅವಿಶ್ವಾಸಪೂರಿತ ವಾತಾವರಣದಿಂದ ಇಂಥ ಖಾಸಗಿ ಪತ್ತೇದಾರಿ ಹಾಗೂ ರಕ್ಷಣಾ ದಳದವರಿಗೆ ಮೊರೆಹೊಗುವ ಪರಿಸ್ಥಿತಿ ಒದಗಿದೆ. ಇಷ್ಟೇ ಅಲ್ಲಾ, ಈಗ ನಾಡಿನಲ್ಲಿ ನಡೆಯುತ್ತಿರುವ ಕಳವು-ತುಡುಗು-ದರೋಡೆಗಳು ಹೆಚ್ಚಾಗಿರುವುದರಿಂದ ಅದರಲ್ಲಿಯೂ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಹೊರವಲಯದ ಬಡಾವಣೆಯಲ್ಲಿ ಹೆಚ್ಚಾಗಿರುವುದರಿಂದ ಇನ್ನುಮುಂದೆ ಬಡಾವಣೆಯ ನಾಗರಿಕರೂ ಸಹ ಈ ಖಾಸಗಿ ಪತ್ತೆದಾರಿ ಹಾಗೂ ರಕ್ಷಣಾದಳದ ಎಜೆನ್ಸಿಯನ್ನೇ

ಅವಲಂಬಿಸುವ ಪರಿಸ್ಥಿತಿ ಬಂದಿದೆ. ಅಂದರೆ ಈ ವರೆಗೆ ಕೇವಲ ಉದ್ಯಮದಾರರು ಹೆಚ್ಚಾಗಿ ಅವರ ಸೇವೆಯ ಲಾಭ ಪಡೆಯುತ್ತಿದ್ದಾರೆ. ಇನ್ನು ಇವರ ಕಾರ್ಯಕ್ಷೇತ್ರ ಹೆಚ್ಚಾಗಿ ಸಾಮಾನ್ಯ ನಾಗರಿಕರು ಕೂಡ ತಮ್ಮ ಆಸ್ತಿ ಹಾಗೂ ಪ್ರಾಣಗಳ ರಕ್ಷಣೆಗಾಗಿ ಇವರ ನೆರವು ಪಡೆಯ ಬಹುದಾಗಿದೆ. ಅಂದ ಬಳಿಕ ಇವರ ವೃತ್ತಿಗೆ ಎಷ್ಟು ಮಹತ್ವ ಬಂದಿದೆ ಎಂಬುದು ತಿಳಿದುಬರುತ್ತದೆ.

ಇನ್ನು ಎರಡನೇ ಕಾರಣವೆಂದರೆ— ಕೆಲ ಪ್ರತಿಷ್ಠಿತ–ಶ್ರೀಮಂತ-ಪ್ರಭಾವಿ–ಗಣ್ಯ ನಾಗರಿಕರು ತಮ್ಮ ಕುಟುಂಬದಲ್ಲಿಯ ಕೆಲ ವಿಷಯಗಳ ಸಂಶಯವನ್ನು ನಿವಾರಿಸಿಕೊಳ್ಳಲು ಇಲ್ಲವೆ ಪತ್ತೆ ಹಚ್ಚಲು ಇಲ್ಲವೆ ಖಚಿತವಾಡಿಕೊಳ್ಳಲು ಈ ಖಾಸಗಿ ಪತ್ತೆದಾರಿ ಸಂಸ್ಥೆಯ ನೆರವನ್ನು ಪಡೆಯುತ್ತಾರೆ. ಏಕೆಂದರೆ ಪೋಲಿಸರಿಗೆ ದೂರು ಕೊಟ್ಟರೆ ಮನೆತನದ ಗೌರವದ ಪ್ರಶ್ನೆ ಬರುತ್ತದೆ. ಆದರೆ ಈ ಪ್ರಕಾರದ 'ಕೆಲಸ ನಮ್ಮ ದೇಶದಲ್ಲಿ ಕಡಿಮೆ. ರಕ್ಷಣಾ ದಳದ ಕೆಲಸವೇ ಬಹಳ. ಆದ್ದರಿಂದ ಫಲ ಜ್ಯೋತಿಷ್ಯದಲ್ಲಿ ಇಂಥ ವೃತ್ತಿ ಕೈಕೊಳ್ಳಲು ಜಾತಕ ಹೇಗಿರುತ್ತವೆ, ಕಾರಕ ಗ್ರಹಾದಿಗಳಾವವು ಎಂಬದನ್ನು ಪರಿಶೀಲಿಸುವಾ,

**ಕಾರಕ ಗ್ರಹ :—** ಕಾಂಟ್ರಾಕ್ಟ ವೃತ್ತಿಯ ಕಾರಕನೂ ರಕ್ಷಣಾ ವ್ಯವಸ್ಥೆಯ ಕಾರಕನೂ ಆದ ಮಂಗಳನೇ ಈ ಎಜೆನ್ಸಿಯ ಕಾರಕ ಗ್ರಹವು. ಮಂಗಳ ಬಲಾಢ್ಯನಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿ ಯಾಗರು. ಮಂಗಳನ ತರುವಾಯ ಶನಿಯು ಕೂಡ ಈ ವೃತ್ತಿಗೆ ಕಾರಕನು. ಏಕೆಂದರೆ ತನಗೆ ಒಪ್ಪಿಸಿದ ಕೆಲಸ (ಅರ್ಥಾತ್ ತಾನು ಒಪ್ಪಂದ ಮಾಡಿಕೊಂಡಂತೆ) ವನ್ನು ನಿಷ್ಠೆಯಿಂದ ಮಾಡುವುದು ಶನಿಯ ಗುಣಧರ್ಮವು. ಆದರೆ ಮಂಗಳನು ರಾಶಿ ಬಲದವನೂ ಸ್ಥಾನ ಬಲದ ವನೂ ಇದ್ದರೆ, ಶನಿಯು ಕೇವಲ ರಾಶಿ ಬಲದವನಿದ್ದರೆ ಸಾಕು. ಕೇವಲ ರಕ್ಷಣಾ ದಳದ ಕೆಲಸ ಹೆಚ್ಚಾಗಿದ್ದ ಎಜೆನ್ಸಿಯವರಿಗೆ ಮಂಗಳ-ಶನಿಯರು ಕಾರಕರಿರಬೇಕು. ಪತ್ತೆದಾರಿ ಕೆಲಸ ಹೆಚ್ಚಾಗಿದ್ದ ಎಜೆನ್ಸಿಯವ ರಿಗೆ ಬುಧ–ಗುರುಗಳು ಬಲಾಢ್ಯರಿರಬೇಕು. ಆದರೆ ಇವರಿಗೂ ಕೂಡ

ಮಂಗಳನ ಬಲಾಬಲವಂತೂ ಬೇಕೇಬೇಕು. ಈ ಖಾಸಗಿ ಪತ್ತೇದಾರಿ ಹಾಗೂ ರಕ್ಷಣಾ ಎಜೆನ್ಸಿಯವರು ಆಧುನಿಕ ಸಂಪರ್ಕ ಸಾಧನಗಳನ್ನು ಬಳಸಬೇಕಾಗುವುದರಿಂದ ಸಂಪರ್ಕ ಸಾಧನಗಳ ಕಾರಕನಾದ ಬುಧನ ಬಲಾಬಲವನ್ನೂ ಪರಿಶೀಲಿಸಬೇಕು. ಆದರೆ ಒಂದು ಮಹತ್ವದ ಸಂಗತಿ ಯೆಂದರೆ — ಮಂಗಳನು ರಾಶಿ ಬಲದವನೂ ಸ್ಥಾನ ಬಲದವನೂ ಇದ್ದರೆ ಬುಧ-ಗುರು-ಶನಿಯರು ಕೇವಲ ರಾಶಿ ಬಲದವರಿದ್ದರಾಯಿತು.

**ಸ್ಥಾನ:—** ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ರಕ್ಷಣಾ ಕೆಲಸವೇ ಪ್ರಧಾನವಿರುವ ಎಜೆನ್ಸಿಯವರಿಗೆ ಲಗ್ನ-ತೃತೀಯ-ದಶಮ ಸ್ಥಾನಗಳು ಕಾರಕವಿದ್ದು ಈ ಸ್ಥಾನಗಳೂ ಸ್ಥಾನಾಧೀಶರೂ ಬಲಾಢ್ಯರಿರಬೇಕಾಗುತ್ತದೆ. ಆದರೆ ಪತ್ತೆದಾರಿ ಕೆಲಸ ಬಹಳವಿರುವ ಎಜೆನ್ಸಿಯವರಿಗೆ ಲಗ್ನ-ತೃತೀಯ-ದಶಮಗಳೊಂದಿಗೆ ಪಂಚಮ ಸ್ಥಾನ ಹಾಗೂ ಪಂಚಮೇಶರು ಬಲಾಢ್ಯರಿರ ಬೇಕಾಗುತ್ತದೆ.

**ಲಗ್ನ:—** ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ರಕ್ಷಣಾ ಕೆಲಸವೇ ಹೆಚ್ಚಾಗಿರುವ ಎಜೆನ್ಸಿಯವರಿಗೆ ಮೇಷ, ವೃಷಭ, ಕರ್ಕ, ಸಿಂಹ, ವೃಶ್ಚಿಕ, ಧನು, ಮಕರ ಈ ಲಗ್ನಗಳೇ ಕಾರಕವಿರುತ್ತದೆ, ಆದರೆ ಪತ್ತೇದಾರಿಯ ಕೆಲಸ ಹೆಚ್ಚಾಗಿದ್ದ ಎಜೆನ್ಸಿಯವರಿಗೆ ಮೇಷ, ವೃಷಭ, ಮಿಥುನ, ಸಿಂಹ, ಕನ್ಯಾ, ವೃಶ್ಚಿಕ, ಧನು, ಮೀನ ಈ ಲಗ್ನಗಳು ಕಾರಕವಿರುತ್ತದೆ.

**ರಾಶಿ:—** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ರಕ್ಷಣಾ ಕೆಲಸವೇ ಹೆಚ್ಚಾಗಿರುವ ಎಜೆನ್ಸಿಯವರು ಮೇಷ, ಸಿಂಹ, ವೃಶ್ಚಿಕ, ಧನು, ಮಕರ ರಾಶಿಯವರು ಇದ್ದರೆ ಪತ್ತೆದಾರಿ ಕೆಲಸ ಹೆಚ್ಚಾಗಿರುವ ಎಜೆನ್ಸಿಯವರು ಮಿಥುನ, ತುಲಾ, ಕುಂಭ, ವೃಷಭ, ಕರ್ಕ, ಕನ್ಯಾ, ಮೀನ ರಾಶಿಯವ ರಿರುವುದು ಕಂಡುಬರುತ್ತದೆ.



# ೮

## ಕಲಾಕಾರರು ಹಾಗೂ ಕುಶಲ ಕರ್ಮಿಗಳ ವೃತ್ತಿ

### ಕಲಾಕಾರರ ವೃತ್ತಿ

ಸದ್ಯದ ಯಾಂತ್ರಿಕ ಯುಗದಲ್ಲಿ ಮಾನವನು ತೆರಪಿಲ್ಲದೆ ದುಡಿದರೂ ಸಮಸ್ಯೆಗಳ ಸುಳಿಯಲ್ಲಿ ಸಿಕ್ಕಿರುವದರಿಂದ ಆತನಿಗೆ ಸುಖ-ಶಾಂತಿ-ಸಮಾಧಾನ ಇಲ್ಲದಾಗಿದೆ, ಈ ಸ್ಥಿತಿಗತಿಯನ್ನು ಕಲೆಗಳು ಮಾತ್ರ ನಿವಾರಿಸಬಲ್ಲವು. ಆದುದರಿಂದ ಆತನಿಗೆ ಮನರಂಜನೆಗಳು ಅನಿವಾರ್ಯವಾದಿರುತ್ತವೆ. ಮನರಂಜನೆಯಿಲ್ಲದ ಬಾಳು ಬರಡು. ಅಂತೆಯೇ ಕಲಾಕಾರರು ಈ ಯುಗದಲ್ಲಿ ಮಹತ್ವದ ಸ್ಥಾನವನ್ನು ಹೊಂದಿರುತ್ತಾರೆ. ಆದುದರಿಂದ ಕಲಾಕಾರ ವೃತ್ತಿಯ ಕಾರಕ ಗ್ರಹ ಸ್ಥಾನ ಲಗ್ನ ರಾಶಿಗಳು ಯಾವುವು ಎಂಬುದನ್ನು ಪರಿಶೀಲಿಸುವಾ.

ಕಲಾಕಾರರ ವೃತ್ತಿಗೆ ಕಾರಕ ಗ್ರಹ ಯಾವವು ಎಂಬುದನ್ನು ತಿಳಿಯುವ ಮೊದಲು ಕಲಾಕಾರರಲ್ಲಿಯ ಪ್ರಕಾರಗಳನ್ನು ತಿಳಿಯುವುದು ಅವಶ್ಯವು. ಕಲಾಕಾರ ವೃತ್ತಿಯಲ್ಲಿ ಅನೇಕ ಪ್ರಕಾರಗಳಿದ್ದು ಒಂದು ಕಲಾಕಾರ ವೃತ್ತಿಯಲ್ಲಿ ಯಶಸ್ವಿಯಾಗಬಲ್ಲ ಜಾತಕನು ಇನ್ನೊಂದು ಕಲಾಕಾರ ವೃತ್ತಿಯಲ್ಲಿ ಯಶಸ್ವಿಯಾಗುತ್ತಾನೆಯೆಂದು ಹೇಳಲಿಕ್ಕಾಗದು. ಆದುದರಿಂದ ಮೊದಲು ಕಲಾಕಾರ ವೃತ್ತಿಯಲ್ಲಿಯ ಪ್ರಕಾರಗಳನ್ನು ಪರಿಶೀಲಿಸುವಾ.

### ಕಲಾಕಾರ ವೃತ್ತಿಯಲ್ಲಿಯ ಪ್ರಕಾರಗಳು

ಕಲೆಗಳಲ್ಲಿ ೬೪ ವಿದ್ಯೆಗಳನ್ನು ಸೇರಿಸಲಾಗಿದೆಯೆಂದು ಮೇಲೆ ಕಲೆಗಳ-. ಅದರಲ್ಲಿಯೂ ಲಲಿತ ಕಲೆಗಳ— ಮಾಹಿತಿ ಹಾಗು ವ್ಯಾಪ್ತಿಗಳ ಸ್ಥೂಲ

ಕಲ್ಪನೆ ಬರುವಂತಿದೆ. ಇಂತು ಲಲಿತ ಕಲೆಗಳ ಕುರಿತೇ ಒಂದು ಜ್ಯೋತಿಷ್ಯ ಗ್ರಂಥ ಬರೆಯುವಷ್ಟು ಅದು ವಿಸ್ತಾರವಾಗಿದೆ.

ಆದರೆ ಆರು ಕಲಾಕಾರ ವೃತ್ತಿಗಳು ಬಗೆಗೆ ಮಾತ್ರ ಇಲ್ಲಿ ವಿವರಿಸಲಾಗಿದೆ. ಅವಾವುವೆಂದರೆ:

(೧) ಚಿತ್ರ ಕಲಾಕಾರ ಹಾಗು ಬಣ್ಣದ (ವರ್ಣ) ಕಲಾಕಾರ ವೃತ್ತಿಯವರು

(೨) ಫೋಟೋಗ್ರಾಫರ (ಛಾಯಾ ಗ್ರಹಣ) ವೃತ್ತಿ

(೩) ನೃತ್ಯಕಾರರ ವೃತ್ತಿ

(೪) ಸಂಗೀತಕಾರರು

(೫) ವಾದ್ಯಕಾರರು

(೬) ಸೌಂದರ್ಯ ವರ್ಧನಾ ತಜ್ಞರು (ಬ್ಯುಟಿ ಪಾರ್ಲರ)

(೭) ಲೇಖಕರು

(೮) ಜ್ಯೋತಿಷಿಗಳು

ಈ ಎಂಟು ಪ್ರಕಾರದ ಕಲಾಕಾರ ವೃತ್ತಿಯವರಲ್ಲಿ ಕೊನೆಯ ಎರಡು ಕಲಾಕಾರ ವೃತ್ತಿಯವರಾದ ಸಾಹಿತಿಗಳು ಹಾಗು ಜ್ಯೋತಿಷಿಗಳ ವಿಷಯವಾಗಿ ಇದೇ ಪುಸ್ತಕದ ೩ನೇ ಪ್ರಕರಣದ ಬುದ್ಧಿ ಜೀವಿಗಳ ವೃತ್ತಿ ಬಗೆಗೆ ಪುಟ ೧೧೬ ರಿಂದ ಪುಟ ೧೪೫ ರ ವರೆಗೆ ವಿವರಿಸಲಾಗಿದ್ದು ಉಳಿದ ಆರು ಕಲಾಕಾರ ವೃತ್ತಿಯವರ ವಿಷಯವಾಗಿ ಇಲ್ಲಿ ಚರ್ಚಿಸಲಾಗಿದೆ.

### (೧) ಚಿತ್ರಕಾರರು ಹಾಗೂ ಬಣ್ಣದ(ವರ್ಣ) ಕಲಾಕಾರ ವೃತ್ತಿಯವರು

**ಕಾರಕ ಗ್ರಹ :—** ಈ ಹಿಂದೆ ಅನೇಕ ಬಾರಿ ಹೇಳಿದಂತೆ ಯಾರಿಗಾದರೂ ಯಾವುದೆ ಲಲಿತ ಕಲೆ ಕರಗತವಾಗಲು— ಆದೇಕೆ, ಯಾವುದೇ ಕಲಾ ವೃತ್ತಿಯನ್ನು ಕೈಕೊಳ್ಳುವವರಿಗೆ ಶುಕ್ರನು ಬಲಾಢ್ಯನಿರಲೇಬೇಕು. ಅದರಂತೆಯೇ ಚಿತ್ರಗಾರರಿಗೂ ಹಾಗೂ ಬಣ್ಣದ

ಕಲಾಕಾರ ವೃತ್ತಿಯವರಿಗೂ ಕೂಡ ಶುಕ್ರನು ಬಲಾಢ್ಯನಿರಲೇಬೇಕು. ಚಿತ್ರಗಾರನಿಗೆ ಶುಕ್ರನೋರ್ವನೆ ಬಲಾಢ್ಯನಿದ್ದರೆ ನಡೆದೀತು. ಆದರೆ ಬಣ್ಣದ ಕಲಾಕಾರರಿಗೆ ಶುಕ್ರನೊಂದಿಗೆ ಚಂದ್ರ–ರಾಹು ಗ್ರಹಗಳ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ. ಏಕೆಂದರೆ ಎಲ್ಲ ಚಿತ್ರಕಾರರೂ ಬಣ್ಣದ ಕಲೆಯಲ್ಲಿ ಪ್ರವೀಣರಿರುತ್ತಾರೆ ಎಂದು ಹೇಳಲುಬಾರದು. ಚಿತ್ರ ಕಲೆಯಂತೆ ಬಣ್ಣದ ಕಲೆಯೂ ಒಂದು ಸ್ವತಂತ್ರ ಕಲೆಯಾಗಿದ್ದು ಅದು ತುಂಬ ಮಹತ್ವದ್ದು ಇರುತ್ತದೆ. ಆಯಾ ಸನ್ನಿವೇಶಗಳಿಗೆ ಹಾಗು ಆಯಾ ರಸಗಳಿಗೆ ತಕ್ಕಂತೆ ಬಣ್ಣಗಳನ್ನು ಹಚ್ಚುವದು ಒಂದು ವಿಶಿಷ್ಟ ಕಲೆಯಲ್ಲದೆ ಮತ್ತೇನು? ಉದಾಹರಣೆಗೆ— ಶೃಂಗಾರ ಪ್ರಧಾನವಾದ ಚಿತ್ರಗಳಿಗೆ ಡಾರ್ಕ ಬ್ರೌನ್ ( ದಪ್ಪ ಕಂದು) ಬಣ್ಣ, ವೀರರಸಕ್ಕೆ ಬಂಗಾರದ ಬಣ್ಣ, ಕರುಣಾ ರಸಕ್ಕೆ–ಪಾರಿವಾಳದ, ರೌದ್ರ ರಸಕ್ಕೆ ಕೆಂಪು, ಹಾಸ್ಯಕ್ಕೆ ಬಿಳಿ, ಭಯಾನಕಕ್ಕೆ ಕಪ್ಪು, ಭೀಭತ್ಸಕ್ಕೆ ನೀಲಿ, ಅದ್ಭುತಕ್ಕೆ ಹಳದಿ, ಶಾಂತಕ್ಕೆ ಬಿಳಿ ಮಿಶ್ರಿತ ಹಳದಿ ಇಲ್ಲವೆ ಹಸಿರು ಹೀಗೆ ಆಯಾ ರಸಗಳಿಗನುಗುಣವಾದ ಚಿತ್ರಗಳಿಗೆ ಆಯಾ ಬಣ್ಣವನ್ನು ಲೇಪಿಸುವುದು ಒಂದು ಸೂಕ್ಷ್ಮ ಕಲೆಯೇ ಸರಿ. ಈ ಕಲೆ ಕರಗತವಾಗಲು ಶುಕ್ರನೊಂದಿಗೆ ಚಂದ್ರ–ರಾಹುಗಳು ಪೋಷಕ ವಿರಬೇಕು. ಅದರಲ್ಲಿಯೂ ರಾಹು ಬಣ್ಣದ ಕಲಸಕ್ಕೆ ಹೆಚ್ಚು ಪೋಷಕನು. ಆದರೆ ಚಿತ್ರಕಲೆಯ ಹಾಗು ಬಣ್ಣದ ಕಲೆಯ ಸ್ವತಂತ್ರ ಶಿಕ್ಷಕ ವೃತ್ತಿ ಕೈಕೊಳ್ಳುವವರಿಗೆ ಶುಕ್ರನೊಂದಿಗೆ ಶಿಕ್ಷಕ ವೃತ್ತಿಯ ಕಾರಕವಾದ ಗುರುವನ್ನು ಪರಿಶೀಲಿಸಬೇಕು. ಇದರಂತೆ ವಾಣಿಜ್ಯ ಚಿತ್ರಕಲಾಕಾರ ( ಕಮರ್ಶಿಯಲ್ ಆರ್ಟಿಸ್ಟ) ವೃತ್ತಿಯವರಿಗೆ ಕಲಾಕಾರಕ ಶುಕ್ರನೊಂದಿಗೆ ವಾಣಿಜ್ಯ ಕಾರಕ ಬುಧನನ್ನು ಪರಿಶೀಲಿಸಬೇಕು. ಆದರೆ ಇಲ್ಲಿ ಮಹತ್ವದ ಸಂಗತಿಯೆಂದರೆ – ಶುಕ್ರನು ರಾಶಿ ಬಲದವನೂ ಸ್ಥಾನ ಬಲದವನೂ ಇದ್ದಾಗ ಚಂದ್ರ-ರಾಹು-ಗುರು–ಬುಧರು ಕೇವಲ ರಾಶಿ ಬಲದವರಿದ್ದರೆ ಸಾಕು.

ಸ್ಥಾನ:— ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಚಿತ್ರ ಕಲಾಕಾರ ಹಾಗೂ ಬಣ್ಣದ ಕಲಾಕಾರ ವೃತ್ತಿಯವರಿಗೆ ತೃತೀಯ–ಪಂಚಮ–ಲಗ್ನ

ಸ್ಥಾನ–ಸ್ಥಾನಾಧೀಶರು ಕಾರಕರು. ಏಕೆಂದರೆ ಚಿತ್ರಕಾರನ, ಬಣ್ಣಕಾರನ ಮನಸ್ಸು ಚಿತ್ರದಲ್ಲಿ ಬಣ್ಣದಲ್ಲಿ ಮಗ್ನವಾಗಲು ಅಭಿರುಚಿ–ಆಸಕ್ತಿ–ತಲ್ಲೀನತೆ ಉಂಟಾಗಲು ಜಾತಕದಲ್ಲಿ ಲಗ್ನ–ಲಗ್ನೇಶರು ಬಲಾಢ್ಯರಿರಬೇಕಾಗುತ್ತದೆ. ಇದರಂತೆ ದುಂಡಾದ ಅಕ್ಷರ, ಉತ್ತಮ ಬಣ್ಣ ಬಳೆಯುವಿಕೆ ಕೌಶಲ್ಯಕ್ಕಾಗಿ ತೃತೀಯ ಸ್ಥಾನ ಹಾಗೂ ತೃತೀಯೇಶರು ಬಲಾಢ್ಯರಿರಬೇಕಾಗುತ್ತದೆ. ಇದರಂತೆ ವಾಣಿಜ್ಯ ಕಲಾವೃತ್ತಿಗಾಗಿ ಹಾಗು ಚಿತ್ರಕಲೆ, ಬಣ್ಣದ ಕಲೆಗಳಲ್ಲಿ ಗಾಢವಾದ ಜ್ಞಾನ ಹೊಂದಲು ಪಂಚಮ ಸ್ಥಾನ ಹಾಗೂ ಪಂಚಮೇಶರ ಬಲಾಬಲವನ್ನು ಪರಿಶೀಲಿಸಬೇಕು. ಚಿತ್ರಕಲೆಯ, ಬಣ್ಣದ ಕಲೆಯ ಶಿಕ್ಷಕ ವೃತ್ತಿ ಕೈಕೊಳ್ಳಲು ದ್ವಿತೀಯ ಸ್ಥಾನ ಹಾಗೂ ದ್ವಿತೀಯೇಶರು ಬಲಾಢ್ಯರಿರಬೇಕು. ಕೇವಲ ಚಿತ್ರಕಲೆ ಹಾಗೂ ಬಣ್ಣದ ಕಲೆ ವೃತ್ತಿಯವರಿಗೆ ಲಗ್ನ ಹಾಗೂ ತೃತೀಯ ಈ ಎರಡೇ ಎರಡು ಸ್ಥಾನಗಳು ಹಾಗೂ ಈ ಸ್ಥಾನಾಧೀಶರು ಬಲಾಢ್ಯರಿದ್ದರೆ ನಡೆದೀತು.

ಲಗ್ನ :— ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಮಿಥುನ, ಕರ್ಕ, ತುಲಾ ಮೀನ, ಕುಂಭ ಈ ಲಗ್ನದವರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

**ರಾಶಿ:**— ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಕೇವಲ ಚಿತ್ರಕಾರರು ಬಣ್ಣದ ಕಲಾಕಾರ ವೃತ್ತಿಗೆ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯವರಿರುವುದು ಕಂಡುಬರುತ್ತದೆ. ಆದರೆ ವಾಣಿಜ್ಯ ಚಿತ್ರಕಲಾ ಬಣ್ಣದ ಕಲಾವೃತ್ತಿಯವರಿಗೆ ಹೆಚ್ಚಾಗಿ ವೃಷಭ, ಮಿಥುನ, ಕನ್ಯಾ, ತುಲಾ, ಧನು, ಕುಂಭ ಈ ರಾಶಿಯವರಿರುವುದು ಕಂಡುಬರುತ್ತದೆ. ಇದರಂತೆ ಸ್ವತಂತ್ರವಾಗಿ ಶಿಕ್ಷಕ ವೃತ್ತಿ ಕೈಕೊಳ್ಳುವವರು ಹೆಚ್ಚಾಗಿ ಮಿಥುನ, ತುಲಾ, ಕುಂಭ, ಕರ್ಕ, ಧನು, ಮೀನ ರಾಶಿಯವರಿರುವುದು ಕಂಡುಬರುತ್ತದೆ.

## ಫೋಟೋಗ್ರಾಫಿ ವೃತ್ತಿ ( ಛಾಯಾ ಚಿತ್ರಗ್ರಹಣ ವೃತ್ತಿ) ಹಾಗು ಝೇರಾಕ್ಸ ಪ್ರಿಂಟರ್ಸ, ಬ್ಲಾಕ್ ಮೇಕರ್ಸ

ಫೋಟೋಗ್ರಾಫೀ ವೃತ್ತಿಗೆ ಇಂದು ಬಹಳ ಮಹತ್ವ ಹಾಗೂ ಬೇಡಿಕೆ

ಬಂದಿದೆ. ಒಂದು ಕಾಲವಿತ್ತು, ಫೋಟೋ ತೆಗೆಸಿದರೆ ಆಯುಷ್ಯ ಕಡಿಮೆ ಆಗುತ್ತದೆಂಬ ತಪ್ಪು ತಿಳುವಳಿಕೆ ಜನಸಾಮಾನ್ಯರಲ್ಲಿತ್ತು. ಇಂದು ಕಾಲ ಬದಲಾಗಿದೆ. ಮಗುವಿನ ಜನನದಿಂದ ಫೋಟೋ ತೆಗೆಸುವ ಕೆಲಸ ಪ್ರಾರಂಭವಾಗಿ ವೃದ್ಧಾಪ್ಯದಿಂದ ಸಾಯುವವರೆಗೂ, ಕೆಲವೆಡೆ ಸತ್ತ ನಂತರವೂ ಶವದ್ದೂ ಸಹ, ಫೋಟೋ ತೆಗೆಯಿಸುವ ಪ್ರಸಂಗ ಜೀವನದಲ್ಲಿ ಅನೇಕ ಬಾರಿ ಬರುತ್ತದೆ. ಇದಲ್ಲದೆ ಮಕ್ಕಳನ್ನು ಶಾಲೆಗೆ ದಾಖಲು ಮಾಡುವಾಗ, ಪ್ರವೇಶ ಪತ್ರದೊಂದಿಗೆ ಮಕ್ಕಳ ಫೋಟೋ ಹಚ್ಚಲೇ ಬೇಕಾಗಿದೆ. ಅಲ್ಲದೆ ಶಾಲೆ-ಕಾಲೇಜುಗಳಲ್ಲಿ ಕಲಿಯುತ್ತಿರುವ ವಿದ್ಯಾರ್ಥಿಗಳು ಪ್ರಯಾಣಕ್ಕಾಗಿ ರಿಯಾಯತಿ ದರದಲ್ಲಿ ಪಾಸುಗಳನ್ನು ಪಡೆಯುವದಕ್ಕಾಗಿ ಗುರುತಿನ ಚೀಟಿ (ಐಡೆಂಟಿಟಿ ಕಾರ್ಡ)ಯೊಂದಿಗೆ ಸಣ್ಣ ಸಾಯಿಜಿನ ಫೋಟೋ ಹಚ್ಚಲೇಬೇಕಾಗುತ್ತದೆ. ಅಲ್ಲದೆ ನೌಕರಿಗಾಗಿ ಅರ್ಜಿ ಸಲ್ಲಿಸುವವರು ತಮ್ಮ ಅರ್ಜಿಯೊಂದಿಗೆ ತಮ್ಮ ಫೋಟೋ ಹಚ್ಚಬೇಕಾಗುತ್ತದೆ. ನಿವೃತ್ತ ನೌಕರರು ನಿವೃತ್ತಿ ವೇತನ ಪಡೆಯುವ ಕುರಿತು ತಮ್ಮ ಫೋಟೋ ಹಚ್ಚಬೇಕಾಗುತ್ತದೆ. ಬ್ಯಾಂಕಿನಿಂದ ಸಾಲ ಪಡೆಯುವವರು ತಮ್ಮ ಗುರುತಿನ ಫೋಟೋ ಹಚ್ಚಬೇಕಾಗುತ್ತದೆ. ಪರದೇಶಕ್ಕೆ ಪ್ರಯಾಣಿಸುವವರು, ತಮ್ಮ ಪಾಸಪೋರ್ಟ ಪಡೆಯುವಾಗ ಫೋಟೋ ಹಚ್ಚಬೇಕಾಗುತ್ತದೆ. ಮದುವೆ-ಮುಂಜಿ-ದತ್ತಕ-ಗೃಹಪ್ರವೇಶ ಮೊದಲಾದ ಕೌಟುಂಬಿಕ ಸಮಾರಂಭಗಳಲ್ಲಿ ಕುಟುಂಬದ ಎಲ್ಲ ಸದಸ್ಯರ ಫೋಟೋ ತೆಗೆಸುವದು ಸರ್ವಸಾಮಾನ್ಯ ಸಂಗತಿ. ಅಲ್ಲದೆ ರಾಜಕೀಯ-ಸಾಮಾಜಿಕ-ಸಾಂಸ್ಕೃತಿಕ-ಧಾರ್ಮಿಕ ಮೊದಲಾದ ಸಾರ್ವಜನಿಕ ಸಭೆ-ಸಮಾರಂಭಗಳಲ್ಲಿ ಫೋಟೋ ತೆಗೆಸುವುದು ಪರಿಪಾಠವಾಗಿದೆ. ಮಂತ್ರಿ ಮಹೋದಯರಂಥ ಗಣ್ಯವ್ಯಕ್ತಿಗಳು ಭಾಗವಹಿಸುವ ಸಮಾರಂಭಗಳಲ್ಲಿ ಫೋಟೋ ತೆಗೆಸುವುದು ಅನಿವಾರ್ಯದ ಸಂಗತಿ. ಲೇಖಕರು ಬರೆದ ಪುಸ್ತಕ ಪ್ರಕಟಿಸುವಾಗ ಆಯಾ ಲೇಖಕರ ಫೋಟೋ ಪ್ರಕಟಿಸುವ ವಾಡಿಕೆ; ಅಷ್ಟೇ ಏಕೆ, ಓದುಗರು ಮೆಚ್ಚುವಂಥ ಛಾಯಾಚಿತ್ರಗಳನ್ನು ಯಾರೇ ಕಳಿಸಿದರೂ ಕೂಡ ಅದನ್ನು ಪತ್ರಿಕೆಯವರು ಪ್ರಕಟಿಸುತ್ತಾರೆ. ಒಂದೇ ಎರಡೇ ಹೀಗೆ ಫೋಟೋ ತೆಗೆಸಿಕೊಳ್ಳುವ ಸಂದರ್ಭ ಜೀವನದಲ್ಲಿ ಅನೇಕ

ಬಾರೆ ಬರುತ್ತದೆ. ಹಿಂದೆ ಫೋಟೋ ತೆಗೆಸಿಕೊಳ್ಳುವುದು ಶ್ರೀಮಂತರಿಗೆ ಮಾತ್ರ ಮೀಸಲು ಎಂಬುದಾಗಿತ್ತು.

ಏಕೆಂದರೆ ಫೋಟೋ ತೆಗೆಸಿಕೊಳ್ಳಲು ದುಬಾರಿ ಬೆಲೆ ಕೊಡಬೇಕಾಗುತ್ತಿತ್ತು. ಈಗ ಹಾಗಿಲ್ಲ, ಅದು ಸಾಮಾನ್ಯನ ಕೈಗೂ ಎಟಕುತ್ತದೆ. ಅಂತೆಯೇ ಈ ಹಿಂದೆ ಪುರ-ಪಟ್ಟಣಗಳಲ್ಲಿ ೧-೨ ಸ್ಟುಡಿಯೋಗಳಿರುತ್ತಿದ್ದವು. ಇಂದು ೧೦-೨೦ ಫೋಟೋ ಸ್ಟುಡಿಯೋಗಳನ್ನು ಕಾಣುತ್ತೇವೆ. ಇಷ್ಟೇ ಅಲ್ಲಾ, ಇನ್ನೂ ಬೆಳೆಯುತ್ತಿರುವ ವೃತ್ತಿ ಇದಾಗಿದೆ ಈ ಹಿಂದೆ ಫೋಟೋ ತೆಗೆಯಲು ಸರಿಯಾದ ಬೆಳಕಿಗಾಗಿ ಅನೇಕ ತಾಸುಗಳವರೆಗೆ ಕಾಯಬೇಕಾಗುತ್ತಿತ್ತು; ಈಗ ಹಾಗಿಲ್ಲ, ಫ್ಲಾಷ್‌ಬಲ್ಬುಗಳಿಂದ ಬೆಳಕು ಚೆಲ್ಲಿ ಕೆಲವೇ ನಿಮಿಷಗಳಲ್ಲಿ ಫೋಟೊ ತೆಗೆಯುತ್ತಾರೆ. ಅಷ್ಟೇ ಏಕೆ, ಒಂದೇ ಕ್ಷಣದಲ್ಲಿ ಬಣ್ಣದ ಫೋಟೋ ತೆಗೆದುಕೊಡುವಂತೆ ಫೋಟೋಗ್ರಾಫಿಯಲ್ಲಿ ಸುಧಾರಣೆಯಾಗಿದೆ. ಆದ್ದರಿಂದ ಸರ್ವ ಋತುಗಳಲ್ಲಿಯೂ ಸರ್ವ ಕಾಲದಲ್ಲಿಯೂ ಆಬಾಲವೃದ್ಧರಿಗಾಗಿಯೂ ಅಲ್ಪ ಭಂಡವಾಳದಲ್ಲಿ ಈ ಜನಪ್ರಿಯ ವೃತ್ತಿ ಕೈಕೊಳ್ಳಲು ಅನೇಕರು ಬಯಸುತ್ತಿರುವುದು ಸ್ವಾಭಾವಿಕ. ಆದರೆ ಎಲ್ಲರಿಗೂ ಈ ವೃತ್ತಿಯಲ್ಲಿ ಯಶಸ್ಸು ಸಿಗುತ್ತದೆಯೆಂದು ಹೇಳಲು ಬಾರದು. ಆದ್ದರಿಂದ ಫಲ ಜ್ಯೋತಿಷ್ಯದಲ್ಲಿ ಈ ವೃತ್ತಿ ಕೈಕೊಳ್ಳಲು ಜಾತಕ ಹೇಗಿರಬೇಕು, ಕಾರಕ ಗ್ರಹಾದಿಗಳಾವವು ಎಂಬುದನ್ನು ಪರಿಶೀಲಿಸುವಾ.

ಕಾರಕ ಗ್ರಹ: ಫೋಟೋಗ್ರಾಫಿ ಇದು ಒಂದು ಕಲೆ. ಅಲ್ಲದೆ ಕೆಮರಾ, ಪ್ರಿಂಟಿಂಗ, ಎನ್‌ಲಾರ್ಜಿಂಗ ಮೊದಲಾದ ಕೆಲಸವು ಕೂಡ ಈ ಕಲೆಯಲ್ಲಿಯೇ ಬರುತ್ತದೆ. ಆದ್ದರಿಂದ ಕಲಾಕಾರಕ ಶುಕ್ರನು ಬಲಾಢ್ಯನಿರಲೇಬೇಕು. ಶುಕ್ರನ ತರುವಾಯ ಚಂದ್ರನನ್ನು ಪರಿಶೀಲಿಸಬೇಕು. ಏಕೆಂದರೆ ಶುಕ್ರನು ಕಲಾಕಾರನಿದ್ದರೆ ಚಂದ್ರನು ಕಲಾ ಪೋಷಕನಿರುತ್ತಾನೆ. ಶುಕ್ರನಲ್ಲಿ ಕಲಾಕಾರಿಕೆಯ ಕುಶಲತೆ ಇದ್ದರೆ ಚಂದ್ರನಲ್ಲಿ ಕಲಾಭಿಜ್ಞತೆ ಇರುತ್ತದೆ. ಅಲ್ಲದೆ ಚಂದ್ರನು ಮನಸ್ಸಿನ ಕಾರಕನು. ಮನಸ್ಸು ಒಪ್ಪದೆ ಅಭಿರುಚಿ-ಆಸಕ್ತಿ ಉಂಟಾಗುವುದಿಲ್ಲ. ಕಲಾಕೃತಿಯಲ್ಲಿ ಪ್ರತಿಭೆ-ಪಾಂಡಿತ್ಯವಿರಲು

ಕಲಾಕಾರನಿಗೆ ಆಸಕ್ತಿ-ಮಗ್ನತೆ- ( Mood )-ತಲ್ಲೀನತೆ ಬೇಕಾಗುತ್ತವೆ. ಈ ಕಲೆಯಲ್ಲಿ ಮಗ್ನತೆ ಇರಲು ಚಂದ್ರನು ಪೋಷಕನಿರದೆ ಸಾಧಿಸದು. ಆದ್ದರಿಂದ ಉತ್ತಮ ಫೋಟೋಗ್ರಾಫರನಿಗೆ ಹಾಗೂ ಫೋಟೋಗ್ರಾಫಿ ವೃತ್ತಿಗೆ ಶುಕ್ರ-ಚಂದ್ರರು ಬಲಾಢ್ಯರಿರದೆ ಈ ವೃತ್ತಿಯಲ್ಲಿ ಯಾರೂ ಯಶಸ್ವಿಯಾಗಲಾರರು. ಬಲಾಢ್ಯನೆಂದರೆ ಶುಕ್ರ-ಚಂದ್ರರು ರಾಶಿಬಲದವರೂ ಸ್ಥಾನ ಬಲದವರೂ ಇರಬೇಕು.

**ಸ್ಥಾನ:—** ಸ್ಥಾನ ದೃಷ್ಟಿಯಿಂದ ಕಲಾಕಾರಕ ಸ್ಥಾನಗಳಾದ ಲಗ್ನ-ದ್ವಿತೀಯ-ಪಂಚಮ-ತೃತೀಯ ಸ್ಥಾನಗಳು ಹಾಗೂ ಈ ಸ್ಥಾನಾಧೀಶರು ಪೋಷಕರಿರಬೇಕು. ಇದರಲ್ಲಿಯೂ ಫೋಟೋಗ್ರಾಫರ ವೃತ್ತಿಯವರಿಗೆ ಲಗ್ನ-ತೃತೀಯ-ಪಂಚಮ ಸ್ಥಾನಗಳೂ ಸ್ಥಾನಾಧೀಶರೂ ಬಲಾಢ್ಯರಿರಬೇಕು.

**ಲಗ್ನ :—** ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಮಿಥುನ, ಕರ್ಕ, ತುಳಾ, ಮಕರ, ಕುಂಭ ಲಗ್ನದವರು, ಇವರ ನಂತರ ವೃಶ್ಚಿಕ, ಮೀನ ಲಗ್ನದವರು ಫೋಟೋಗ್ರಾಫಿ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

**ರಾಶಿ:—** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಮಿಥುನ, ತುಳಾ, ಕುಂಭ ರಾಶಿಯವರೂ ಆ ನಂತರ ವೃಷಭ, ಕರ್ಕ, ಕನ್ಯಾ, ಮೀನ ರಾಶಿಯವರೂ ಇರುವುದು ಕಂಡುಬರುತ್ತದೆ.

**ಜೆರಾಕ್ಸ ಪ್ರಿಂಟಿಂಗ್ ವೃತ್ತಿ :—**

ಫೋಟೋಗ್ರಾಫಿ (ಛಾಯಾ ಚಿತ್ರ ಗ್ರಹಣ) ವೃತ್ತಿಯಂತೆ ಜೆರಾಕ್ಸ ಪ್ರಿಂಟಿಂಗ್ ವೃತ್ತಿ ಬಹಳ ಲಾಭದಾಯಕ ವೃತ್ತಿಯಾಗಿದೆ. ಏಕೆಂದರೆ ಉದ್ಯೋಗ-ನೌಕರಿಗಾಗಿ ಪ್ರಯತ್ನಿಸುತ್ತಿರುವ ಉದ್ಯೋಗಾರ್ಥಿಗಳು ತಮ್ಮ ಅರ್ಜಿಯೊಂದಿಗೆ ತಮ್ಮ ಶಿಕ್ಷಣದ ಪದವಿಯ ಪ್ರಮಾಣ ಪತ್ರ (ಸರ್ಟಿಫಿಕೇಟ), ಶಾಲಾ-ಕಾಲೇಜ ಪ್ರಮಾಣ ಪತ್ರ, ಸ್ಕೂಲ-ಕಾಲೇಜ ಲೀವ್ವಿಂಗ (ಬಿಟ್ಟ ಬಗೆಗಿನ) ಸರ್ಟಿಫಿಕೇಟ, ಶಿಫಾರಸ ಪತ್ರ, ನಡತೆ ಪ್ರಮಾಣ ಪತ್ರ, ಕುಟುಂಬದ ವರಮಾನ ಅರ್ಹತಾ ಪತ್ರ (ಇನ್‌ಕಮ್

ಸರ್ಟಿಫಿಕೇಟ), ಹಿಂದುಳಿದ ವರ್ಗದ ಖಾತರಿಯ ಸರ್ಟಿಫಿಕೇಟ, (ಬ್ಯಾಕವರ್ಡ ಕ್ಲಾಸ ಸರ್ಟಿಫಿಕೇಟ) ಮೊದಲಾದ ಸರ್ಟಿಫಿಕೇಟುಗಳ ಅಧಿಕೃತ ಪ್ರತಿಗಳನ್ನು ಕಳಿಸುವಾಗ ಜೆರಾಕ್ಸ ಪ್ರತಿಗಳನ್ನು ಕಳಿಸಿದಲ್ಲಿ ಅವನ್ನು ಮೂಲ ಸರ್ಟಿಫಿಕೇಟಗಳಂತೆ ಪರಿಗಣಿಸಲಾಗುತ್ತದೆ. ಇದಲ್ಲದೆ ಖರೀದಿ ವಿಕ್ರಿ ಪತ್ರ-ವತ್ರಿಪತ್ರ-ವ್ಯತ್ಯುಪತ್ರ-ವಿಭಾಗಣಿಪತ್ರ, ದತ್ತಕ-ದಾನ-ಬಕ್ಷಿಸಪತ್ರ, ಜನನ-ಮರಣ ಉತಾರಪತ್ರ ಮೊದಲಾದ ಮಹತ್ವದ ದಾಖಲೆ ಪತ್ರಗಳ ನಕಲು ಪತ್ರಗಳನ್ನು ಜೆರಾಕ್ಸ ಯಂತ್ರದಿಂದ ಪ್ರಿಂಟಮಾಡಿ ಅವುಗಳ ಬೇಕಾದಷ್ಟು ಪ್ರತಿಗಳನ್ನು ಕ್ಷಣಾರ್ಧದಲ್ಲಿಯೇ ತಯಾರಿಸಿ ಕೊಡು ವದು ಈ ನವೀನ ವೃತ್ತಿ. ಈ ವೃತ್ತಿಗೆ ಬೇಡಿಕೆ ಬಹಳವಿದೆ. ಆದಾಗ್ಯೂ ಎಲ್ಲ ಜೆರಾಕ್ಸ ಪ್ರಿಂಟರರ ವೃತ್ತಿ ಚನ್ನಾಗಿ ನಡೆಯುತ್ತದೆಯೆಂದು ಹೇಳಲು ಬಾರದು. ಆದ್ದರಿಂದ ಫಲಜ್ಯೋತಿಷ್ಯದಲ್ಲಿ · ಈ ವೃತ್ತಿ ಕೈಕೊಳ್ಳಲು ಜಾತಕ ಹೇಗಿರಬೇಕು, ಕಾರಕ ಗ್ರಹಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ :—** ಜೆರಾಕ್ಸ ಪ್ರಿಂಟ ಮಾಡಿಕೊಡುವುದು ಕೂಡ ಫೋಟೋಗ್ರಾಫೀ ಕೆಲಸದಂತೆಯೇ ಇರುವುದರಿಂದ ಫೋಟೋಗ್ರಾಫಿ ವೃತ್ತಿಯ ಕಾರಕನಾದ ಶುಕ್ರನಂತೂ ಬಲಾಢ್ಯನಿರಲೇಬೇಕು. ಶುಕ್ರನ ತರುವಾಯ ಬುಧನನ್ನು ಪರಿಶೀಲಿಸಬೇಕು. ಏಕೆಂದರೆ ಜೇರಾಕ್ಸ ಪ್ರಿಂಟಿಂಗ ಕೆಲಸವೆಂದರೆ ಒಂದು ಪ್ರಕಾರದ ವಾಣಿಜ್ಯ ವೃತ್ತಿ (ಕಮರ್ಶಿಯಲ್) ಇದ್ದ ಹಾಗೆಯೇ. ಅಲ್ಲದೆ ಯಾವುದೆ ಪ್ರಕಾರದ ಪ್ರಿಂಟಿಂಗಿಗೆ, ಕಾಗದಕ್ಕೆ ಬುಧನು ಕಾರಕನು. ಆದ್ದರಿಂದ ಬುಧನು ಬಲಾಢ್ಯನಿರಬೇಕಾಗುತ್ತದೆ. ಇಲ್ಲಿ ಮಹತ್ವದ ಸಂಗತಿಯೆಂದರೆ— ಶುಕ್ರ-ಬುಧರಿಬ್ಬರೂ ರಾಶಿಬಲದ ವರೂ ಸ್ಥಾನಬಲದವರೂ ಇರಬೇಕಾಗುತ್ತದೆ.

**ಸ್ಥಾನ :—** ಸ್ಥಾನ ದೃಷ್ಟಿಯಿಂದ ನೋಡಿದರೆ ಚತುರ್ಥ ಹಾಗೂ ತೃತೀಯ ಸ್ಥಾನಗಳು ಕಾರಕವಿದ್ದು, ಈ ಸ್ಥಾನಗಳೂ ಹಾಗು ಸ್ಥಾನಾ-ಧೀಶರೂ ಬಲಾಢ್ಯರಿರಬೇಕು.

ಲಗ್ನ — ಲಗ್ನ ದೃಷ್ಟಿಯಿಂದ ನೋಡಿದರೆ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಮಕರ, ಕುಂಭ ಈ ಲಗ್ನದವರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

ರಾಶಿ :— ರಾಶಿ ದೃಷ್ಟಿಯಿಂದ ನೋಡಿದರೆ ನಿರ್ದಿಷ್ಟ ರಾಶಿಯವರೇ ಜೇರಾಕ್ಸ ಪ್ರಿಂಟರ ವೃತ್ತಿಯವರಿರುತ್ತಾರೆಯೆಂದು ಹೇಳಲು ಬಾರದಿದ್ದರೂ ಮಿಥುನ, ತುಲಾ, ಕುಂಭ ರಾಶಿಯವರೂ ತದನಂತರ ವೃಷಭ, ಕರ್ಕ, ಕನ್ಯಾ, ಮೀನ ರಾಶಿಯವರೂ ಹೆಚ್ಚಾಗಿರುವುದು ಕಂಡು ಬರುತ್ತದೆ.

## (೩) ಬ್ಲಾಕ್‌ಮೇಕರ್ಸ (ಪಡಿಯಚ್ಚುಗಾರರು)

ಕಾರಕ ಗ್ರಹ :— ಬ್ಲಾಕ್ ಮೇಕರ್ಸ ವೃತ್ತಿ ಕೂಡ ಫೋಟೋಗ್ರಾಫರ ಹಾಗೂ ಜೆರಾಕ್ಸ ಪ್ರಿಂಟರ ವೃತ್ತಿಯಂತೆಯೇ ಇರುತ್ತದೆ. ಆದ್ದರಿಂದ ಶುಕ್ರ, ಬುಧರಂತೂ ಬಲಾಢ್ಯರಿರಲೇಬೇಕು. ಬುಧ-ಶುಕ್ರರ ತರುವಾಯ ಶನಿಯು ಕಾರಕನು. ಏಕೆಂದರೆ ಬ್ಲಾಕ್‌ಮೇಕರರು ತಯಾರಮಾಡಿದ ಬ್ಲಾಕುಗಳು ಮುದ್ರಣಕ್ಕೆ ಮಾತ್ರ ಉಪಯೋಗವಾಗುತ್ತವೆ. ಆದ್ದರಿಂದ ಮುದ್ರಣ ಕಾರಕ ಗ್ರಹವಾದ ಶನಿಯನ್ನೂ ಪರಿಶೀಲಿಸಬೇಕು. ಆದ್ದರಿಂದ ಶನಿ-ಬುಧ-ಶುಕ್ರರು ಬಲಾಢ್ಯರಿದ್ದರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು.

ಕಾರಕ ಸ್ಥಾನ:— ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ತೃತೀಯ-ಪಂಚಮ ಸ್ಥಾನಗಳು ಕಾರಕವಿದ್ದು ತೃತೀಯ-ಪಂಚಮ ಸ್ಥಾನಗಳು. ಈ ಸ್ಥಾನಾಧೀಶರು ಬಲಾಢ್ಯರಿದ್ದವರು ಈ ವೃತ್ತಿಯಲ್ಲಿ ಏಳಗಬಲ್ಲರು.

ಲಗ್ನ:- ಲಗ್ನ ದೃಷ್ಟಿಯಿಂದ ನೋಡಿದರೆ ಮೇಷ, ವೃಷಭ, ಮಿಥುನ, ಕರ್ಕ, ತುಲಾ, ವೃಶ್ಚಿಕ, ಮಕರ, ಕುಂಭ ಈ ಲಗ್ನದವರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

ರಾಶಿ :— ರಾಶಿ ದೃಷ್ಟಿಯಿಂದ ನೋಡಿದರೆ ನಿರ್ದಿಷ್ಟ ರಾ

ಯಾವರೇ ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ ಎಂದು ಹೇಳಲು ಬಾರದು.

೩) ನೃತ್ಯಕಾರರ ವೃತ್ತಿ :— ನೃತ್ಯ ಶಾಸ್ತ್ರವನ್ನು ಪಂಚಮ ವೇದ ವೆಂದು ಕರೆಯುವುದುಂಟು. ನೃತ್ಯವು ಭಾರತದ ಸಾಂಸ್ಕೃತಿಕ, ಧಾರ್ಮಿಕ, ಆಧ್ಯಾತ್ಮಿಕ ಜನಜೀವನದ ಅವಿಭಾಜ್ಯ ಅಂಗವಾಗಿಯೇ ಬೆಳೆದುಬಂದಿದೆ ಯೆಂದರೆ ಅತಿಶಯೋಕ್ತಿಯಾಗಲಾರದು. ನೃತ್ಯವು ಲಲಿತಕಲೆಗಳಲ್ಲಿ ಅತಿ ಶೃಂಗಾರ ರಸಭರಿತ ಕುಶಲ ಕಲೆಯಾಗಿರುವುದಲ್ಲದೆ ಇದು ಸಂಗೀತ-ಕಾವ್ಯ-ನಾಟಕ-ಚಿತ್ರಕಲೆ-ಶಿಲ್ಪಕಲೆಗಳ ಸಮಗ್ರ ಸಂಗಮವಾಗಿ ಸೌಂದರ್ಯ ಯುಕ್ತವಾಗಿ ಸಂಯಮ-ತಾಳ-ಲಯಬದ್ಧವಾಗಿ ಮಾಧುರ್ಯ-ಶೃಂಗಾರ ದಿಂದ ಭೂಯಿಷ್ಟವಾದುದಾಗಿದೆ ಎಂಬ ವಿಷಯವನ್ನು ಮರೆಯುವಂತಿಲ್ಲ. ಭಾರತದಲ್ಲಿ ನೃತ್ಯ ಶಾಸ್ತ್ರವು ತಾಂತ್ರಿಕ ಪರಿಪೂರ್ಣತೆಯನ್ನೂ ಶಾಸ್ತ್ರೀಯ ಔನ್ನತ್ಯವನ್ನೂ ಪಡೆದಂತೆ ಮತ್ತಾವ ದೇಶದಲ್ಲಿಯೂ ಈ ಕಲೆ ಇಷ್ಟು ಉನ್ನತ ಮಟ್ಟವನ್ನು ಹೊಂದಿಲ್ಲವೆಂದು ಹೇಳಿದರೆ ತಪ್ಪಾಗಲಾರದು. ಇವೆಲ್ಲವು ನೃತ್ಯ ಶಾಸ್ತ್ರದ ವಿಷಯವಾಗಿ ಹೇಳಿದಂತಾಯಿತು. ಈಗ ನಮ ಗಿರುವ ಪ್ರಶ್ನೆ ಇಷ್ಟೇ, ನೃತ್ಯದಿಂದ ಉಪಜೀವನ ಶಕ್ಯವೆ, ನೃತ್ಯ ಶಾಸ್ತ್ರ-ಜ್ಞರು ನೃತ್ಯವನ್ನು ವೃತ್ತಿಯನ್ನಾಗಿ ಕೈಕೊಳ್ಳಬಹುದೆ ಎಂಬುದು, ಹಾಗೆ ಕೈಕೊಳ್ಳಲು ಶಕ್ಯವಿದ್ದಲ್ಲಿ ನೃತ್ಯ ಶಾಸ್ತ್ರದ ಕಾರಕ ಗ್ರಹಾದಿಗಳು ಯಾವುವು. ಈ ಪ್ರಶ್ನೆಗಳಿಗೆ ಉತ್ತರವಿಷ್ಟೆ, ನೃತ್ಯವನ್ನು ವೃತ್ತಿಯನ್ನಾಗಿ ಕೈಕೊಳ್ಳು ವುದು ಎಲ್ಲ ಕಲಾವಿದರಿಗೂ ಶಕ್ಯವಿಲ್ಲ. ಏಕೆಂದರೆ ನೃತ್ಯ ಶಾಸ್ತ್ರವನ್ನು ಕಲಿಯುವವರು ಶ್ರೀಮಂತರೂ ಪ್ರತಿಷ್ಠಿತ ಮಕ್ಕಳೇ ಹೆಚ್ಚಾಗಿರುತ್ತಾರೆ. ಇನ್ನು ನೃತ್ಯಶಾಸ್ತ್ರದಲ್ಲಿ ಪರಿಣತಿ ಪಡೆದವರಿಗೆ ಚಲನ ಚಿತ್ರ ನಾಟಕ ರಂಗಗಳಲ್ಲಿ ಪ್ರಾಶಸ್ತ್ಯ ಸಿಗುತ್ತದೆ, ಸಿನೆಮಾ ಟಿವಿ ರಂಗಗಳಲ್ಲೂ ಪ್ರಾಶಸ್ತ್ಯ ಸಿಗುತ್ತದೆ. ಸಿನೆಮಾ ಟಿವಿ ರಂಗದೆಡೆ ವಿಶೇಷ ಆಕರ್ಷಣೆಯು ಉಂಟಾ ಗಿರುವ ಈ ಕಾಲದಲ್ಲಿ ನೃತ್ಯದಲ್ಲಿ ನೈಪುಣ್ಯತೆ ಪಡೆದ ಕಲಾವಿದರಿಗೆ ವಿಶೇಷ ಬೇಡಿಕೆಯಿದೆ. ಇದಕ್ಕೆ ಆರ್ಥಿಕ ದೃಷ್ಟಿಯಿಂದ ವಿಶೇಷ ಆಕರ್ಷಣೆ ಇರುವುದೇನೋ ನಿಜ, ಆದರೆ ಇದು ಕೆಲವೇ ಸುದೈವಿ ಕಲಾವಿದರಿಗೆ

ಮಾತ್ರ ಶಕ್ಯವಿದೆ. ಆದರೆ ಖಾಸಗಿಯಾಗಿ ನೃತ್ಯದ ವರ್ಗಗಳನ್ನು ಪ್ರಾರಂಭಿಸಿ ನೃತ್ಯ ಶಿಕ್ಷಕ ವೃತ್ತಿ ಕೈಕೊಳ್ಳಬಹುದಾಗಿವೆ. ಆದುದರಿಂದ ನೃತ್ಯ ಶಾಸ್ತ್ರದ ವೃತ್ತಿ ಕೈಕೊಳ್ಳುವವರ ಜಾತಕ ಹೇಗಿರುತ್ತದೆ, ಕಾರಕ ಗ್ರಹಾದಿಗಳಾವವು ಎಂಬುದನ್ನು ಪರಿಶೀಲಿಸುವಾ.

ನೃತ್ಯ ಕಾರಕ ವೃತ್ತಿ ಕೈಕೊಳ್ಳಲು ಕಾರಕ ಗ್ರಹ ಯಾವುವುದೆಂಬುದನ್ನು ತಿಳಿಯುವ ಮೊದಲು ನೃತ್ಯದಲ್ಲಿಯ ಪ್ರಕಾರಗಳನ್ನು ತಿಳಿಯುವುದು ಅವಶ್ಯವು.

ನೃತ್ಯಗಳಲ್ಲಿಯ ಪ್ರಕಾರಗಳು :— ನೃತ್ಯಗಳಲ್ಲಿ ಅನೇಕ ಪ್ರಕಾರಗೇಳದ್ದು ನಾವು ಇಲ್ಲಿ ಮುಖ್ಯವಾದಿ ನಾಲ್ಕು ಪ್ರಕಾರದ ನೃತ್ಯಗಾರಿಕೆ ಶೈಲಿಗಳ ವಿಷಯವಾಗಿ ಮಾತ್ರ ವಿವೇಚಿಸಿದ್ದೆವೆ. ಅವುಗಳೆಂದರೆ

(೧) ಭರತ ನಾಟ್ಯ

(೨) ಕಥಕ

(೩) ಕಥಕ್ಕಳಿ

(೪) ಮಣಿಪುರಿ

ಅಲ್ಲದೆ ಇತ್ತೀಚೆಗೆ ಟಾಗೋರ ನೃತ್ಯ ರೀತಿ, ಉದಯಶಂಕರ ನೃತ್ಯ ರೀತಿ, ಮತ್ತು ದಕ್ಷಿಣ ಕನ್ನಡದ ಯಕ್ಷಗಾನ ಮೊದಲಾದವುಗಳ ವೈಶಿಷ್ಟ್ಯವೇ ಬೇರೆ ಇರುತ್ತದೆ. ಆದುದರಿಂದ ಯಾವ ಪ್ರಕಾರದ ನೃತ್ಯ ಶೈಲಿಗೆ ಯಾವ ಗ್ರಹಾದಿಗಳು ಕಾರಕವಿರುತ್ತವೆ ಎಂಬುದನ್ನು ಈಗ ಪರಿಶೀಲಿಸುವಾ.

ಕಾರಕ ಗ್ರಹ:— ಭರತನಾಟ್ಯ ನೃತ್ಯವು ಎಲ್ಲ ನೃತ್ಯಗಳಲ್ಲಿ ಪ್ರಾಚೀನ, ದಕ್ಷಿಣಮೂಲ ನೃತ್ಯ ಎಂಶವಿದ್ದು ಭಾರತಾದ್ಯಂತವಾಗಿ ಇದರ ಪ್ರಚಾರವಿರುತ್ತದೆ. ಈ ನೃತ್ಯದ ವೈಶಿಷ್ಟ್ಯವೆಂದರೆ ಇದು ರಾಮಾಯಣ-ಮಹಾಭಾರತಗಳ ಕಥೆಗಳನ್ನು ಒಳಗೊಂಡ ನೃತ್ಯವಿದ್ದು, ಮುಖಮುದ್ರೆ ಹಾಗೂ ಹಸ್ತವಿನ್ಯಾಸ ಮಹತ್ವದವಿರುತ್ತವೆ. ಕೇವಲ ಹಸ್ತಮುದ್ರೆಗಳಿಂದ ನವರಸ

ಗಳನ್ನು ಚಿತ್ರಿಸುವ ವೈಶಿಷ್ಟ್ಯ ಬೇರೆ ಇನ್ನಾವ ನೃತ್ಯಗಳಲ್ಲಿಯೂ ಇಲ್ಲ. ಇನ್ನೂ ಒಂದು ವೈಶಿಷ್ಟ್ಯವೆಂದರೆ ಮೃದಂಗವೇ ಈ ನೃತ್ಯಕ್ಕೆ ಸಹಾಯಕ ವಾಗುತ್ತದೆ. ಹಸ್ತ ವಿನ್ಯಾಸದಂಥ, ಮುಖಮುದ್ರೆಗಳಿಂದ ನವರಸಗಳನ್ನು ಪ್ರದರ್ಶಿಸುವ ಕ್ರಿಯೆ ಇದಾಗಿರುವುದರಿಂದ ಶುಕ್ರ-ಚಂದ್ರರೆ ಈ ನೃತ್ಯದ ಕಾರಕರಿದ್ದು ಶುಕ್ರ-ಚಂದ್ರರು ಬಲಾಢ್ಯರಿದ್ದವರೇ ಈ ನೃತ್ಯ ಕಲೆ ಯಲ್ಲಿ ಪ್ರವೀಣರಿರುವರಲ್ಲದೆ ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

ಇನ್ನು ಕಥಕದ ವೈಶಿಷ್ಟ್ಯವೆಂದರೆ— ಇದಕ್ಕೆ ಗಣಿತ ಶಾಸ್ತ್ರದ ಜ್ಞಾನ ತುಂಬ ಅವಶ್ಯವಿರುತ್ತದೆ. ಏಕೆಂದರೆ ಈ ನೃತ್ಯದಲ್ಲಿ ಮಾತ್ರಾ ಗಳು, ಪರಣಗಳು (ಕಟ್ಟುಗಳು) ಮಹತ್ವದವಿರುತ್ತವೆ. ಈ ಮಾತ್ರಾಗಳಲ್ಲಿ ಅಂಕಗಣಿತ ಲೆಕ್ಕದಂತೆ ಸ್ವಲ್ಪವೂ ಹೆಚ್ಚು-ಕಡಿಮೆಯಾಗದಂತೆ ನೋಡಿ ಕೊಳ್ಳಬೇಕಾಗುತ್ತದೆ. ಆದುದರಿಂದ ಈ ನೃತ್ಯದ ಕಾರಕ ಗ್ರಹವೆಂದರೆ ಕಲಾಕಾರಕ ಗ್ರಹವಾದ ಶುಕ್ರನಂತೂ ಬಲಾಢ್ಯನಿರಲೇಬೇಕು. ಶುಕ್ರನೊಂ- ದಿಗೆ ಲೆಕ್ಕ ಗಣಿತದ ಕಾರಕನಾದ ಬುಧನೂ ಬಲಾಢ್ಯನಿರಬೇಕು. ಆದರೆ ಇಲ್ಲಿ ಮಹತ್ವದ ಸಂಗತಿಯೆಂದರೆ ಬುಧ-ಶುಕ್ರರೀರ್ವರೂ ರಾಶಿ ಬಲದ ವರೂ, ಸ್ಥಾನ ಬಲದವರೂ ಇರಬೇಕು. ಈ ನೃತ್ಯವು ಹೆಚ್ಚಾಗಿ ಉತ್ತರ ಭಾರತದ ಪಂಜಾಬ, ರಾಜಸ್ಥಾನ, ಗುಜರಾತ, ಉತ್ತರಪ್ರದೇಶ ಮೊದಲಾದ ಹಿಂದೀ ಪ್ರದೇಶದಲ್ಲಿ ಹೆಚ್ಚಾಗಿದ್ದರೂ ಇತ್ತೀಚಿಗೆ ಭಾರತದ ಇನ್ನಿತರ ಕಡೆಗೂ ಪ್ರಚಾರವಾಗಹತ್ತಿದೆ. ಇದಕ್ಕೆ ತಬಲಾ ಸಾಥಿ ಬೇಕಾಗುತ್ತದೆ.

ಇನ್ನು ಕಥಕಳಿಯು ಕೇರಳದಲ್ಲಿ ಹೆಚ್ಚು ಪ್ರಚಲಿತವಿದ್ದು ಪ್ರಾಣಿ ಗಳ ಅವಯವಗಳ ಮಾದರಿಯನ್ನು ಕಲಾಕಾರರು ತಮ್ಮ ಶರೀರದಲ್ಲಿ ಧರಿಸಿಕೊಂಡು ಅಭಿನಯಿಸುತ್ತಾರೆ. ಆದುದರಿಂದ ಶುಕ್ರ-ಚಂದ್ರರೇ ಕಾರಕರಿರುತ್ತಾರೆ. ಶುಕ್ರ-ಚಂದ್ರರು ಬಲಾಢ್ಯರಿರದೆ ಯಾರೂ ಕಥಕಳಿ ಯಲ್ಲಿ ಯಶಸ್ವಿಯಾಗರು.

ಕೊನೆಯದಾಗಿ ಮಣಿಪುರಿ ಈ ನೃತ್ಯವು ಆಸಾಮ, ಬಂಗಾಲ, ನಾಗಾಲ್ಯಾಂಡ ಈ ಪ್ರದೇಶಗಳಲ್ಲಿ ಹೆಚ್ಚಾಗಿ ಪ್ರಚಲಿತವಿರುತ್ತದೆ. ಇದ

ಕೇವಲ ಲಾಸ್ಯದಂತಿರುತ್ತದೆ. ಅಂಗ - ಪ್ರತ್ಯಂಗಳ ಚಲನವಲನೆಯೆ ಹೆಚ್ಚಾಗಿದ್ದು ಉಡುಪುಗಳಿಗೆ ಸಹ ಮಹತ್ವವಿದೆ. ಆದುದರಿಂದ ಶುಕ್ರ-ಚಂದ್ರರೇ ಮಣಿಪುರಿ ನೃತ್ಯ ಕಲೆಗೆ ಕಾರಕರು. ಆದರೆ ಮಹತ್ವದ ಸಂಗತಿಯೆಂದರೆ— ಇಲ್ಲಿ ಚಂದ್ರನು ರಾಶಿಬಲದವನೂ ಸ್ಥಾನ ಬಲದವನೂ ಇದ್ದರೆ ಶುಕ್ರನು ಮಾತ್ರ ಕೇವಲ ರಾಶಿಬಲದವ ನಿದ್ದರಾಯಿತು.

ಹೀಗೆ ನಾಲ್ಕು ಪ್ರಕಾರದ ನೃತ್ಯ ಶೈಲಿಗಳಿಗೆ ವಿಭಿನ್ನ ಗ್ರಹಗಳು ಕಾರಕವಿರುತ್ತವೆ. ಆದರೆ ಇಲ್ಲಿ ಗಮನಿಸತಕ್ಕ ಸಂಗತಿಯೆಂದರೆ— ಚಲನ ಚಿತ್ರ-ನಾಟಕ-ಟೀವಿಗಳಲ್ಲಿ ಇಲ್ಲವೆ ಸಾರ್ವಜನಿಕ ಕಾರ್ಯಕ್ರಮ ನಡೆಸಿ ದರೆ ಅದರಲ್ಲಿ ಭಾಗವಹಿಸುವವರಿಗೆ ಮಾತ್ರ ಆಯಾ ಪ್ರಕಾರದ ಕಾರಕ ಗ್ರಹಗಳ ಬಲಾಬಲವನ್ನು ಪರಿಶೀಲಿಸಬೇಕು. ಆದರೆ ನೃತ್ಯ ಶಿಕ್ಷಕರೆಂದು ವೃತ್ತಿಕೈಕೊಳ್ಳುವವರಿಗೆ ಯಾವುದೇ ಪ್ರಕಾರದ ನೃತ್ಯಗಳಿಗೂ ಗುರುವು ಕಾರಕನು. ಉದಾಹರಣೆಗೆ— ಯಾರೊಬ್ಬರು ಭರತ ನಾಟ್ಯದ ಶಿಕ್ಷಕ ವೃತ್ತಿ ಕೈಕೊಳ್ಳಲು ಶುಕ್ರ-ಚಂದ್ರರ ಸಂಗಡ ಗುರುವಿನ ಬಲಾಬಲವನ್ನು ಪರಿಶೀಲಿಸಬೇಕು. ಆದರೆ ಕಥಕ ನೃತ್ಯದ ಶಿಕ್ಷಕ ವೃತ್ತಿ ಕೈಕೊಳ್ಳಲು ಬುಧ-ಶುಕ್ರರ ಸಂಗಡ ಗುರುವಿನ ಬಲಾಬಲವನ್ನೂ ಪರಿಶೀಲಿಸಬೇಕು.

ಸ್ಥಾನ:— ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಎಲ್ಲ ಪ್ರಕಾರದ ನೃತ್ಯಕಾರರಿಗೆ ಲಗ್ನ-ತೃತೀಯ ಸ್ಥಾನಗಳು ಈ ಸ್ಥಾನಾಧೀಶರು ಬಲಾಢ್ಯ ರಿರಬೇಕಾಗುತ್ತದೆ. ಆದರೆ ಭರತ ನಾಟ್ಯದಲ್ಲಿ ಹಸ್ತವಿನ್ಯಾಸ ಹಾಗು ಮುಖ ಮುದ್ರೆ ಇವೆರಡೂ ಪ್ರಧಾನ ಅಂಶವಿರುವುದರಿಂದ ಎರಡೂ ಸ್ಥಾನಗಳೂ ಸ್ಥಾನಾಧೀಶರೂ ಬಲಾಢ್ಯರಿರಬೇಕು. ಆದರಲ್ಲಿಯೂ ಲಗ್ನಕ್ಕಿಂತ ತೃತೀಯ ಸ್ಥಾನವೇ ಹೆಚ್ಚು ಪೋಷಕವಿರಬೇಕು. ಆದರೆ ಕಥಕದಲ್ಲಿ ತೃತೀಯ ಸ್ಥಾನಕ್ಕಿಂತ ಲಗ್ನವೇ ಹೆಚ್ಚು ಪೋಷಕವಿರಬೇಕು.

ಲಗ್ನ :— ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ನೃತ್ಯಕಾರನಲ್ಲಿರ ಬೇಕಾದ ಅವಶ್ಯಕತೆಯೆಂದರೆ— ತೆಳುವಾದ ಸೀರಾದ ಸದೃಢ ಶರೀರ

ಗಟ್ಟಿಮುಟ್ಟಾದ ತೊಡೆಗಳು, ಪ್ರಮಾಣ ಬದ್ಧವಾದ ಅಂಗಾಂಗಗಳು, ಆಕರ್ಷಕ ಹಾಗೂ ನವರಸಗಳನ್ನು ಪ್ರದರ್ಶಿಸುವ ಮುಖ ಲಕ್ಷಣ ಹೀಗೆ ದೇಹ ರಚನೆ ಇರಬೇಕಾಗುವುದರಿಂದ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಲಗ್ನಗಳು ಈ ನೃತ್ಯಕಾರರಿಗೆ ಕಾರಕ ಲಗ್ನಗಳು. ಅದರಲ್ಲಿಯೂ ಹೆಚ್ಚಾಗಿ ವೃಷಭ, ಕರ್ಕ, ತುಲಾ, ಮಿಥುನ, ಕನ್ಯಾ ಈ ಲಗ್ನಗಳಿರತಕ್ಕದ್ದು.

**ರಾಶಿ :** — ನೃತ್ಯಕಾರರು ನಿರ್ದಿಷ್ಟ ರಾಶಿಯವರೇ ಇರಬೇಕೆಂಬ ನಿಯಮವಿದೆ. ಏಕೆಂದರೆ, ಈವೃತ್ತಿ ಕೈಕೊಳ್ಳುವವರಿಗೆ ಕಾಂತಿಯುತ ಕಣ್ಣು, ಆಕರ್ಷಕ ಮುಖ ಲಕ್ಷಣ, ತೆಳುವಾದ ದೇಹ ಅವಶ್ಯ. ಅರ್ಥಾತ್ ಬೆಳ್ಳಗಿನ ಕಣ್ಣು, ದಪ್ಪ ತುಟಿ, ಜೋತಾಡುವ ಮೊಲೆ, ಸ್ಥೂಲ ದೇಹ, ದೊಡ್ಡ ಹೊಟ್ಟೆ, ದೊಡ್ಡ ತಲೆ ಇವು ಈ ನೃತ್ಯಕಾರನಿಗೆ ಅಪಥ್ಯ, ಅರ್ಥಾತ್ ನಿಷ್ಪ್ರಯೋಜಕ. ಅಂಗಾಂಗಳ ಲಕ್ಷಣದ ವಿಷಯವಾಗಿ ನಮ್ಮ "ಸ್ತ್ರೀಜ್ಯೋತಿಷ್ಯ" ಗ್ರಂಥದ ಪುಟ ೨೨ ರಿಂದ ೪೮ರ ವರೆಗೆ ವಿವರವಾಗಿ ಚರ್ಚಿಸಲಾಗಿದೆ. ಪ್ರಸ್ತುತ ನೃತ್ಯಕಾರ ವೃತ್ತಿಯವರಿಗೆ ಕಾರಕ ರಾಶಿಗಳೆಂದರೆ ವೃಷಭ, ಮಿಥುನ, ಕರ್ಕ, ಕನ್ಯಾ, ತುಲಾ, ಕುಂಭ, ಮೀನ ಈ ರಾಶಿಯವರೇ ಹೆಚ್ಚಾಗಿರುವುದು ಕಂಡುಬರುತ್ತದೆ.

**ಯೋಗಗಳು:**— ನೈಸರ್ಗಿಕವಾಗಿ ಹಸ್ತಗಳ ಮೇಲೆ ಮಿಥುನ ರಾಶಿಯ ಆಧಿಪತ್ಯವಿರುತ್ತದೆ. ಇದರಂತೆ ಪಾದಗಳ ಮೇಲೆ ಮೀನ ರಾಶಿಯ ಆಧಿಪತ್ಯವು, ತೊಡೆಗಳ ಮೇಲೆ ಧನು ರಾಶಿಯ ಆಧಿಪತ್ಯವೂ ಇರುತ್ತವೆ. ಆದ್ದರಿಂದ ಜಾತಕದಲ್ಲಿ ಈ ರಾಶಿಗಳು ದೂಷಿತವಿರ ಕೂಡದು.

**(೪) ಸಂಗೀತಗಾರರು (ಗಾಯಕರು)**

ಕೃಷಿಕರು, ಶಿಕ್ಷಕರು ಇವರಂತೆ ಅತ್ಯಂತ ಪ್ರಾಚೀನ ವೃತ್ತಿಯವರೆಂದರೆ ಸಂಗೀತಗಾರರು. ವೇದ, ಉಪನಿಷತ್, ಪುರಾಣ, ರಾಮಾಯಣ, ಮಹಾಭಾರತ ಮೊದಲಾದ ಪ್ರಾಚೀನ ಗ್ರಂಥಗಳಲ್ಲಿ ಸಂಗೀತ ಹಾಗೂ

ಸಂಗೀತಗಾರರ ವಿಷಯವಾಗಿ ಸಾಕಷ್ಟು ಉಲ್ಲೇಖಗಳಿವೆ. ಅಷ್ಟೇ ಏಕೆ ಮೌರ್ಯ ಕಾಲದಿಂದ ಮೊಗಲರ ಕಾಲದವರೆಗೆ ಆ ಮುಂದೆ ಪೇಶವೆ-ಬ್ರಿಟಿಶ ಕಾಲದ ಇತಿಹಾಸದಲ್ಲಿಯೂ ಸಂಗೀತಗಾರರ ವಿಷಯವಾಗಿ ವಿವರಿಸಲಾಗಿದೆ. ಆದರೆ ಈಗಿನಂತೆ ಸ್ವತಂತ್ರವಾದ ಸಂಗೀತಗಾರರ ವೃತ್ತಿಯಾಗಿ ಗಾಯಕರ ವೃತ್ತಿಯಾಗಿ ಈ ಹಿಂದೆ ಇದ್ದಿಲ್ಲ. ಸಂಗೀತಗಾರರಿಗೆ ರಾಜಾಶ್ರಯವಿತ್ತು, ಬ್ರಿಟಿಶರ ಕಾಲದಲ್ಲಿ ರಾಜರು ತಲೆ ಮರೆಯಾದರೂ ಸಂಸ್ಥಾನಿಕರು ಸಂಗೀತಗಾರರಿಗೆ ಆಶ್ರಯ ಕೊಟ್ಟರು. ಇಷ್ಟೇ ಅಲ್ಲ, ಸಾಕಷ್ಟು ಪ್ರೋತ್ಸಾಹ ಕೊಟ್ಟರು. ಇದರಿಂದಾಗಿ ಕಲಾಕಾರರು ತಮ್ಮ ಜೀವನವನ್ನು ಅತ್ಯಂತ ಸುಖ-ಶಾಂತಿ-ಸಮಾಧಾನದಿಂದ ಸಾಗಿಸುತ್ತಿದ್ದರು. ಅವರಿಗೆ ಯಾವ ಚಿಂತೆಯೂ ಇರುತ್ತಿದ್ದಿಲ್ಲ. ಅಂತೆಯೇ ತಮ್ಮ ಜೀವನದ ಬಹು ವೇಳೆಯನ್ನು ಸಂಗೀತ ಕಲೆಯ ಸಾಧನೆಗಾಗಿಯೇ ಉಪಯೋಗಿಸುತ್ತಿದ್ದರು. ಸಂಗೀತದ ತರಬೇತಿಯನ್ನು ವಿದ್ಯಾರ್ಥಿಗಳಿಗೆ ಕೊಡುತ್ತಿದ್ದರು. ಸ್ವಾತಂತ್ರ್ಯದ ನಂತರ ಸಂಸ್ಥಾನಗಳ ವಿಲೀನೀಕರಣವಾಯಿತು. ಇದರಿಂದಾಗಿ ಸಂಗೀತ ವಿದ್ವಾಂಸರು ಸಂಸ್ಥಾನ ಪ್ರದೇಶ ಬಿಟ್ಟು ನಗರ ಪ್ರದೇಶಗಳಿಗೆ ಬಂದು ವಾಸಿಸಹತ್ತಿದರು. ನಗರಗಳಲ್ಲಿಯ ದೊಡ್ಡ ದೊಡ್ಡ ಜಮೀನದಾರರಲ್ಲಿ ಆಶ್ರಯ ಪಡೆದರು. ಆದರೆ ಭೂಸುಧಾರಣೆ ಕಾನೂನದಿಂದಾಗಿ ಜಮೀನದಾರರೇ ನಿರ್ಗತಿಕರಾದಾಗ ಸಂಗೀತಗಾರರನ್ನು ಸಲಹುವದೆಂತು ಎಂಬ ಪ್ರಶ್ನೆ ಉಂಟಾಯಿತು. ಪುರ ಪಟ್ಟಣಗಳಲ್ಲಿಯ ದೊಡ್ಡ ದೊಡ್ಡ ಉದ್ಯಮದಾರರು, ಏಜೆಂಟರು, ಕಾಂಟ್ರಾಕ್ಟರರು, ರಾಜಕಾರಣಿಗಳು, ಅಧಿಕಾರಿಗಳು ಮೊದಲಾದ ಹೊಸ ಬಗೆಯ ಶ್ರೀಮಂತ ವರ್ಗದವರಿಂದ ಪ್ರತಿಷ್ಠಿತರಿಂದ ಗಣ್ಯ ನಾಗರಿಕರಿಂದ ಪೋಷಿಸಲ್ಪಡುವ ಪರಿಸ್ಥಿತಿ ನಿರ್ಮಾಣವಾಗಿದೆ. ಅಂತೆಯೇ ಅನೇಕ ಗಾಯಕರು ಶ್ರೇಷ್ಠ ಮಟ್ಟದ ಕಲಾಕಾರರು ಸಂಗೀತವನ್ನು ಸ್ವತಂತ್ರ ವೃತ್ತಿಯನ್ನಾಗಿ ಕೈಕೊಳ್ಳಲು ಹಿಂಜರಿಯುತ್ತಿದ್ದಾರೆ. ಇನ್ನು ಕೆಲವರು ಬೇರೆ ರೀತಿಯ ಒಳ್ಳೆ ಉತ್ಪನ್ನವಿರುವವರು ಇದೊಂದು ಉಪ ಉದ್ಯೋಗವೆಂದು ಕೈಕೊಳ್ಳುತ್ತಿದ್ದಾರೆ. ಮತ್ತೆ ಕೆಲವರು ಆಕಾಶವಾಣಿ ದೂರದರ್ಶನ ಕೇಂದ್ರಗಳಲ್ಲಿಯಾಗಲಿ, ನಾಟಕ-ಸಿನೇಮಾಗಳಲ್ಲಿಯಾಗಲಿ ನೌಕರಿ ಮಾಡುತ್ತ ಇದೊಂದು

ಉಪ ಉದ್ಯೋಗವನ್ನಾಗಿ ಕೈಕೊಳ್ಳುತ್ತಿದ್ದಾರೆ. ಮತ್ತೆ ಕೆಲವರು ಶಾಲೆ-ಕಾಲೇಜಗಳಲ್ಲಿ ಸಂಗೀತ ಶಿಕ್ಷಕ ವೃತ್ತಿಯನ್ನು ಮುಖ್ಯವಾಗಿ ಇಟ್ಟುಕೊಂಡು ಸಂಗೀತ ವೃತ್ತಿಯನ್ನು ಉಪ ಉದ್ಯೋಗವನ್ನಾಗಿ ಕೈಕೊಂಡಿದ್ದಾರೆ. ಇನ್ನು ಕೆಲವರು ವಂಶ ಪಾರಂಪರ್ಯದಿಂದಾಗಿ ಈ ವೃತ್ತಿಯನ್ನು ಕೈ-ಕೊಂಡಿರುವವರುವರು. ಮತ್ತೆ ಕೆಲವರು ನಾಡಿನ ಹೆಸರಾಂತ ಸಂಗೀತಗಾರರ ಶಿಷ್ಯರೆಂಬ ಖ್ಯಾತಿಯಿಂದಾಗಿ ಈ ವೃತ್ತಿಯನ್ನು ಕೈಕೊಳ್ಳುತ್ತಿದ್ದಾರೆ. ಆದರೆ ಈ ಯಾವುದೆ ಆಧಾರವಿಲ್ಲದೆ ಇರುವ ಸಾಮಾನ್ಯ (ಕಲೆಯಲ್ಲಿ ಅಸಾಮಾನ್ಯ) ವ್ಯಕ್ತಿಯು ಸಂಗೀತಗಾರ ಗಾಯಕ ವೃತ್ತಿಯಿಂದಲೇ ಉಪಜೀವನ ಸಾಗಿಸುವುದು ಶಕ್ಯವೇ ಎಂಬುದು ಅನೇಕರ ಪ್ರಶ್ನೆಯಾಗಿದೆ.

ಸ್ವತಂತ್ರವಾಗಿ ಸಂಗೀತ ವೃತ್ತಿ ಕೈಕೊಳ್ಳಲು ಕಲಾಕಾರರೇನೋ ಹಿಂಜರಿಯುತ್ತಿದ್ದಾರೆ. ಆದರೆ ನಾಡಿನಲ್ಲಿ ಸಂಗೀತದ ಬಗೆಗೆ ಜನಸಾಮಾನ್ಯರಲ್ಲಿ ಮೆಚ್ಚುಗೆ ಹಾಗೂ ಪ್ರಚಾರ ಹೆಚ್ಚಾಗಿದೆ. ಈ ಹಿಂದೆ ರಾಜರಲ್ಲಾಗಲಿ, ಸಂಸ್ಥಾನಿಕರಲ್ಲಾಗಲಿ, ಜಮೀನದಾರರಲ್ಲಿಯಾಗಲಿ ಶ್ರೋತೃ ವರ್ಗದ ಸಂಖ್ಯೆ ಕಡಿಮೆಯಿತ್ತು. ಈಗ ಹಾಗಿಲ್ಲ. ಸಂಗೀತ ಕೇಳುವವರ ಸಂಖ್ಯೆ ಹೆಚ್ಚಾಗಿದೆ. ಇದರಂತೆ ಈ ಹಿಂದೆ ಸಂಗೀತ ಕಲಿಯುವುದು ಕೂಡ ಕಠಿಣವಾಗಿತ್ತು. ಗುರುಗಳಲ್ಲಿ ಅನೇಕ ವರುಷದವರೆಗೆ ಅವರ ಸೇವೆ ಮಾಡುತ್ತಾ ಗುರುಕುಲ ಪದ್ಧತಿಯಂತೆ ಕಲಿಯಬೇಕಾಗುತ್ತಿತ್ತು. ಅನೇಕ ವರುಷಗಳವರೆಗೆ ಕೆಲವೇ ರಾಗಗಳನ್ನು ಕೆಲವೇ ಚೀಜುಗಳನ್ನು ಕಲಿಯಬೇಕಾಗುತ್ತಿತ್ತು. ಗುರುಗಳ ಅಪ್ಪಣೆ ಇಲ್ಲದೆ ಹೊರಗೆ ಸ್ವತಂತ್ರವಾಗಿ ಕಾರ್ಯಕ್ರಮಗಳನ್ನು ನಡೆಸಲಾಗುತ್ತಿದ್ದಿಲ್ಲ. ಈಗ ಹಾಗಿಲ್ಲ, ಶಾಲೆ ಕಾಲೇಜುಗಳಲ್ಲಿ ಪಠ್ಯಕ್ರಮಾನುಸಾರ ಸಂಗೀತ ಶಿಕ್ಷಣ ಕೊಡಲಾಗುತ್ತದೆ. ಇಷ್ಟೇ ಅಲ್ಲಾ, ವಿಶ್ವವಿದ್ಯಾಲಯಗಳಲ್ಲಿ ಕೂಡ ಸಂಗೀತ ಮುಖ್ಯ ವಿಷಯವನ್ನಾಗಿ ತೆಗೆದುಕೊಂಡು ಪದವೀ ಪಡೆಯುವ ಅವಕಾಶಗಳವೆ. ಎಸ್.ಎಸ್. ಎಲ್.ಸಿ. ಹಾಗೂ ಪಿಯು.ಸಿ. ಯಿಂದ ಪದವಿ ವರೆಗಿನ ಪರೀಕ್ಷೆಗಳಲ್ಲಿ ಸಂಗೀತವನ್ನು ಮುಖ್ಯ ವಿಷಯವನ್ನಾಗಿ ಕಲಿಸಲಾಗುತ್ತದೆ. ಅಲ್ಲದೆ ಈ ಹಿಂದೆ ಅಲಭ್ಯವಾಗಿದ್ದ ಸಂಗೀತ ಚೀಜುಗಳು ಪುಸ್ತಕರೂಪದಲ್ಲಿ ಲಭ್ಯ

ವಾಗಿರುತ್ತವೆ. ಇಷ್ಟೇ ಅಲ್ಲಾ, ಇಲೆಕ್ಟ್ರಾನಿಕ್ಸ್‌ದಿಂದಾಗಿ ಕೆಸೆಟ್ಟುಗಳು ಸಾಕಷ್ಟು ಲಭ್ಯವಿರುವುದರಿಂದ ಸಂಗೀತ ಕಲಿಯಲು ಹೆಚ್ಚಿನ ಅವಕಾಶವು ದೊರೆಯತ್ತಿದೆ.

ಒಂದು ಕಡೆ ಸಂಗೀತ ಕಲಿಯಲು ಮೊದಲಿಗಿಂತಲೂ ಈಗ ಅವಕಾಶ ಸೌಲಭ್ಯ ಹೆಚ್ಚಾಗಿದೆ. ಇನ್ನೊಂದೆಡೆ ಸಂಗೀತ ಕೇಳುವವರ (ಶ್ರೋತೃಗಳ) ಸಂಖ್ಯೆಯೂ ಹೆಚ್ಚಾಗಿದೆ. ಸಂಗೀತದ ಬಗೆಗೆ ಪ್ರಚಾರವೂ ಹೆಚ್ಚಾಗಿದೆ.

ಹೀಗಾಗಿ ಈಗ ಸಂಗೀತಗಾರರಿಗೆ ಮೊದಲಿಗಿಂತಲೂ ಹೆಚ್ಚು ಅವಕಾಶವಿದೆ. ಈ ಹಿಂದೆ ರಾಜ ಮಹಾರಾಜರು ಸಂಸ್ಥಾನಿಕರು ಜಮೀನದಾರರು ಮೊದಲಾದ ಕೆಲವೇ ವರ್ಗದ ಜನರು ಶ್ರೋತೃಗಳಾಗಿದ್ದರು, ಹಾಗೂ ಕಲಾಕಾರರ ಆಶ್ರಯದಾತರಾಗಿದ್ದರು. ಆದರೆ ಈಗ ಕಾಲ ಬದಲಾಗಿದೆ. ಸಾಮಾನ್ಯ ಜನರು ತಮ್ಮ ಕುಟುಂಬದ ಮದುವೆ-ಮುಂಜಿ-ಗೃಹಪ್ರವೇಶಗಳಿಂದ ಖಾಸಗಿ ಸಮಾರಂಭಗಳಲ್ಲಿ ಸಂಗೀತಗಾರರ ಕಾರ್ಯಕ್ರಮವನ್ನು ಇಟ್ಟಿರುತ್ತಾರೆ. ಇದಲ್ಲದೆ ನಾಡಹಬ್ಬ-ಗಣೇಶಹಬ್ಬ-ದೀಪಾವಳಿ ಮೊದಲಾದ ಸಾರ್ವಜನಿಕ ಕಾರ್ಯಕ್ರಮದಲ್ಲಿ ರಾಜ್ಯೋತ್ಸವ-ಸ್ವಾತಂತ್ರ್ಯೋತ್ಸವ-ಗಣರಾಜ್ಯೋತ್ಸವ ಮೊದಲಾದ ರಾಷ್ಟ್ರೀಯ ಕಾರ್ಯಕ್ರಮಗಳಲ್ಲಿ ಸಂಗೀತಗಾರರಿಗೆ ಅವಕಾಶವಿದೆ. ಸಿನೇಮಾ-ನಾಟಕ-ಟೀವಿಗಳಲ್ಲಿಯೂ ಸಂಗೀತಗಾರರಿಗೆ ಅವಕಾಶವಿದೆ. ಆದಾಗ್ಯೂ ಎಲ್ಲ ಸಂಗೀತಕಾರರ ವೃತ್ತಿ ಚನ್ನಾಗಿ ನಡೆಯುತ್ತಿದೆಯೆಂದು ಹೇಳಲು ಬಾರದು.

ಫಲಜ್ಯೋತಿಷ್ಯದಲ್ಲಿ ಗಾಯಕ ವೃತ್ತಿಯ ಕಾರಕ ಗ್ರಹ ಲಗ್ನ ಸ್ಥಾನಾದಿಗಳು ಯಾವವು ಎಂಬುದನ್ನು ತಿಳಿಯುವ ಮೊದಲು ಒಂದು ಮಹತ್ವದ ಸಂಗತಿಯೆಂದರೆ— ಎಲ್ಲ ವ್ಯಕ್ತಿಗಳು ಎಲ್ಲ ವೃತ್ತಿಯಲ್ಲಿ ಯಶಸ್ಸು ಪಡೆಯಲಾರರು. ನಿರ್ದಿಷ್ಟವಾದ ಗ್ರಹಯೋಗವಿದ್ದವರೇ ಯಶಸ್ವಿ ಸಂಗೀತಗಾರರಾಗುವರು. ಇನ್ನೂ ಒಂದು ಮಹತ್ವದ ಸಂಗತಿಯೆಂದರೆ— ಸಂಗೀತದಲ್ಲಿ ಪಂಡಿತರು, ವಿದ್ವಾಂಸರೆಲ್ಲರೂ ಸಂಗೀತ ವೃತ್ತಿಯಲ್ಲಿ

ಅರ್ಥಾತ್ ಸಾರ್ವಜನಿಕ ಕಾರ್ಯಕ್ರಮಗಳಲ್ಲಿ ಯಶಸ್ವಿಯಾಗುತ್ತಾರೆಯೆಂದು ಹೇಳಲುಬಾರದು.

ಆದುದರಿಂದ ಸಂಗೀತಗಾರಿಕೆ ಅರ್ಥಾತ್ ಗಾಯಕ ವೃತ್ತಿ ಕೈಕೊಳ್ಳುವರಿಗೆ ಕಾರಕ ಗ್ರಹ ಲಗ್ನ ಸ್ಥಾನ ರಾಶ್ಯಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

ಸಂಗೀತ ವೃತ್ತಿ ಕೈಕೊಳ್ಳಲು ಅರ್ಥಾತ್ ಗಾಯಕ ವೃತ್ತಿ ಕೈಕೊಳ್ಳುವವರ ಕಾರಕಗ್ರಹ ಯಾವುದೆಂಬುದನ್ನು ತಿಳಿಯುವ ಮೊದಲು ಗಾಯನದಲ್ಲಿಯ (ಸಂಗೀತದಲ್ಲಿಯ ಪ್ರಕಾರ, ಪದ್ಧತಿಗಳನ್ನು ತಿಳಿಯುವುದು ಅವಶ್ಯವು. ಏಕೆಂದರೆ ಈ ವೃತ್ತಿಯು ಇಂದು ಕ್ಲಿಷ್ಟವೂ ವಿಸ್ತೃತವೂ ಆಗಿರುವುದರಿಂದ ಅನೇಕ ಗ್ರಹಗಳು ಕಾರಕವಿರುತ್ತವೆ.

**ಸಂಗೀತ (ಗಾಯನ)ದಲ್ಲಿಯ ಪ್ರಕಾರಗಳು**

ಸಂಗೀತದಲ್ಲಿ ಸ್ಥೂಲವಾಗಿ ಮೂರು ಪ್ರಕಾರಗಳು:

(೧) ಶಾಸ್ತ್ರೀಯ ಸಂಗೀತ

(೨) ಉಪಶಾಸ್ತ್ರೀಯ ಸಂಗೀತ

(೩) ಸುಗಮ ಸಂಗೀತ

ಈ ಮೂರು ಪ್ರಕಾರದ ಸಂಗೀತವೃತ್ತಿಗೆ ಭಿನ್ನ ಭಿನ್ನ ಗ್ರಹಗಳು ಕಾರಕವಿರುತ್ತವೆ.

**ವಿವಿಧ ಪದ್ಧತಿಯ ಸಂಗೀತಗಾರರು**

**(೧) ಶಾಸ್ತ್ರೀಯ ಸಂಗೀತ**

ಶಾಸ್ತ್ರೀಯ ಸಂಗೀತದಲ್ಲಿ ಕೂಡ ಅನೇಕ ಪ್ರಕಾರಗಳಿವೆ. ಉದಾಹರಣೆಗೆ— ಧೃಪದ, ಧಮಾರ, ಖ್ಯಾಲ ಗಾಯಕರೆಂಬ. ಇನ್ನು ಖ್ಯಾಲ ಗಾಯಕರಲ್ಲಿಯೂ ಕೂಡ ವಿವಿಧ ಘರಾಣೆಗಳಿವೆ. ಘರಾಣೆಗಳೆಂದರೆ ಸಂಗೀತದಲ್ಲಿಯ ವಿಶಿಷ್ಟ ಪರಂಪರೆ ಪದ್ಧತಿ. ಘರಾಣೆಯಲ್ಲಿ ಅನೇಕ ಪ್ರಕಾರಗಳಿದ್ದು ಸಾಮಾನ್ಯವಾಗಿ ಗ್ವಾಲ್ಹೇರ, ಕಿರಾಣಾ, ಆಗ್ರಾ, ಜಯಪುರ

ಪ್ರಮುಖವಾಗಿ ನಾಲ್ಕು ಘರಾಣೆಗಳು ಪ್ರಚಲಿತದಲ್ಲಿವೆ. ಆಯಾ ಘರಾಣೆಗಳ ವಿಶಿಷ್ಟ ಪರಂಪರೆ ಪದ್ಧತಿಯ ವಿಶಿಷ್ಟ ಗಾಯನ ಶೈಲಿ ಇರುತ್ತವೆ. ಕೆಲವು ಘರಾಣೆಗಳು ನಾದಕ್ಕೆ ಅರ್ಥಾತ್ ಸ್ವರಕ್ಕೆ ಪ್ರಾಮುಖ್ಯತೆ ಕೊಟ್ಟರೆ ಕೆಲ ಘರಾಣೆಗಳು ತಾನಬಾಜಿಗೂ, ಕೆಲ ಘರಾಣೆಗಳು ಲಯಕಾರಕ್ಕೂ ಮಹತ್ವ ಕೊಡುತ್ತವೆ. ಹೀಗೆ ವಿಶಿಷ್ಟ ಪದ್ಧತಿಯ ಸಂಗೀತಕ್ಕೆ ವಿಶಿಷ್ಟ ಗ್ರಹಗಳು ಕಾರಕವಿರುತ್ತವೆ.

### (೩) ಉಪ ಶಾಸ್ತ್ರೀಯ ಸಂಗೀತ

ಉಪ ಶಾಸ್ತ್ರೀಯ ಸಂಗೀತದಲ್ಲಿ ಕೂಡ ಅನೇಕ ಪ್ರಕಾರಗಳಿವೆ. ಉದಾಹರಣೆಗೆ – ಠುಮರಿ, ಟಪ್ಪಾ, ಕಜರಿ, ಚೈತಿ, ಸಾವನ, ಹೋರಿ ಇವೇ ಮೊದಲಾದ ವಿಶಿಷ್ಟ ಶೈಲಿಯ ಸಂಗೀತಗಳಿಗೆ ವಿಶಿಷ್ಟ ಗ್ರಹಾದಿಗಳು ಕಾರಕವಿರುತ್ತವೆ.

### (೪) ಸುಗಮ ಸಂಗೀತ

ಸುಗಮ ಸಂಗೀತದಲ್ಲಿಯಂತೂ ಅನೇಕ ಪ್ರಕಾರಗಳಿವೆ. ಉದಾಹರಣೆಗೆ - ಭಾವಗೀತೆ, ಭಕ್ತಿಗೀತೆ, ಭಜನೆ, ನಾಟ್ಯಗೀತೆ, ಸಿನೇಮಾ ಸಂಗೀತ. ಜಾನಪದ ಸಂಗೀತ ಮೊದಲಾದವು. ಅದರಲ್ಲಿಯೂ ಜನಪದ ಸಂಗೀತದಲ್ಲಿ ಮತ್ತೆ ಅನೇಕ ಪ್ರಕಾರಗಳಿವೆ. ಉದಾಹರಣೆಗೆ– ಸಂಪ್ರದಾಯದ ಹಾಡು, ಮದುವೆ ಹಾಡು, ಬೀಗತಿ ಹಾಡು, ಸುಗ್ಗಿಯ ಹಾಡು, ಹಂತೀ ಹಾಡು, ಕಸಬಿನ ಹಾಡು, ಬೀಸುವ ಕಲ್ಲ ಹಾಡು, ನೀತಿಹಾಡು, ಡೊಳ್ಳಿನ ಪದ, ಲಾವಣಿ, ಗೀಗಿ ಪದ ಇತ್ಯಾದಿ.

ಹೀಗೆ ಸಂಗೀತದಲ್ಲಿ ವೈವಿದ್ಯತೆಯಿರುವುದರಿಂದ ವಿಶಿಷ್ಟ ಪ್ರಕಾರದ ಸಂಗೀತಕ್ಕೆ ವಿಶಿಷ್ಟ ಗ್ರಹಗಳು ಕಾರಕವಿರುತ್ತವೆ. ಆದುದರಿಂದ ಯಾವ-ಯಾವ ಪ್ರಕಾರದ ಸಂಗೀತಕ್ಕೆ ಯಾವ-ಯಾವ ಗ್ರಹಗಳು ಕಾರಕವಿರುತ್ತವೆ ಎಂಬುದನ್ನು ಪರಿಶೀಲಿಸುವಾ.

ಕಾರಕ ಗ್ರಹ :— ಯಾವುದೇ ಪ್ರಕಾರದ ಯಾವುದೇ ಪದ್ಧತಿಯ

ಸಂಗೀತಕ್ಕೆ ಶುಕ್ರನು ಕಾರಕನು. ಏಕೆಂದರೆ, ಸಂಗೀತವು ಒಂದು ಕಲೆ. ಆದುದರಿಂದ ಕಲೆಯ ಕಾರಕನೂ ಕಲಾ ಪೋಷಕನೂ ಆದ ಶುಕ್ರನು ಬಲಾಢ್ಯನಿರದೆ ಯಾರೂ ಯಾವುದೇ ಪ್ರಕಾರದ ಸಂಗೀತದಲ್ಲಿ ಹಾಗೂ ಸಂಗೀತ ವೃತ್ತಿಯಲ್ಲಿ ಯಶಸ್ವಿಯಾಗರು. ಬಲಾಢ್ಯನೆಂದರೆ ರಾಶಿ ಬಲದವನೂ, ಸ್ಥಾನ ಬಲದವನೂ ಇರಬೇಕು. ಆದರೆ ಸ್ವರ (ನಾದ) ಪ್ರಧಾನವಿರುವ ಘರಾಣೆದವರಿಗೆ ಶುಕ್ರನೊಂದಿಗೆ ಚಂದ್ರನ ಬಲಾಬಲವನ್ನೂ ಪರಿಶೀಲಿಸಬೇಕು. ಏಕೆಂದರೆ ಚಂದ್ರನು ಮನಸ್ಸಿನ ಕಾರಕನು. ಮನಸ್ಸಿಗೆ ಒಪ್ಪದೆ ಯಾರಿಗೂ ಯಾವುದೇ ವಿಷಯದಲ್ಲಿ ಒಲವು ಲವಲವಿಕೆ-ಆಸಕ್ತಿ-ಮಗ್ನತೆ- ತಲ್ಲೀನತೆ ಉಂಟಾಗದು. ಸ್ವರ ಪ್ರಧಾನವಿರುವ ಪದ್ಧತಿಯಲ್ಲಿ ಸ್ವರ ಹಚ್ಚುವದರಲ್ಲಿಯೇ ತಲ್ಲೀನತೆ ಮಗ್ನತೆ-ಆಸಕ್ತತೆ ಇರುತ್ತದೆ. ಆದುದರಿಂದ ಚಂದ್ರನ ಬಲಾಬಲವನ್ನು ಪರಿಶೀಲಿಸಬೇಕು. ಆದರೆ ಒಂದು ಮಹತ್ವದ ಸಂಗತಿಯೆಂದರೆ— ಸ್ವರ ಪ್ರಧಾನವಿರುವ ಪದ್ಧತಿಯ ಸಂಗೀತಗಾರರಿಗೆ ಶುಕ್ರನು ರಾಶಿಬಲದವನೂ ಸ್ಥಾನಬಲದವನೂ ಇದ್ದರೆ, ಚಂದ್ರನು ಕೇವಲ ರಾಶಿಬಲದವನಿದ್ದರೆ ಸಾಕು. ಇನ್ನು ತಾನಾಬಾಜಿಗೆ ಮಹತ್ವ ಕೊಟ್ಟ ಪದ್ಧತಿಯ ಘರಾಣೆದ ಸಂಗೀತಗಾರರಿಗೆ ಶುಕ್ರನೊಂದಿಗೆ ಬುಧನ ಬಲಾಬಲವನ್ನು ಪರಿಶೀಲಿಸಬೇಕು. ಏಕೆಂದರೆ ಬುಧನು ವಾಣಿಕಾರಕನು. ಮಾತಿನಲ್ಲಿ ಸ್ಪಷ್ಟತೆ ಇರಲು ಬುಧನು ಬಲಾಢ್ಯನಿರಬೇಕಾಗುತ್ತದೆ. ಇಲ್ಲಿಯೂ ಅಷ್ಟೇ, ಶುಕ್ರನು ರಾಶಿ-ಸ್ಥಾನ ಬಲದವನೂ ಇದ್ದರೆ ಬುಧನು ಕೇವಲ ರಾಶಿಬಲದವನಿದ್ದರಾಯಿತು. ಇದರಂತೆ ಲಯಕಾರಕ್ಕೆ ಪ್ರಧಾನತೆ ಕೊಟ್ಟ ಘರಾಣೆ ಸಂಗೀತಗಾರರಿಗೆ ಶುಕ್ರನೊಂದಿಗೆ ಗುರುವಿನ ಬಲಾಬಲವನ್ನು ಪರಿಶೀಲಿಸಬೇಕು, ಏಕೆಂದರೆ ಲಯಕಾರಕ ಅಂದರೆ ಅಂಕಗಣಿತ ಲೆಕ್ಕದಂತೆ. ಆದ್ದರಿಂದ ಗಣಿತಕಾರಕನಾದ ಗುರುವು ಬಲಾಢ್ಯನಿರಬೇಕಾಗುತ್ತದೆ. ಇಲ್ಲಿಯೂ ಅಷ್ಟೆ, ಶುಕ್ರನು ರಾಶಿಬಲದವನೂ, ಸ್ಥಾನಬಲದವನೂ ಇದ್ದರೆ ಗುರು ಕೇವಲ ರಾಶಿಬಲದವನಿರಬಹುದು. ಇವರಂತೆ ಉಪಶಾಸ್ತ್ರೀಯ ಸಂಗೀತಗಳಾದ ಟುಮರಿ, ಟಪ್ಪಾ, ಚೈತಿ, ಸಾವನ, ಕಜರಿ, ಹೋರಿ ಮೊದಲಾದ ಸಂಗೀತಗಾರರಿಗೆ ಶುಕ್ರ-ಚಂದ್ರ-

ಬಾಧ ಆದರಲ್ಲಿಯು ಶುಕ್ರನೇ ಹೆಚ್ಚು ಬಲಾಢ್ಯನು. ಏಕೆಂದರೆ ಈ ಉಪಶಾಸ್ತ್ರೀಯ ಸಂಗೀತದಲ್ಲಿ ಶೃಂಗಾರ ರಸ ಪ್ರಧಾನವಿರುತ್ತದೆ. ಈ ಮೂರೂ ಗ್ರಹಗಳು ಬಲಾಢ್ಯವಿರಬೇಕಾಗುಗುತ್ತದೆ. ಏಕೆಂದರೆ ಇವು ಮಿಶ್ರಗ್ರಹಗಳು, ಹಾಗೂ ಕ್ಷುದ್ರ ತಾಳಗಳಲ್ಲಿ ಹಾಡಲಾಗುತ್ತದೆ. ಇದರಂತೆ ಸುಗಮ ಸಂಗೀತಗಾರರಿಗೆ ಶುಕ್ರ- ಚಂದ್ರ ಈರ್ವರೂ ಕಾರಕರು. ಆದರೆ ಸಂಪ್ರದಾಯದ ಹಾಡು, ಸುಗ್ಗಿ ಹಾಡು, ಜಾನಪದ ಹಾಡು ವೊದಲಾದ ಹಾಡುಗಳ ಗಾಯಕರಿಗೆ ಶುಕ್ರನೊಂದಿಗೆ ಶನಿಯ ಬಲಾಬಲವನ್ನು ಪರಿಶೀಲಿಸಬೇಕು. ಶನಿಯು ಕೇವಲ ರಾಶಿಬಲದವನಿದ್ದರಾಯಿತು. ಇದರಂತೆ ಭಜನೆ-ಭಕ್ತಿಗೀತೆಗಳಿಗೆ ಶುಕ್ರ-ಗುರುಗಳು ಕಾರಕರು. ಭಾವಗೀತೆಗಳಿಗೆ ನಾಟ್ಯಗೀತೆಗಳಿಗೆ ಶುಕ್ರ-ಚಂದ್ರ ಕಾರಕರು. ಹೀಗೆ ವಿಭಿನ್ನ ಪ್ರಕಾರದ ಸಂಗೀತಗಳಿಗೆ ಶುಕ್ರನೊಂದಿಗೆ ಉಳಿದ ಗ್ರಹಗಳ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ.

### ನವರಸಗಳ ಮೇಲಿಂದ

ನವರಸಗಳಾದ ಶೃಂಗಾರ-ಹಾಸ್ಯ-ಕರುಣ-ರೌದ್ರ-ವೀರ-ಭಯಾನಕ ಭೀಭತ್ಸ-ಅದ್ಭುತಶಾಂತ ಇಂತಹ ಈ ರಸಗಳನ್ನು ಶಾಸ್ತ್ರೀಯ ಸಪ್ತಸ್ವರಗಳಲ್ಲಿ ಈ ರೀತಿಯಾಗಿ ಅಳವಡಿಸಲಾಗಿದೆ. "ಸ, ರಿ" ಇವು ವೀರ-ರೌದ್ರ-ಅದ್ಭುತ ರಸಗಳ ಪೋಷಕವಾಗಿರುತ್ತವೆ. "ಧ"ವು ಭೀಭತ್ಸ-ಭಯಾನಕ ರಸಗಳ ಪೋಷಕವಿರುತ್ತವೆ. "ಗ, ನಿ" ಇವು ಕರುಣಾ- ಶಾಂತ ರಸಗಳ ಪೋಷಕ ಇವೆ, "ಮಾ, ಪ" ಇವು ಹಾಸ್ಯ-ಶೃಂಗಾರ ರಸಗಳ ಪೋಷಕಗಳು.

ಇನ್ನು ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ಸಂಗೀತಕ್ಕೆ ಶುಕ್ರನೇ ಕಾರಕ. ಆದರೆ ಭಿನ್ನ ಭಿನ್ನ ಸ್ವರಗಳ ಮೇಲೆ, ಭಿನ್ನ ಭಿನ್ನ ರಾಗಗಳ ಮೇಲೆ ವಿಭಿನ್ನ ಗ್ರಹಗಳು ರಾಶಿಗಳು ಕಾರಕವಿರುತ್ತವೆ, ಪೋಷಕವಿರುತ್ತವೆ. ಹೇಗೆಂದರೆ "ಸಾ" ದ ಮೇಲೆ ಸೂರ್ಯದ ಪ್ರಭುತ್ವವು, ಸಿಂಹ ರಾಶಿಯ ಪೋಷಕತ್ವವು ಇರುತ್ತವೆ "ರಿ" ದ ಮೇಲೆ ಬುಧನ ಹಾಗು ಮಿಥುನ-ಕನ್ಯಾ ರಾಶಿಗಳು ಪೋಷಕವು. "ಗ" ದ ಮೇಲೆ

ಶನಿಯ ಪ್ರಭುತ್ವವು; ಹಾಗೂ ಮಕರ-ಕುಂಭ ರಾಶಿಗಳ ಪೋಷಕತ್ವವು. "ಮ" ದ ಮೇಲೆ ಶುಕ್ರನ ಪ್ರಭುತ್ವವು ಹಾಗೂ ವೃಷಭ, ತುಲಾ ರಾಶಿಗಳು ಪೋಷಕವು. "ಪ" ದ ಮೇಲೆ ಚಂದ್ರನ ಪ್ರಭುತ್ವವು ಕರ್ಕ ರಾಶಿಯು ಪೋಷಕವು. "ಧ" ದ ಮೇಲೆ ಮಂಗಳನ ಪ್ರಭುತ್ವವು ಹಾಗೂ ಮೇಷ-ವೃಶ್ಚಿಕ ರಾಶಿಗಳು ಪೋಷಕವು. "ನಿ" ದ ಮೇಲೆ ಗುರುವಿನ ಪ್ರಭುತ್ವವು, ಧನು-ಮೀನ ರಾಶಿಗಳು ಪೋಷಕವು. ಹೀಗೆ ವಿಭಿನ್ನ ರಾಶಿಗಳಿಗೂ ವಿಭಿನ್ನ ಸ್ವರಗಳಿಗೂ ವಿಭಿನ್ನ ಗ್ರಹಗಳು ಕಾರಕವೂ ಪೋಷಕವೂ ಇರುತ್ತವೆ. ಆದುದರಿಂದ ಜಾತಕದಲ್ಲಿ ಯಾವ ಗ್ರಹಗಳು ಬಲಾಢ್ಯವಿರುವವೋ ಆ ಗ್ರಹಗಳ ಕಾರಕ ಸ್ವರಗಳು ಕಾರಕ ರಸಗಳು ಪ್ರಧಾನವಿರುವ ಸಂಗೀತವನ್ನು ಜಾರಿಸಿದಲ್ಲಿ ಇಲ್ಲವೆ ನುಡಿಸಿದಲ್ಲಿ ಇಲ್ಲವೆ ಗಾಯನ ಮಾಡುವುದರಿಂದ ಗಾಯಕರ ಗಾಯನ ಕಾರ್ಯಕ್ರಮವು ಯಶಸ್ವಿಯಾಗುವುದರಲ್ಲಿ ಸಂದೇಹವಿಲ್ಲ.

ಸಂಗೀತದಲ್ಲಿ ಯಾವುದೇ ರಾಗ ತೆಗೆದುಕೊಂಡರೂ ಷಡ್ಜ ಅಥವಾ ಪಂಚಮ ಸ್ವರಗಳು ಹೆಚ್ಚು ಮಹತ್ವದವಾಗಿರುತ್ತವೆ.

ಇದರಂತೆ ರಾಗಗಳಲ್ಲಿ ಕೂಡ ವೀರ-ಶೃಂಗಾರ-ಕರುಣಾ ರಸಗಳೇ ಪ್ರಧಾನವಾದಿರುತ್ತವೆ. ಆದುದರಿಂದ ಸಪ್ತಸ್ವರಗಳನ್ನು ನವರಸಗಳಲ್ಲಿ ಹೀಗೆ ಅಳವಡಿಸಲಾಗಿದೆ. ವೀರ-ರೌದ್ರ-ಅದ್ಭುತ-ಭೀಭತ್ಸ-ಭಯಾನಕ ಮೊದಲಾದ ವೀರ ರಸಗಳೇ ಪ್ರಧಾನವಿರುವ ರಾಗಗಳಿಗೆ "ಸಾ" "ರೆ" "ಧ" ಇವು ಪ್ರಧಾನ ಸ್ವರಗಳಿರುವಂತೆ ಸೂರ್ಯ-ಮಂಗಳರು ಪ್ರಮುಖ ಕಾರಕ ಗ್ರಹಗಳು.

ಇದರಂತೆ ಹಾಸ್ಯ ಹಾಗೂ ಶೃಂಗಾರ ಈ ರಸಗಳಿಗೆ "ಮ" "ಪ" ಇವು ಪ್ರಧಾನ ಸ್ವರಗಳಿರುವಂತೆ ಶುಕ್ರ-ಚಂದ್ರ-ಬುಧರು ಪ್ರಮುಖ ಕಾರಕ ಗ್ರಹಗಳು.

ಇದರಂತೆ ಕರುಣಾ-(ಶೋಕ) ಶಾಂತ ಈ ರಸಗಳಿಗೆ "ಗ, ನಿ" ಇವು ಪ್ರಮುಖ ಸ್ವರಗಳಿರುವಂತೆ ಶನಿ-ಗುರುಗಳು ಪ್ರಧಾನ ಕಾರಕ ಗ್ರಹಗಳು.

ಹೀಗೆ ವಿಭಿನ್ನ ರಸಗಳಿಗೆ ವಿಭಿನ್ನ ಸ್ವರಗಳು ಪ್ರಧಾನವಿರುವಂತೆ ವಿವಿಧ ಗ್ರಹಗಳು ಪೋಷಕವಿರುತ್ತವೆ. ಉದಾಹರಣೆಗೆ— "ದರಬಾರಿ ಕಾನಡಾ" ರಾಗವನ್ನೆ ತೆಗೆದುಕೊಳ್ಳಿರಿ. ಇಲ್ಲಿ ಧೈವತ್ತದ ಆಂದೋಲನದ ಪ್ರಭಾವ ಹೆಚ್ಚಿರುತ್ತದೆ. "ಧೈವತ್ತ"ದ ಮೇಲೆ ಮಂಗಳನ ಪ್ರಭುತ್ವ ವಿರುತ್ತದೆ. ಆದುದರಿಂದ ಜಾತಕದಲ್ಲಿ ಮಂಗಳನು ಬಲಾಢ್ಯನಿರುವ ಸಂಗೀತ ಗಾರರು ದರಬಾರ ಕಾನಡಾ ರಾಗ ಹಾಡುವುದರಲ್ಲಿ ಯಶಸ್ವಿಯಾಗು ತ್ತಾರೆ. ಇದಲ್ಲದೆ ಈ ರಾಗವು ಗಂಭೀರ ಸ್ವಭಾವದ ರಸಗಳಾದ ವೀರ-ಅದ್ಭುತ-ರೌದ್ರ ರಸ ಪ್ರಧಾನವಿರುತ್ತದೆ. ಆದುದರಿಂದ ಸೂರ್ಯನು ಸಹ ಈ ರಾಗಕ್ಕೆ ಕಾರಕನು. ಇಂತು ರವಿ-ಮಂಗಳರು ಬಲಾಢ್ಯರಿರುವವರು ದರಬಾರಿ ಕಾನಡಾದಂಥ ವೀರ ರಸಪ್ರಧಾನವಿರುವ ಹಿಂಡೋಲ, ಮಾಲಕಂಸ, ಶಂಕರಾ ಮೊದಲಾದ ರಾಗಗಳಲ್ಲಿ ಪ್ರಭುತ್ವ ಪಡೆಯಬಲ್ಲರು.

ಇದರಂತೆ ಶೃಂಗಾರ ರಸ ಪ್ರಧಾನವಿರುವ ಕಾಫಿ-ದೇಶ-ತಿಲಕ ಕಾಮೊದ ಹಾಗೂ ಟುಮರಿಯ ಎಲ್ಲ ಪ್ರಕಾರಗಳಿಗೂ ಶುಕ್ರ-ಚಂದ್ರರೇ ಕಾರಕರಿರುತ್ತಾರೆ. ಅದರಲ್ಲಿಯೂ ಶುಕ್ರನು ಹೆಚ್ಚು ಕಾರಕನು.

ಇದರಂತೆ ಶಾಂತ ರಸ ಪ್ರಧಾನವಿರುವ ಭೂಪ-ಶುದ್ಧಕಲ್ಯಾಣ -ಯಮನ-ಭೀಮಪಲಾಸ ಮೊದಲಾದ ರಾಗಗಳಿಗೆ ಗುರು-ಚಂದ್ರರು ಕಾರಕರು.

ಇದರಂತೆ ಕರುಣಾರಸ ಪ್ರಧಾನವಿರುವ ಲಲಿತ-ತೋಡಿ-ಜೋಗಿಯಾ-ಭೈರವಿ ಮೊದಲಾದ ರಾಗಗಳಿಗೆ ಗುರು-ಶನಿಯರು ಕಾರಕರು. ಅದರಲ್ಲಿಯೂ ಶನಿಯು ಹೆಚ್ಚು ಕಾರಕನು.

ಇದಲ್ಲದೆ ವೀರ ರಸ ಪ್ರಧಾನವಿರುವ ರಾಗಗಳನ್ನು ಹಾಡುವವರ ಜಾತಕದಲ್ಲಿ ಅನೇಕ ಗ್ರಹಗಳು ಪುರುಷ ರಾಶಿಯಲ್ಲಿದ್ದರೆ ಕರುಣಾ ರಸ ಹಾಗೂ ಶೃಂಗಾರ ರಸ ಪ್ರಧಾನವಿರುವ ರಾಗಗಳನ್ನು ಹಾಡುವ ಗಾಯಕರ ಜಾತಕದಲ್ಲಿ ಸ್ತ್ರೀಗ್ರಹಗಳೇ ಬಲಾಢ್ಯವಿರುತ್ತವೆ, ಹಾಗೂ ಸ್ತ್ರೀ

ರಾಶಿಯಲ್ಲಿರುತ್ತವೆ.

ಸ್ಥಾನ:— ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಸಂಗೀತ ವೃತ್ತಿ ಕೈಕೊಳ್ಳುವವರಿಗೆ ಗಾಯಕರಿಗೆ ದ್ವಿತೀಯ ಸ್ಥಾನವೇ ಮೂಲ ಹಾಗೂ ಮುಖ್ಯವಿರುತ್ತದೆ. ಏಕೆಂದರೆ ದ್ವಿತೀಯ ಸ್ಥಾನವದು ವಾಣಿ ಸ್ಥಾನವೂ, ಕಂಠ ಸ್ಥಾನವೂ ಶಬ್ದ ಸ್ಥಾನವೂ ಧ್ವನಿಯ ಸ್ಥಾನವೂ ಇರುತ್ತದೆ. ಇಂತು ದ್ವಿತೀಯಸ್ಥಾನ-ದ್ವಿತೀಯೇಶರು ಬಲಾಢ್ಯರಿರದೆ ಯಾರೂ ಯಶಸ್ವಿಯಾಗರು. ಅದರಲ್ಲಿಯೂ ದ್ವಿತೀಯ ಸ್ಥಾನ ದ್ವಿತೀಯೇಶರು ವಾಗು ವೃಥ್ವಿರಾಶಿ ಯವರಾಗಿದ್ದಾರೆ. ಧ್ವನಿಯಲ್ಲಿ ಮಾಧುರ್ಯವನ್ನು ಇಂಪನ್ನು ಕೊಡುತ್ತಾರೆ. ಅಗ್ನಿ ರಾಶಿಗಳಿದ್ದರೆ ಉಚ್ಚಾರದಲ್ಲಿ ಸ್ಪಷ್ಟ ಅಸ್ಖಲಿತತೆ ಉಂಟಾಗುತ್ತದೆ. ದ್ವಿತೀಯದ ನಂತರ ಲಗ್ನ-ಪಂಚಮ-ಚತುರ್ಥ ಸ್ಥಾನಗಳನ್ನು ಪರಿಶೀಲಿಸ ಬೇಕು. ಏಕೆಂದರೆ ಲಗ್ನ-ಚತುರ್ಥ ಈ ಸ್ಥಾನಗಳು ಮನಸ್ಸಿನ ಸ್ಥಾನ ಗಳು. ಮನಸ್ಸು ಸ್ಥಿಮಿತದಲ್ಲಿದ್ದರೆ ಗಾಯನ ಚೆನ್ನಾಗಿ ಆಗುತ್ತದೆ. ಇದೇ ಇಂಗ್ಲೀಷದಲ್ಲಿ "ಮೂಡ". ಮೂಡ ಇದ್ದವರಿಗೆ ಧ್ವನಿ ಚನ್ನಾಗಿ ಹತ್ತುವುದು.

ಲಗ್ನ ಚತುರ್ಥ ಸ್ಥಾನಗಳು ಸ್ಥಾನಾಧೀಶರು ದುರ್ಬಲವಿದ್ದ ಗಾಯಕರಿಗೆ ಎಷ್ಟೋ ವೇಳೆಯವರೆಗೆ ಧ್ವನಿ ಹತ್ತುವುದಿಲ್ಲ. ಇದಕ್ಕೆ ಸವಾಯಿ ಗಂಧರ್ವರ ಉದಾಹರಣೆ ಕೊಡಬಹುದು. ಅವರ ಕಾರ್ಯಕ್ರಮ ಪ್ರಾರಂಭವಾಗುವ ಮೊದಲು ಒಮ್ಮೊಮ್ಮೆ ಅನೇಕ ತಾಸುಗಳವರೆಗೆ ಧ್ವನಿ ಹತ್ತುತ್ತಿರಲಿಲ್ಲವಂತೆ. ಆದಕ್ಕೆ ಅವರು "ಗಳಾ ಲಾಗಲಾ, ಗಳಾ ಲಾಗಲಾ ನಾಹಿ" ಎಂದು ಹೇಳುತ್ತಿದ್ದರಂತೆ. ಇನ್ನು ಸಂಗೀತ ವಿದ್ಯೆಯಲ್ಲಿ ವಿಶಿಷ್ಟ ಜ್ಞಾನ ಪಡೆಯಲು ಪಂಚಮ ಸ್ಥಾನ ಪಂಚಮೇಶರು ಬಲಾಢ್ಯರಿರಬೇಕು. ಇವರಿಗೆ ಸಂಗೀತದ ಅನೇಕ ಚೀಜುಗಳು, ಅನೇಕ ಹಾಡುಗಳು ಬಾಯಿ ಪಾಠವಿರುತ್ತವಲ್ಲದೆ ಅನೇಕ ಬಗೆಯ ಸಂಗೀತದಲ್ಲಿಯೂ ಪ್ರವೀಣತೆ ಪಡೆ ಯುತ್ತಾರೆ.

ಲಗ್ನ:— ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಮಿಥುನ, ಸಿಂಹ, ಕನ್ಯಾ, ತುಲಾ, ಕುಂಭ ಈ ಲಗ್ನದವರು ನಂತರ ಮೇಷ,

ವೃಶ್ಚಿಕ ಲಗ್ನದವರು ಸಂಗೀತದಲ್ಲಿ ಹಾಗೂ ಸಂಗೀತ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

**ರಾಶಿ:—** ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ನಿರ್ದಿಷ್ಟ ರಾಶಿಯವರೇ ಸಂಗೀತಗಾರಿಕೆಯಲ್ಲಿ ಹಾಗೂ ಸಂಗೀತ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆಯೆಂದು ಹೇಳಲುಬಾರದು. ಆದರೂ ಮೇಷ, ಸಿಂಹ, ವೃಶ್ಚಿಕ, ಧನು, ಮಕರ, ಕುಂಭ ಈ ರಾಶಿಯವರು ವೀರ-ರೌದ್ರ-ಅದ್ಭುತ-ಭೀಭತ್ಸ-ಭಯಾನಕ ಮೊದಲಾದ ವೀರ ರಸ ಪ್ರಧಾನವಿರುವ ರಾಗಗಳಲ್ಲಿ ಗಾಯನದಲ್ಲಿ ಪ್ರಭುತ್ವ ಪಡೆದಿರುತ್ತಾರೆ. ಇದರಂತೆ ಮಿಥುನ, ತುಲಾ, ಕುಂಭ, ವೃಷಭ, ಕರ್ಕ, ಕನ್ಯಾ, ಮೀನ ಈ ರಾಶಿಯವರು ಶೃಂಗಾರ ರಸ ಪ್ರಧಾನವಿರುವ ರಾಗಗಳಲ್ಲಿ ಪ್ರಭುತ್ವ ಪಡೆದಿರುತ್ತಾರೆ. ಇದರಂತೆ ವೃಷಭ, ಕರ್ಕ, ಕನ್ಯಾ, ಮೀನ, ವೃಶ್ಚಿಕ, ಮಕರ ಈ ರಾಶಿಯವರು ಕರುಣಾ-ಶೋಕ ರಸ ಪ್ರಧಾನವಿರುವ ರಾಗಗಳಲ್ಲಿ ಪ್ರಭುತ್ವ ಪಡೆದಿರುತ್ತಾರೆ.

**ಯೋಗಗಳು :—**

(೧) ರವಿ-ಮಂಗಳರು ಬಲಾಢ್ಯರಿರುವ ಸಂಗೀತಗಾರರು ವೀರ ರಸ ಪ್ರಧಾನವಿರುವ ರಾಗಗಳಲ್ಲಿ ಪಾಂಡಿತ್ಯ ಪಡೆಯುತ್ತಾರೆ.

(೨) ಅನೇಕ ಗ್ರಹಗಳು ಪುರುಷ ರಾಶಿಯಲ್ಲಿದ್ದ ಸಂಗೀತಗಾರರು ಜೋಡು ರಾಗಗಳನ್ನು ಹಾಡುವುದರಲ್ಲಿ ಪ್ರಭುತ್ವ ಪಡೆದಿರುತ್ತಾರೆ.

(೩) ಚಂದ್ರನು ಬಲಾಢ್ಯನಿದ್ದ ಸಂಗೀತಗಾರರು ಚಂಚಲ ಸ್ವಭಾವದ ರಾಗಗಳನ್ನು ಹಾಡುವುದರಲ್ಲಿ ಪ್ರಭುತ್ವ ಪಡೆದಿರುತ್ತಾರೆ.

(೪) ಚಂದ್ರನು ದೂಷಿತವಾಗಿದ್ದ ಇಲ್ಲವೇ ಶುಕ್ರ-ಮಂಗಳ, ಶುಕ್ರ-ಚಂದ್ರ, ಶನಿ-ಚಂದ್ರ, ಚಂದ್ರ-ರಾಹು ಇವರ ಯುತಿ ಯೋಗದ, ಪಂಚಮ ಅಷ್ಟಮ ಸಪ್ತಮ ಲಗ್ನ ವ್ಯಯದಲ್ಲಿ ಇದ್ದವರು ಶೃಂಗಾರ ಪ್ರಧಾನ ಹಾಗೂ ಅಶ್ಲೀಲ ಹಾಡು (ಹೋಳಿ ಹುಣ್ಣಿಮೆ ಹಾಡು)

ಹಾಡುವುದರಲ್ಲಿ ಪ್ರಸಿದ್ಧರಿರುತ್ತಾರೆ.

(೫) ಬಲಾಢ್ಯ ದ್ವಿತೀಯೇಶ, ಬಲಾಢ್ಯ ಬುಧ, ಪುರುಷ ರಾಶಿಯಲ್ಲಿಯ ಚಂದ್ರ ಈ ಮೂರು ಸಂಗತಿಗಳಲ್ಲಿ ಯಾವುದೇ ಎರಡು ಸಂಗತಿಗಳು ಪೂರಕವಿದ್ದ ಸಂಗೀತಗಾರರ ತಾನಗಳು ಹಾಗೂ ತಾನಬಾಜಿ ಕೆಲಸ ಉತ್ತಮವಿರುತ್ತದೆ. (ಖಡಕ ತಾನಗಳು)

(೬) ಗುರು-ಶನಿಯರು ಬಲಾಢ್ಯರಿದ್ದ ಸಂಗೀತಗಾರರು(ಮುಂಜಾನೆ) ಪ್ರಾತಃಕಾಲದಲ್ಲಿ ಹಾಡುವ ರಾಗಗಳಲ್ಲಿ ಪ್ರಭುತ್ವ ಪಡೆದಿರುತ್ತಾರೆ.

(೭) ರವಿಯು ಬಲಾಢ್ಯನಿರುವ ಗಾಯಕರು ಮಧ್ಯಾಹ್ನದಲ್ಲಿ ಹಾಡುವ ರಾಗಗಳಲ್ಲಿ ಪ್ರಭುತ್ವ ಪಡೆದಿರುತ್ತಾರೆ.

(೮) ಶುಕ್ರ-ಚಂದ್ರರು ಬಲಾಢ್ಯರಿರುವ ಜಾತಕರು ರಾತ್ರಿ ಹೇಳುವ ರಾಗಗಳ ಹಾಗೂ ನಾಟ್ಯ ಗೀತಗಳಲ್ಲಿ ಪ್ರಭುತ್ವ ಪಡೆದಿರುತ್ತಾರೆ.

(೯) ಗುರು-ಚಂದ್ರರು ಬಲಾಢ್ಯರಿರುವ ಜಾತಕರು ಸಾಯಂಕಾಲ ಹೇಳುವ ರಾಗಗಳಲ್ಲಿ ಪ್ರಭುತ್ವ ಪಡೆದಿರುತ್ತಾರೆ.

(೧೦) ಗುರು, ಶನಿ, ಶುಕ್ರರು ಬಲಾಢ್ಯರಿರುವ ಸಂಗೀತಗಾರರು ಭಕ್ತಿ, ಭಜನ ಸಂಗೀತದಲ್ಲಿ ಪ್ರಭುತ್ವ ಪಡೆದಿರುತ್ತಾರೆ.

(೧೧) ಗುರು-ಶನಿಯರು ಬಲಾಢ್ಯರಿರುವ ಜಾತಕನು ತತ್ವದ ಹಾಗೂ ಪಾರಂಪರ್ಯದ ಹಾಡುಗಳಲ್ಲಿ ಪ್ರಸಿದ್ಧರಿರುತ್ತಾರೆ.

(೧೨) ಶನಿಯು ಬಲಾಢ್ಯನಿರುವ ಸಂಗೀತಗಾರರು ಜಾನಪದ ಹಳ್ಳೀ ಹಾಡು, ಸುಗ್ಗಿ ಹಾಡು, ಲಾವಣಿ ವೊದಲಾದವುಗಳಲ್ಲಿ ಪ್ರಭುತ್ವ ಪಡೆದಿರುತ್ತಾರೆ.

ವಿ.ಸೂ.:— ನಾವು ಶೀಘ್ರದಲ್ಲಿ ಬರೆದು ಪ್ರಕಟಿಸಬೇಕೆಂದಿರುವ "ಸಂಗೀತ ಜ್ಯೋತಿಷ್ಯ" ಗ್ರಂಥದಲ್ಲಿ ಸಂಗೀತದ ಬಗೆಗೆ ಹೆಚ್ಚಿನ ಮಾಹಿತಿ ಹಾಗೂ " ಕರ್ನಾಟಕ " ಸಂಗೀತದ ಮಾಹಿತಿಯನ್ನು ಕೊಡಲಾಗುವುದು.

(೫) ವಾದ್ಯಕಾರರು:—

ಗ್ರಹಗಳ ಪರಿಣಾಮ ಮಾನವನ ಮೇಲೆ ಹೇಗೆ ಆಗುವದೋ ಹಾಗೆಯೇ ವಾದ್ಯಗಳ ಪರಿಣಾಮವೂ ಕೂಡ ಮಾನವನ ಮೇಲೆ ಆಗುತ್ತದೆ. ಎಷ್ಟೋ ವಾದ್ಯಗಳಿಂದ ಬೇನೆಗಳ ನಿವಾರಣೆ ಮಾಡಿದ್ದಾರೆ. ವಾದ್ಯಗಳು ಬೇರೆಬೇರೆ ರಸಗಳನ್ನು ನಿರೂಪಿಸುತ್ತವೆ. ಉದಾಹರಣೆಗೆ— ಹಲಿಗೆ, ಶಂಖ, ಢೊಳ್ಳು, ಕಾಳೆಗಳಿಂದ ವೀರ ರಸವನ್ನು, ವೀಣೆ, ಸೀತಾರಗಳಿಂದ ಶೃಂಗಾರ ರಸವನ್ನು ಪಡೆಯಬಹುದು. ಸಂಗೀತದಂತೆ ವಾದನವೂ ಪುರಾತನ ಕಾಲದಿಂದಲೂ ಬಳಕೆಯಲ್ಲಿದೆ. ಋಗ್ವೇದದಲ್ಲಿ ವಾದ್ಯಗಳ ಬಗೆಗೆ ಉಲ್ಲೇಖ ಇದೆ. ವಿಶೇಷತಃ ಮೃದಂಗ-ವೀಣೆ-ಡಮರುಗಳ ಉಲ್ಲೇಖವಿದೆ. ಇದರಂತೆ ಯಜುರ್ವೇದದಲ್ಲಿ ಅಭಿನಯದ ಬಗೆಗೆ, ಸಾಮವೇದದಲ್ಲಿ ಸಂಗೀತದ ಬಗೆಗೆ ಅಥರ್ವಣದಲ್ಲಿ ರಸದ ಬಗೆಗೆ ಉಲ್ಲೇಖವಿದೆ. ಪುರಾಣದಲ್ಲಿ ಬೇರೆಬೇರೆ ದೇವತೆಗಳು ಬೇರೆಬೇರೆ ವಾದ್ಯಗಳನ್ನು ಬಾರಿಸುತ್ತಿದ್ದರೆಂದು ಉಲ್ಲೇಖ ಇದೆ. ಹೇಗೆಂದರೆ— ಶ್ರೀಕೃಷ್ಣ-ದೇವೇಂದ್ರರು ಕೊಳಲನ್ನು, ನಾರದರು ತಂಬುರಿಯನ್ನು, ಬ್ರಹ್ಮನು ತಾಳಲಯವನ್ನು, ವಿಷ್ಣುವು ಮೃದಂಗವನ್ನು ಸರಸ್ವತಿಯು ವೀಣೆಯನ್ನು, ಶಿವನು ಡಮರನ್ನು, ಶೃಂಗಿ-ಭೃಂಗಿಗಳು ಶಂಖ-ಕಾಳೆಗಳನ್ನು ಬಾರಿಸುತ್ತಿದ್ದರು. ಇದರಂತೆಯೇ ಲಕ್ಷ್ಮಣನು ಸುಗ್ರೀವನ ಮನೆಗೆ ಹೋದಾಗ ಸುಗ್ರೀವನು ವೀಣೆಯನ್ನು ಬಾರಿಸುತ್ತಿದ್ದನೆಂದು ಸಂಗೀತ ತಜ್ಞನಾದ ರಾವಣನು ಶಿವನನ್ನು ಕುರಿತು ತಪಸ್ಸು ಮಾಡುವಾಗ ತನ್ನ ಕರಳುಗಳನ್ನೇ ವೀಣಾತಂತುಗಳನ್ನಾಗಿ ಮಾಡಿ ವರವನ್ನು ಪಡೆದನೆಂದು ರಾಮಾಯಣದಲ್ಲಿ ಉಲ್ಲೇಖವಿದೆ.

ಇನ್ನು ಕ್ರಿ.ಶ.೧೩ನೇ ಹಾಗೂ ೧೪ನೇ ಶತಮಾನಗಳಲ್ಲಿ ಅಂದರೆ ಅಲ್ಲಾಉದ್ದೀನ ಖಿಲಜಿ ದರಬಾರದಲ್ಲಿ ಪ್ರಸಿದ್ಧ ಕವಿಯೂ ಸಂಗೀತ ತಜ್ಞನೂ ಆದ ಅಮೀರ ಖುಸ್ರು ವೀಣೆಯ ಆಧಾರದ ಮೇಲಿಂದ "ಸೇಹತಾರ" ವನ್ನು ತಯಾರಿಸಿದ್ದನೆಂದು ಅದನ್ನೇ ಮುಂದೆ ಸೀತಾರವೆಂದು ಕರೆಯತೊಡಗಿದರು. ಮೃದಂಗ ಹಾಗೂ ಪಕ್ವಾಜದಿಂದ ತಬಲಾ ಎಂಬ ವಾದ್ಯವನ್ನು ಅವನೇ ನಿರ್ಮಿಸಿದನಂತೆ. ಈಗಿನ ಏಕತಾರೆಯಂತಿರುವ

"ಚಿಕಾರ" ಎಂಬ ಹೆಸರಿನ ಪುರಾತನ ವಾದ್ಯವನ್ನು ಬಹು ದೊಡ್ಡ ತೆಂಗಿನಕಾಯಿಯಿಂದ ನಿರ್ಮಿಸುತ್ತಿದ್ದರಂತೆ. ನಾಗರಿಕತೆಯೊಂದಿಗೆ ವಾದ್ಯಗಳಲ್ಲಿ ಸುಧಾರಣೆಯಾಗಿದೆ. ವೀಣೆಯಿಂದ ಸೀತಾರ-ಸರೋದ-ದಿಲ್ರುಬಾ ವಾದ್ಯಗಳನ್ನು, ಮೃದಂಗದ ಆಧಾರದ ಮೇಲಿಂದ ತಬಲಾ ಡಗ್ಗಾಗಳನ್ನು, ಸ್ವರ ಮಂಡಳ (ಹಾರ್ಪ) ದ ಆಧಾರದ ಮೇಲಿಂದ ಹಾರ್‌ಮೋನಿಯಮ್ ವಾದನವನ್ನು ಕೊಳಲಿನ ಆಧಾರದ ಮೇಲೆ ಕ್ಲೆರಿಯೋನೆಟ್, ಎಂಬ ವಾದ್ಯವನ್ನು ಕಾಳಿ-ಕೊಳಲುಗಳ ಸಂಮಿಶ್ರಣವಾದ ಭಜಂತ್ರಿಯನ್ನು ಭಜಂತ್ರಿಯಿಂದ ಬ್ಯಾಂಡನ್ನು ರಚಿಸಿದ್ದಾರೆ. ಇದಲ್ಲದೆ ಝುಂಜೋವಾದ್ಯ ಬುಲ್ ಬುಲ್-ತರಂಗ--ಟೈಕೋಟ-ಜಲತರಂಗ ಮೊದಲಾದ ವಾದ್ಯಗಳು ಬಳಕೆಯಲ್ಲಿವೆ. ಇದೆಲ್ಲ ವಾದ್ಯಗಳ ಸಂಕ್ಷಿಪ್ತ ಇತಿಹಾಸವಾಯಿತು. ನಮಗಿರುವ ಪ್ರಶ್ನೆ ಇಷ್ಟೆ, ವಾದನವನ್ನು ಸ್ವತಂತ್ರ ವೃತ್ತಿಯನ್ನಾಗಿ ಕೈಕೊಳ್ಳಲು ಶಕ್ಯವಿದೆಯೋ, ಶಕ್ಯವಿದ್ದರೆ ವಾದ್ಯ ವೃತ್ತಿಯ ಕಾರಕ ಗ್ರಹಗಳಾವವು?

ಸಂಗೀತದಂತೆ ವಾದನವನ್ನು ಸ್ವತಂತ್ರ ವೃತ್ತಿಯನ್ನಾಗಿ ಕೈಕೊಳ್ಳಲು ಶಕ್ಯವಿದೆ. ವಾದನವನ್ನು ಸ್ವತಂತ್ರ ವೃತ್ತಿಯಾಗಿಯೂ ನುಡಿಸುತ್ತಾರೆ. ಸಂಗೀತಗಾರರ ಸಹಾಯಕರೆಂದು ಈ ವೃತ್ತಿ ಕೈಕೊಳ್ಳುವರು. ಅಲ್ಲದೆ ಅನೇಕ ವಾದ್ಯಗಳ ವಾದ್ಯವೃಂದವೆಂದು ಎರಡು ಮೂರು ಭಿನ್ನ ಭಿನ್ನ ಪ್ರಕಾರದ ವಾದ್ಯಗಳ ಜುಗಲ ಬಂದಿಯೆಂದು ವಾದ್ಯಗಳನ್ನು ನುಡಿಸುತ್ತಾರೆ, ಬಾರಿಸುತ್ತಾರೆ. ಆದುದರಿಂದ ವಾದನಕಾರ ವೃತ್ತಿ ಕೈಕೊಳ್ಳಲು ಕಾರಕ ಗ್ರಹ ಲಗ್ನ ಸ್ಥಾನಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

ವಾದನವೃತ್ತಿ ಕೈಕೊಳ್ಳಲು ಜಾತಕ ಹೇಗಿರುತ್ತದೆ, ಕಾರಕ ಗ್ರಹಾದಿಗಳು ಯಾವವು ಎಂಬುದನ್ನು ತಿಳಿಯುವ ಮೊದಲು ವಾದನಗಳಲ್ಲಿಯ ಪ್ರಕಾರಗಳನ್ನು ತಿಳಿಯುವುದು ಅವಶ್ಯ. ಏಕೆಂದರೆ ವಾದ್ಯಗಳಲ್ಲಿ ಅನೇಕ ಪ್ರಕಾರಗಳಿದ್ದು ಯಾರೊಬ್ಬರು ಎಲ್ಲ ವಾದ್ಯಗಳಲ್ಲಿ ಪ್ರವೀಣತೆ ಪಡೆಯಲಾರರು ಎಂಬುದು ಎಲ್ಲರಿಗೂ ತಿಳಿದ ವಿಷಯ. ಅಲ್ಲದೆ ವಿಭಿನ್ನ ಪ್ರಕಾರದ ವಾದ್ಯಗಳಿಗೆ ವಿಭಿನ್ನ ಗ್ರಹಗಳು ಲಗ್ನ ಸ್ಥಾನಾದಿಗಳು ಕಾರಕವಿರುತ್ತವೆ. ಆದುದರಿಂದ ಮೊದಲು ವಾದ್ಯಗಳಲ್ಲಿಯ ಪ್ರಕಾರಗಳನ್ನು ತಿಳ

ಯುವುದು ಅವಶ್ಯ.

## ವಾದ್ಯಗಳಲ್ಲಿಯ ಪ್ರಕಾರಗಳು

ಸಂಗೀತ ಶಾಸ್ತ್ರದ ಪ್ರಕಾರ ವಾದ್ಯಗಳನ್ನು ನಖಜ, ವಾಯುಜ, ಚರ್ಮಜ,ಲೋಹಜ,ಶರೀರಜ ಎಂದು ಐದು ಪ್ರಕಾರಗಳಲ್ಲಿ ವಿಂಗಡಿಸಿದ್ದಾರೆ.

ವೀಣಾ-ತಂಬುರಿ--ಕಿನ್ನರಿ--ದಂಡಿ--ಏಕನಾದ-ಸೀತಾರ - ಬಿನ .ದಿಲ್ಲರುಬಾ-ಸಾರಂಗ ಮೊದಲಾದ ವೀಣೆ ವರ್ಗದ ಪೌರ್ವಾತ್ಯ ತಂತು ವಾದ್ಯಗಳಿಗೂ ವಾಯೋಲಿನ್-ಸರೋದ-ಗೀಟಾರ-ಮಾಂಡೋಲಿನ ಬಿಗ್ ಪ್ಯಾನ-ಪಿಯಾನೋ ಮುಂತಾದ ಪಾಶ್ಚಿಮಾತ್ಯ ತಂತು ವಾದ್ಯಗಳಿಗೂ ನಖಜವಾದ್ಯಗಳೆನ್ನುತ್ತಾರೆ.

ಮುರಲಿ-ಶಹನಾಯಿ- (ಭಜಂತ್ರಿ) - ಸುಂದರಿ-ಪುಂಗಿ - ನಾಗಸ್ವರ-ಶಂಖ-ಕಾಳಿ ಮುಂತಾದ ಪೌರ್ವಾತ್ಯ ವಾದ್ಯಗಳಿಗೂ ಹಾರ್ಮೋನಿಯಮ್-ಆರ್ಗನ್ಸ-ಕ್ಲೆರೋನೇಟ- ಬ್ಯಾಂಡ ಮುಂತಾದ ಪಾಶ್ಚಿಮಾತ್ಯ ವಾದ್ಯಗಳಿಗೂ ವಾಯುಜ ವಾದ್ಯಗಳೆನ್ನುತ್ತಾರೆ. ಏಕೆಂದರೆ ಇವುಗಳಲ್ಲಿ ಸ್ವರವು ಹವೆಯ ಸಹಾಯದಿಂದ ಹುಟ್ಟುತ್ತದೆ.

ಮೃದಂಗ-ಪಖವಾಜ-ತಬಲಾ-ಖೋಲ-ಢೋಲ-ಢೋಲಕ್ಯಾ-ಢಕ್ಕಾ -ಢವಣೆ-ಭೇರಿ-ತಮಟೆ-ಸಾಯಿಡ ಡ್ರಮ ಮೊದಲಾದ ಪಾಶ್ಚಿಮಾತ್ಯ ವಾದ್ಯಗಳಿಗೆ ಚರ್ಮಜ ವಾದ್ಯಗಳೆನ್ನುತ್ತಾರೆ. ಏಕಂದರ ಇವೆಲ್ಲವುಗಳಲ್ಲಿ ನಾದವು ಚರ್ಮದಿಂದ ಹುಟ್ಟುತ್ತದೆ.

ಲೋಹದಿಂದ ಮಾಡಿದ ತಾಳ ವಾದ್ಯಗಳಿಗೆ ಲೋಹಜವೆಂತಲೂ ಬಾಯಿ-ಹಾಡುಗಾರಿಕೆಗೆ ಶರೀರಜವೆಂತಲೂ ಹೆಸರು.

ಕಾರಕ ಗ್ರಹ:— ವೀಣಾ-ಸೀತಾರ-ದಿಲ್ಲರೂಬಾ-ಬೀನ-ವಾಯಲಿನ್-ಸರೋದ ಮೊದಲಾದ ನಖಜ ವಾದ್ಯಗಳಿಗೆ ಶುಕ್ರನು ಕಾರಕನಿದ್ದು ಶುಕ್ರನು ಬಲಾಢ್ಯನಿರದೆ ಯಾರೂ ಈ ವಾದ್ಯ ನುಡಿಸುವುದರಲ್ಲಿ ಬಾರಿಸ

ವುದರಲ್ಲಿ ಪ್ರವೀಣರಾಗರು; ಹಾಗೂ ಈ ವಾದ್ಯಗಳ ವಾದನ ವೃತ್ತಿಯಲ್ಲಿ ಯಶಸ್ವಿಯಾಗರು. ಶುಕ್ರನ ತರುವಾಯ ಚಂದ್ರನು ಕೂಡ ಈ ವಾದ್ಯಗಳಿಗೆ ಕಾರಕನಿರುತ್ತಾನೆ. ಆದುದರಿಂದ ಶುಕ್ರ-ಚಂದ್ರರು ಬಲಾಢ್ಯರಿರುವವರೇ ಈ ವಾದ್ಯಗಳ ವಾದನ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ; ಹಾಗೂ ಈ ವಾದ್ಯಗಳನ್ನು ಬಾರಿಸುವುದರಲ್ಲಿ ತಜ್ಞರಿರುತ್ತಾರೆ.

ಮುರಳಿ--ಶಹನಾಯಿ—ಹಾರಮೋನಿಯಮ್--ಕ್ಲಿರೋನೆಟ--ಬ್ಯಾಂಡ ಮೊದಲಾದ ವಾಯುಜ ವಾದ್ಯಗಳಿಗೆ ಕಲಾಕಾರಕನಾದ ಶುಕ್ರನೊಂದಿಗೆ ಶನಿಯನ್ನು ಪರಿಶೀಲಿಸಬೇಕು. ಏಕೆಂದರೆ ವಾಯುವಿನ ಮೇಲೆ ಶನಿಯ ಪ್ರಭುತ್ವವಿರುತ್ತದೆ. ಶುಕ್ರ--ಶನಿಯರ ತರುವಾಯ ಬುಧನನ್ನು ಪರಿಶೀಲಿಸಬೇಕು. ಇಲ್ಲಿ ಮಹತ್ವದ ಸಂಗತಿಯೆಂದರೆ ಶುಕ್ರ–ಶನಿಯರು ರಾಶಿ ಬಲದವರೂ ಸ್ಥಾನ ಬಲದವರೂ ಇದ್ದರೆ ಬುಧನು ಕೇವಲ ರಾಶಿ ಬಲದವನಿರಬಹುದು.

ಮೃದಂಗ–ತಬಲಾ–ಪಖವಾಜ–ಢೋಲ ಮೊದಲಾದ ಚರ್ಮಜ ವಾದ್ಯಗಳಿಗೆ ಶುಕ್ರನೊಂದಿಗೆ ಶನಿ-ಮಂಗಳರ ಬಲಾಬಲವನ್ನು ಪರಿಶೀಲಿಸಬೇಕು. ಇಲ್ಲಿ ಕೂಡ ಶುಕ್ರನು ರಾಶಿ ಬಲದವನೂ ಸ್ಥಾನ ಬಲದವನೂ ಇದ್ದರೆ ಶನಿ–ಮಂಗಳರು ಕೇವಲ ರಾಶಿ ಬಲದವರಿರಬಹುದು.

ಇನ್ನು ಲೋಹಜ ವಾದ್ಯಗಳಿಗೆ ಶನಿ–ಶುಕ್ರರು ಕಾರಕರಿದ್ದರೂ ಶನಿಯು ರಾಶಿ ಬಲದವನೂ ಸ್ಥಾನ ಬಲದವನೂ ಇದ್ದರೆ ಶುಕ್ರನು ಕೇವಲ ರಾಶಿ ಬಲದವನಿದ್ದರಾಯಿತು. ಇದರಂತೆ ಶರೀರಜ ವಾದ್ಯಗಳ ಮೇಲೆ ಶುಕ್ರ--ಚಂದ್ರರು ಮಾತ್ರ ಕಾರಕರಿರುತ್ತಾರೆ.

ಸ್ಥಾನ :— ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಬಾಹು ಹಾಗೂ ಹಸ್ತಗಳ ಸ್ಥಾನವಾದ ತೃತೀಯ ಸ್ಥಾನ ಹಾಗೂ ತೃತೀಯೇಶರೂ ಬಲಾಢ್ಯರಿರದ ಯಾರೂ ನಖಜ ವಾದ್ಯಗಳ ವಾದನದಲ್ಲಿ ಪ್ರವೀಣತೆ ಪಡೆಯಲಾರರು. ಹಾಗೂ ನಖಜ ವಾದ್ಯಗಳ ವಾದನ

ವೃತ್ತಿಯಲ್ಲಿ ಯಶಸ್ವಿಯಾಗರು. ತೃತೀಯದ ನಂತರ ಲಗ್ನ--ಪಂಚಮ ಸ್ಥಾನಗಳು ಕಾರಕವಿರುತ್ತವೆ.

ಇದರಂತೆ ವಾಯುಜ ವಾದ್ಯಗಳ ಕಾರಕ ಸ್ಥಾನವೆಂದರೆ ದ್ವಿತೀಯ ಸ್ಥಾನವು. ಏಕೆಂದರೆ ವಾಯುಜ ವಾದ್ಯಗಳನ್ನು ಬಾಯಿಯಿಂದಲೇ ನುಡಿ ಸುತ್ತಾರೆ. ಆದ್ದರಿಂದ ಬಾಯಿಯ ಸ್ಥಾನವಾದ ದ್ವಿತೀಯ ಸ್ಥಾನ ದ್ವಿತೀಯೇಶರು ಬಲಾಢ್ಯರಿರಬೇಕು. ದ್ವಿತೀಯದ ನಂತರ ತೃತೀಯ ಸ್ಥಾನವನ್ನು ಪರಿಶೀಲಿಸಬೇಕು. ಆದ್ದರಿಂದ ದ್ವಿತೀಯ-ತೃತೀಯ ಸ್ಥಾನಗಳು ಹಾಗೂ ದ್ವಿತೀಯೇಶ-ತೃತೀಯೇಶರು ಬಲಾಢ್ಯರಿರದ ಯಾರೂ ವಾಯುಜ ವಾದ್ಯಗಳ ವಾದನ ವೃತ್ತಿಯಲ್ಲಿ ಯಶಸ್ವಿಯಾಗರು.

ಚರ್ಮಜ ವಾದ್ಯಗಳ ವೃತ್ತಿಯಲ್ಲಿ ಯಶಸ್ವಿಯಾಗಲು ತೃತೀಯದೊಂದಿಗೆ ಚತುರ್ಥ ಸ್ಥಾನವನ್ನು ಪರಿಶೀಲಿಸಬೇಕು. ಆದುದರಿಂದ ತೃತೀಯ--ಚತುರ್ಥ ಸ್ಥಾನಗಳು ಹಾಗೂ ತೃತೀಯೇಶ--ಚತುರ್ಥೇಶರು ಬಲಾಢ್ಯರಿರದ ಯಾರೂ ಚರ್ಮಜ ವಾದ್ಯಗಳ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆಯೆಂದು ಹೇಳಲುಬಾರದು.

ಇದರಂತೆ ಲೋಹಜ ವಾದ್ಯಗಳಿಗೆ ಕೇವಲ ತೃತೀಯ ಸ್ಥಾನ ತೃತೀಯೇಶರು ಬಲಾಢ್ಯರಿರಬೇಕಾಗುತ್ತದೆ.

**ಲಗ್ನ:**— ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಮಿಥುನ, ಕರ್ಕ, ಮಕರ, ಕುಂಭ ಈ ಲಗ್ನದವರು ನಖಜ ವಾದ್ಯಗಳ ವಾದನಾ ವೃತ್ತಿಯಲ್ಲಿ ಯಶಸ್ವಿಯಾದರೆ ಮೇಷ, ವೃಷಭ, ಮಿಥುನ, ತುಲಾ, ವೃಶ್ಚಿಕ, ಮಕರ, ಕುಂಭ ಈ ಲಗ್ನದವರು ವಾಯುಜ ವಾದ್ಯಗಳ ವಾದನ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

ಇದರಂತೆ ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ತುಲಾ, ವೃಶ್ಚಿಕ, ಧನು, ಮಕರ ಈ ಲಗ್ನದವರು ಚರ್ಮಜ ವಾದ್ಯಗಳ ವಾದನ ವೃತ್ತಿಯಲ್ಲಿ ಪ್ರವೀಣರಾಗುತ್ತಾರೆ.

**ರಾಶಿ:—** ರಾಶಿ ದೃಷ್ಟಿಯಿಂದ ನೋಡಿದರೆ ನಿರ್ದಿಷ್ಟ ರಾಶಿಯವರೇ ನಿರ್ದಿಷ್ಟ ವಾದ್ಯಗಳ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆಯೆಂದು ಹೇಳಲುಬಾರದು.

**ಯೋಗಗಳು:—** ೧) ತಬಲಾ-ಪಖವಾಜ-ಮೃದಂಗ ವಾದ್ಯದವರಿಗೆ ರವಿ-ಮಂಗಳರು ಪುರುಷ ರಾಶಿಯಲ್ಲಿದ್ದು ಶನಿ-ಚಂದ್ರರು ಸ್ತ್ರೀರಾಶಿಯಲ್ಲಿ ರುತ್ತಾರೆ.

೨) ಶುಕ್ರ-ಚಂದ್ರರು ಬಲಾಢ್ಯರಿದ್ದವರೇ ನಖಜ ವಾದ್ಯ ವಾದನ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

೩) ಶನಿ-ಚಂದ್ರ-ಶುಕ್ರರು ಬಲಾಢ್ಯರಿದ್ದವರೇ ವಾಯುಜ ವಾದ್ಯಗಳ ವಾದನ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

**(೬) ಸೌಂದರ್ಯ ವರ್ಧನಾ ತಜ್ಞರು (ಬ್ಯೂಟಿ ಪಾರ್ಲರ)**

ಕೆಲವು ಉದ್ಯೋಗ (ನೌಕರಿಗಳು-ಹುದ್ದೆಗಳು) ಗಳಲ್ಲಿ ಮಹಿಳೆಯರಿಗೆ ಹಾಗೂ ಪುರುಷರಿಗೆ ಸಮಾನ ಅವಕಾಶವಿರುತ್ತದೆ. ಆದರೆ ಕೆಲವು ನೌಕರಿ--ಹುದ್ದೆ-ವೃತ್ತಿಗಳು ಪುರುಷರಿಗೆ ಮಾತ್ರ ಇವೆ. ಅಲ್ಲದೆ ಅವನ್ನು ಪುರುಷರೇ ಚೆನ್ನಾಗಿ ನಿಭಾಯಿಸಬಲ್ಲರು. ಉದಾಹರಣೆಗೆ— ಮಿಲಿಟರಿ, ನೇವಿ, ಏರ ಫೋರ್ಸ (ಸೈನ್ಯದ ಭೂದಲ-ನೌಕಾದಳ-ವಾಯುದಳ,) ಪೋಲಿಸ ಮೊದಲಾದವು. ಇದರಂತೆ ಕೆಲವು ಹುದ್ದೆಗಳು--ನೌಕರಿಗಳನ್ನು ಮಹಿಳೆಯರು ಮಾತ್ರ ಚೆನ್ನಾಗಿ ನಿಭಾಯಿಸಬಲ್ಲರು, ಹಾಗೂ ಅವು ಮಹಿಳೆಯರಿಗೇ ಒಪ್ಪುತ್ತವೆ. ಉದಾಹರಣೆಗೆ— ದಾದಿಯರು, ಸೂಲಗಿತ್ತಿಯರು, ಗಗನ ಸಖಿಯರು, ಬಾಲವಾಡಿ ಶಿಕ್ಷಕಿಯರು, ರೇಡಿಯೋ-ಗಡಿಯಾರಗಳ ಜೋಡಣೆ, ಬೆರಳಚ್ಚುಗಾರರು ಮೊದಲಾದವರು ಹಾಗೆಯೇ ಕೆಲವು ಸ್ವತಂತ್ರ ವೃತ್ತಿಯು ಉದ್ಯೋಗಗಳು, ಪುರುಷರೂ. ಮಹಿಳೆಯರೂ ಸಮನಾಗಿ ವೃತ್ತಿ ಕೈಕೊಳ್ಳುತ್ತಿದ್ದಾರೆ. ಉದಾಹರಣೆಗೆ— ಶಿಕ್ಷಕರು, ಸರಕಾರಿ ನೌಕರರು, ವಕೀಲರು, ಡಾಕ್ಟರರು ಮೊದಲಾದವರಿದ್ದು ಕೆಲವು ಸ್ವತಂತ್ರ ವೃತ್ತಿಗಳು. ಪುರುಷರು ಮಾತ್ರ ಸ್ವತಂತ್ರವಾಗಿ ನಿಭಾ

ಯಿಸುವಂಥವು ಕೆಲವು. ಉದಾಹರಣೆಗೆ— ಟ್ರಕ್ ಚಾಲಕ ಸಾರಿಗೆ ವಾಹನ ಚಾಲಕ ಮೊದಲಾದವುಗಳು. ಹಾಗೆಯೇ ಕೆಲವು ವೃತ್ತಿಗಳನ್ನು ಮಹಿಳೆಯರೇ ಚೆನ್ನಾಗಿ ನಿಭಾಯಿಸಬಲ್ಲರು.

ಇಂಥ ಸ್ವತಂತ್ರ ವೃತ್ತಿಗಳಲ್ಲಿ ಸೌಂದರ್ಯ ವರ್ಧನಾ ಶೃಂಗಾರ ವೃತ್ತಿಯನ್ನು ಮಹಿಳೆಯರೇ ಚೆನ್ನಾಗಿ ನಿಭಾಯಿಸಬಲ್ಲರು. ಪರದೇಶದಲ್ಲಿ ಪುರುಷರು ಕೂಡ ಈ ವೃತ್ತಿ ಕೈಕೊಂಡಿದ್ದಾರೆ. ಭಾರತದಲ್ಲಿ ಮಹಿಳೆಯರೇ ಹೆಚ್ಚಾಗಿ ಈ ವೃತ್ತಿ ಕೈಕೊಳ್ಳುತ್ತಿದ್ದಾರೆ. ಇತ್ತೀಚೆಗೆ ಇದು ಪುರ-ಪಟ್ಟಣಗಳಲ್ಲಿ ಲಾಭದಾಯಕ ವೃತ್ತಿಯಾಗಿದೆ. ಈ ವೃತ್ತಿಗೆ ಇತ್ತೀಚೆಗೆ ಬಹಳ ಪ್ರಾಮುಖ್ಯತೆ ಬಂದಿರುವುದಕ್ಕೆ ಹಲವಾರು ಕಾರಣಗಳಿದ್ದರೂ ಪ್ರಮುಖವಾದ ಕನ್ಯಾ ಪರೀಕ್ಷಾ ಸಮಯದಲ್ಲಿ ಹಾಗೂ ಮದುಮಗಳ ಅಕ್ಷತಾರೋಹಣ ಸಮಯದಲ್ಲಿ ಅಲ್ಲದೆ ಪ್ರತಿಷ್ಠಿತ ಮನೆತನದ ಮಹಿಳೆಯರು ಯಾವುದೊಂದು ಸಾರ್ವಜನಿಕ ಸಮಾರಂಭದಲ್ಲಿ ಭಾಗವಹಿಸುವಾಗ ಶೃಂಗರಿಸಿಕೊಂಡು ಹೋಗುವುದು ಪರಿಪಾಠ. ಅಂತೆಯೇ ಈ ವೃತ್ತಿಯವರಿಗೆ ಇತ್ತೀಚೆಗೆ ಬಹಳ ಬೇಡಿಕೆ ಇದೆ. ಹಾಗೆ ನೋಡಿದರೆ ಈ ಕೆಲಸ ಬಹಳ ಪುರಾತನ ಕಾಲದಿಂದಲೂ ಬೆಳೆದು ಬಂದಿದೆ. ನಮ್ಮ ಪ್ರಾಚೀನ ಗ್ರಂಥಗಳಲ್ಲಿ ಇದರ ಬಗೆಗೆ ಸಾಕಷ್ಟು ವರ್ಣನೆಗಳಿವೆ. ಉದಾಹರಣೆಗಾಗಿ— ಮಹಾಭಾರತದ ವಿರಾಟ ಪರ್ವದಲ್ಲಿ ಪಾಂಡವರ ಅಜ್ಞಾತವಾಸದ ಸಮಯದಲ್ಲಿ ದ್ರೌಪದಿಯು ಸೈರೇಂದ್ರಿಯ ವೇಷದಲ್ಲಿ ವಿರಾಟ ರಾಜನ ಧರ್ಮಪತ್ನಿಯಾದ ಸುಧೇಷ್ಣೆಗೆ ಕೇಶಾಲಂಕಾರಕ್ಕಾಗಿ ಅಂತಃಪುರದ ದಾಸಿಯ ಕೆಲಸ ವಹಿಸಿಕೊಂಡಿದ್ದಳು. ಅಲ್ಲದೆ ರಾಜರ ಕಾಲದ ಇತಿಹಾಸದಲ್ಲಿ ರಾಣಿ-ಮಹಾರಾಣಿಯರ ಅಂತಃಪುರದಲ್ಲಿ ಕೇಶ ಶೃಂಗಾರಕ್ಕಾಗಿ, ಅಲಂಕಾರಕ್ಕಾಗಿ ವೈವಿಧ್ಯಮಯವಾಗಿ ಜಡೆ ಮುಡಿಯುವ ಕೆಲಸಕ್ಕಾಗಿ ದಾಸಿಯರನ್ನು ನಿಯಮಿಸಿಕೊಳ್ಳುವುದು ವಾಡಿಕೆಯ ಪರಿಪಾಠವಿತ್ತು. ಅರಿಸಿನ ಹಚ್ಚಿಕೊಳ್ಳುವುದು ಮದರಂಗಿ ಹಚ್ಚಿಕೊಳ್ಳುವುದು ಕೂಡ ಸೌಂದರ್ಯ ವರ್ಧನಕ್ಕಾಗಿಯೇ. ಆದರೆ ಅದು ಈಗಿನಂತೆ ಶಾಸ್ತ್ರೀಯವಾಗಿ ವೈಜ್ಞಾನಿಕವಾಗಿ ಸ್ವತಂತ್ರ ವೃತ್ತಿಯಾಗಿ ಈ ಹಿಂದೆ

ಇದ್ದಿಲ್ಲ. ಹಾಗೆ ನೋಡಿದರೆ ಮಹಿಳೆಯರು ಜನ್ಮತಃ ಸೌಂದರ್ಯೋಪಾಸಕರು. ಅಂತೆಯೇ ಈ ವೃತ್ತಿ ಲಾಭದಾಯಕ ವೃತ್ತಿಯಾಗಿದೆ. ಆದಾಗ್ಯೂ ಎಲ್ಲ ಸೌಂದರ್ಯ ವರ್ಧನಾ ತಜ್ಞರ ವೃತ್ತಿ ಚೆನ್ನಾಗಿ ನಡೆಯುತ್ತದೆಯೆಂದು ಹೇಳಲು ಬಾರದು. ಆದುದರಿಂದ ಫಲ ಜ್ಯೋತಿಷ್ಯದಲ್ಲಿ ಈ ವೃತ್ತಿ ಕೈಕೊಳ್ಳಲು ಜಾತಕ ಹೇಗಿರಬೇಕು, ಕಾರಕ ಗ್ರಹಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

ಕಾರಕ ಗ್ರಹ:— ಸೌಂದರ್ಯ ವರ್ಧನಾ ತಜ್ಞರ ವೃತ್ತಿಯ ಕಾರಕ ಗ್ರಹಗಳೆಂದರೆ ಶುಕ್ರ--ಚಂದ್ರ-ರವಿ ಈ ಮೂರು ಗ್ರಹಗಳು. ಈ ವೃತ್ತಿಯ ಹೆಸರೇ ಸೂಚಿಸುವಂತೆ ಸೌಂದರ್ಯ ವರ್ಧನೆಗೆ ಪೂರಕ-ಪೋಷಕವಾದ ಕೆಲಸಗಳು ಅನೇಕವಿರುತ್ತವೆ. ಉದಾಹರಣೆಗೆ— ಮಹಿಳೆಯರ ಮುಖ ಲಕ್ಷಣ ಅಂದ ಚೆಂದವಾಗಿ ಕಾಣುವಂತೆ ಮಾಡುವುದು. ಸಾಮಾನ್ಯವಾಗಿ ಮುಖ ಲಕ್ಷಣದಲ್ಲಿ ನಾಲ್ಕು ಪ್ರಕಾರಗಳು. (೧) ವರ್ತುಳ (ಮಂಡನ್ನ) ಮುಖ, (೨) ಉದ್ದ ಮುಖ, (೩) ಚೌಕ ಮುಖ, (೪) ತ್ರಿಕೋಣ ಮುಖ,

ತ್ರಿಕೋಣ ಮುಖವೆಂದರೆ ಹಣೆ ಅಗಲವಿದ್ದು ಹನುಭಾಗ ಶೀರಾಗಿ ಇರುವಿಕೆ. ಇದಲ್ಲದೆ ಕೋಳಿ ತತ್ತಿಯಂತಿದ್ದ ಮುಖ, ದೇಹದ ಉಳಿದ ಅಂಗಾಂಗಗಳ ಪ್ರಮಾಣಕ್ಕಿಂತ ಮುಖವೇ ದೊಡ್ಡದು,ಇಲ್ಲವೆ ಹಣೆಯೇ ದೊಡ್ಡದು. ಹೀಗಿರುವ ಮಹಿಳೆಯರ ಮುಖಕ್ಕೆ ಒಪ್ಪುವಂತೆ ಹುಬ್ಬುಗಳನ್ನು ಕತ್ತರಿಸುವುದು, ತಿದ್ದುವುದು, ನೀಟಾಗಿ ಮಾಡುವುದು ಮೊದಲಾದ ಕೇಶಾಲಂಕಾರ ಕೆಲಸ. ಇದಲ್ಲದೆ ಮಹಿಳೆಯರ ಬಣ್ಣಕ್ಕೆ ನಿಲುವಿಗೆ ಒಪ್ಪುವಂತೆ ವೇಷ-ಭೂಷಣಗಳಿಂದ ಶೃಂಗರಿಸುವುದು, ಅಲಂಕರಿಸುವುದು ಮೊದಲಾದವುಗಳು. ಇದಲ್ಲವೂ ಒಂದು ಬಗೆಯ ಕಲೆಯೇ ಇರುತ್ತದೆ. ಆದುದರಿಂದ ಕಲಾಕಾರನಾದ ಶುಕ್ರನೂ ಕಲಾಪೋಷಕನಾದ ಚಂದ್ರನೂ ಈ ವೃತ್ತಿಯ ಕಾರಗ್ರಹಗಳು. ಶುಕ್ರ-ಚಂದ್ರರು ಬಲಾಢ್ಯರಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು. ಶುಕ್ರ--ಚಂದ್ರರ ತರುವಾಯ ರವಿಯ ಬಲಾಬಲವನ್ನೂ ನೋಡಬೇಕು, ಏಕೆಂದರೆ ಸೌಂದರ್ಯ ವರ್ಧನೆಗೆ ಕೇವಲ ವೇಷಭೂಷಣಗಳಷ್ಟೆ ಅಲ್ಲಾ, ಆರೋಗ್ಯ ಕಾಪಾಡಿಕೊಳ್ಳುವುದು, ಅದು ಕೆಡದಂತೆ

ನೋಡಿಕೊಳ್ಳುವುದು ಅವಶ್ಯವಿರುತ್ತವೆ. ಇದಕ್ಕಾಗಿ ಪ್ರಾಥಮಿಕ ಶರೀರ ಶಾಸ್ತ್ರ, ಜೀವನ ಕಾರ್ಯ ಶಾಸ್ತ್ರ, ಪ್ರಥಮೋಪಚಾರ, ಪ್ರಾಥಮಿಕ ಆರೋಗ್ಯ ಶಾಸ್ತ್ರ, ಆಹಾರ ಪ್ರಮಾಣ ಶಾಸ್ತ್ರ (Diet) ಮೊದಲಾದ ಶಾಸ್ತ್ರಗಳ ಪರಿಚಯವು ಕೂಡ ಈ ವೃತ್ತಿಯವರಿಗೆ ಇರಬೇಕಾಗುತ್ತದೆ. ಅಂದರೆ ಮಾತ್ರ ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ. ಉದಾಹರಣೆಗೆ— ಸ್ಥೂಲ ದೇಹ, ಮೊಡವೆ ಬೆಳೆದಿರುವಿಕೆ, ದೊಡ್ಡ ಹೊಟ್ಟೆ, ಜೋತಾಡುವ ಮೊಲೆ, ಮುಖದ ಮೇಲ ಬೊಕ್ಕ-ಗುಳ್ಳೆ ಇವೇ ಮೊದಲಾದ ಲಕ್ಷಣಗಳಿಗೆ ಉಪಚಾರ ಮಾಡುವಿಕೆಯಲ್ಲದೆ, ಯೋಗಾಸನಗಳ ಬಗೆಗೆ ತಿಳಿಸಬೇಕಾಗುತ್ತದೆ. ಈ ಎಲ್ಲ ಶಾಸ್ತ್ರಗಳಿಗೆ ರವಿಯೇ ಕಾರಕನು. ಆದುದರಿಂದ ರವಿಯ ಬಲಾಬಲವನ್ನು ಪರಿಶೀಲಿಸಬೇಕಾಗುತ್ತದೆ. ಆದರೆ ಒಂದು ಮಹತ್ವದ ಸಂಗತಿಯೆಂದರೆ ಶುಕ್ರ--ಚಂದ್ರರು ರಾಶಿಬಲದವರೂ ಸ್ಥಾನ ಬಲದವರೂ ಇದ್ದರೆ ರವಿಯು ಕೇವಲ ರಾಶಿಬಲದವನಿದ್ದರೆ ಸಾಕು.

ಸ್ಥಾನ :— ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ದ್ವಿತೀಯ ತೃತೀಯ ಲಗ್ನ (ತನು) ಸ್ಥಾನಗಳು ಈ ಮೂರು ಕಾರಕವಿರುತ್ತವೆ. ಏಕೆಂದರೆ ಈ ವೃತ್ತಿಯವರವು ಮೂರು ಮುಖ್ಯ ಕೆಲಸಗಳಿವೆ. ಒಂದು ಸೈದ್ಧಾಂತಿಕ, ಎರಡು ಮೌಖಿಕ, ಮೂರು ಪ್ರಾತ್ಯಕ್ಷಿಕ. ಇದರಲ್ಲಿ ಮೌಖಿಕ ಹಾಗೂ ಪ್ರಾತ್ಯಕ್ಷಿಕ ಕೆಲಸವೇ ಮುಖ್ಯವೆಂದರೆ ತಮ್ಮ ಗಿರಾಕಿಗಳ ಪಕ್ಷಗಾರರ ಕೇಶಾಲಂಕಾರ, ಹುಬ್ಬು ತಿದ್ದುವಿಕೆ ಮೊದಲಾದ ಕೆಲಸವನ್ನು ಸ್ವತಃ ಮಾಡಬೇಕಾಗುತ್ತದೆ ( ಪ್ರಾತ್ಯಕ್ಷಿಕ ). ಆದಕ್ಕಾಗಿ ತೃತೀಯ ಸ್ಥಾನ ಹಾಗೂ ತೃತೀಯೇಶರು ಬಲಾಢ್ಯರಿರಬೇಕು. ಎರಡನೇದಾಗಿ ಸೌಂದರ್ಯ ವರ್ಧನೆಗೆ ಏನೇನು ಮಾಡಬೇಕು, ಹೇಗಿರಬೇಕು ಎಂಬುದನ್ನು ತಿಳಿಸಿ ಹೇಳಬೇಕಾಗುತ್ತದೆ. ಆದಕ್ಕಾಗಿ ವಾಕ್ ಸ್ಥಾನವಾದ ದ್ವಿತೀಯ ಸ್ಥಾನ ದ್ವಿತೀಯೇಶರು ಬಲಾಢ್ಯರಿರಬೇಕು.

ಇವರು ಸೈದ್ಧಾಂತಿಕವಾಗಿ ಸ್ವತಃ ಸೌಂದರ್ಯೋಪಾಸಕರೂ ಇರಬೇಕಾಗುತ್ತದೆ. ಸೌಂದರ್ಯೋಪಾಸಕ ಸ್ಥಾನವೆಂದರೆ ಲಗ್ನವು. ಆದುದ

ರಿಂದ ಲಗ್ನ–ಲಗ್ನೇಶರು ಬಲಾಢ್ಯರಿರಬೇಕಾಗುತ್ತದೆ. ಹೀಗೆ ಲಗ್ನ-ದ್ವಿತೀಯ–ತೃತೀಯ ಈ ಸ್ಥಾನಗಳೂ ಈ ಸ್ಥಾನಾಧೀಶರೂ ಬಲಾಢ್ಯರಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು.

ಲಗ್ನ :— ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ವೃಷಭ, ಕರ್ಕ, ಮಿಥುನ, ತುಲಾ ಈ ಲಗ್ನದವರು, ಇವರ ನಂತರ ಮಕರ, ಕುಂಭ, ಮೀನ ಲಗ್ನದವರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

ರಾಶಿ :— ರಾಶಿ ದೃಷ್ಟಿಯಿಂದ ನೋಡಿದರೆ ನಿರ್ದಿಷ್ಟ ರಾಶಿಯವರೇ ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆಯೆಂದು ಹೇಳಲು ಬಾರದಿದ್ದರೂ ಮಿಥುನ, ತುಲಾ, ಕುಂಭ ರಾಶಿಯವರು, ತದನಂತರ ವೃಷಭ, ಕರ್ಕ, ಕನ್ಯಾ, ಮೀನ ಈ ರಾಶಿಯವರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

### ೨) ಕುಶಲ ಕರ್ಮಿಗಳ ವೃತ್ತಿ

ಅಲಂಕಾರಕ ಜೀವನಕ್ಕೆ ಕುಶಲಕರ್ಮ ಅನಿವಾರ್ಯವಾಗಿರುತ್ತದೆ. ಆಧುನೀಕರಣವು ಯಾಂತ್ರೀಕರಣಗಳನ್ನು ತಂದಂತೆ ಮಾನವನು ತನ್ನಲ್ಲಿಯ ರಸಿಕತೆ ಹಾಗೂ ರಸನಾತ್ಮಕತೆಗಳ ಅಭಿವ್ಯಕ್ತಿಗಾಗಿ ಕೆಲವು ಅಭಿರುಚಿಗಳನ್ನು ಬೆಳೆಸಿಕೊಂಡಿರುತ್ತಾನೆ. ಯಾಂತ್ರೀಕರಣದಿಂದ ಜೀವನವು ಬರಡಾಗದಂತೆ ಸಹಾಯ ಮಾಡುವುದು ಒಂದು ಕಲೆ. ಕುಶಲ ಕರ್ಮಿಗಳು ಕಲಾಭಿಜ್ಞರು ಇವರಿಗೆ ಇರುವ ಮುಖ್ಯ ಛಂದವಾಳವೆಂದರೆ ತಮ್ಮ ಕಲಾ ತಜ್ಞತೆ, ಕಲಾ ನೈಪುಣ್ಯತೆ. ಇಂಥ ಕುಶಲಕರ್ಮಿಗಳು ಕಟ್ಟಿಗೆ ಉಪಯೋಗಿಸಿ ಕೆತ್ತನೆ ಕೆಲಸ ಮಾಡುವವರಿಂದ ಹಿಡಿದು ಬಟ್ಟೆಯಲ್ಲಿ ಕಸೂತಿ, ಕಾಗದ ಕಲೆ, ಕಲ್ಲಿನ ಮೂರ್ತಿ ಕೆತ್ತುವುದು ಇವನ್ನು ಮಾಡುವವರು ಕುಶಲಕರ್ಮಿಗಳೇ. ಇದರಂತೆ ನೇಕಾರರು, ಬಡಿಗರು, ಪತ್ತಾರರು ( ಅಕ್ಕಸಾಲಿಗರು ), ಬಣಗಾರರು, ಜೀನಗಾರರು, ಸೀಲಗಾರರು ಸಿಂಪಿಗರು ( ಟೇಲರರು ), ಗೌಂಡಿಗಳು ಇವರೆಲ್ಲರೂ ಕುಶಲಕರ್ಮಿಗಳೇ,

ಆದುದರಿಂದ ಇಂಥ ಕುಶಲ ಕರ್ಮಿಗಳ ಜಾತಕ ಹೇಗಿರುತ್ತದೆ, ಕಾರಕ ಗ್ರಹಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ :—** ಕುಶಲಕರ್ಮಿಗಳ ಕಾರಕಗಳೆಂದರೆ ಚಂದ್ರ-ಶುಕ್ರರು. ಏಕೆಂದರೆ ಇವರ ಕೆಲಸದಲ್ಲಿ ಕಲಾಕಾರಿಕೆಯೇ ಇರುತ್ತದೆ, ಕುಶಲಗಾರಿಕೆಯೂ ಇರುತ್ತದೆ. ಕಲಾಕಾರರಲ್ಲಿ ಕಲಾನೈಪುಣ್ಯಕೆ ಇದ್ದರೆ ಕುಶಲಕರ್ಮಿಗಳಲ್ಲಿ ಕಲಾ ನೈಪುಣ್ಯತೆಯೊಂದಿಗೆ ಕಲಾಭಿಜ್ಞತೆಯೂ ಇರುತ್ತದೆ. ಅದರಲ್ಲಿಯೂ ಕಲಾ ಕುಶಲ ತಜ್ಞತೆ ಕಲಾಭಿಜ್ಞತೆ ಹೆಚ್ಚು ಇರುತ್ತದೆ. ಆದುದರಿಂದ ಕಲಾಕಾರಕನಾದ ಶುಕ್ರನು ಕಲಾಭಿಜ್ಞತೆ ಕಾರಕನಾದ ಚಂದ್ರನು ಈ ವೃತ್ತಿಗೆ ಕಾರಕರಿದ್ದು, ಚಂದ್ರ--ಶುಕ್ರರು ಬಲಾಢ್ಯರಿದ್ದವರೇ ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ. ಬಲಾಢ್ಯರೆಂದರೆ ರಾಶಿ ಬಲದವರೂ ಸ್ಥಾನ ಬಲದವರೂ ಇರಬೇಕು.

**ಸ್ಥಾನ:—** ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಕುಶಲ ಕರ್ಮಿಗಳು ಸ್ವತಃ ಕೆಲಸ ಮಾಡಬೇಕಾಗುತ್ತದೆ, ಆದುದರಿಂದ ತೃತೀಯ ಸ್ಥಾನವೇ ಮೂಲ ಹಾಗೂ ಮುಖ್ಯವಿದ್ದು ತೃತೀಯ ಸ್ಥಾನ--ತೃತೀಯೇಶರು ಬಲಾಢ್ಯರಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು. ತೃತೀಯದ ನಂತರ ಲಗ್ನ--ದಶಮ ಸ್ಥಾನಗಳೂ ಕಾರಕವಿದ್ದು ಲಗ್ನೇಶ-ದಶಮೇಶರು, ಲಗ್ನ--ದಶಮ ಸ್ಥಾನಗಳು ಬಲಾಢ್ಯವಿರಬೇಕು.

**ಲಗ್ನ:—** ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಮಿಥುನ ತುಳಾ, ಮಕರ ಈ ಲಗ್ನದವರು, ಇವರ ನಂತರ ವೃಶ್ಚಿಕ, ಕುಂಭ, ಮೀನ ಈ ಲಗ್ನದವರು ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

**ರಾಶಿ:—** ರಾಶಿದೃಷ್ಟಿಯಿಂದ ನೋಡಿದರೆ ನಿರ್ದಿಷ್ಟ ರಾಶಿಯವರೇ ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ ಎಂದು ಹೇಳಲುಬಾರದಿದ್ದರೂ ಮಿಥುನ, ತುಳಾ, ಕುಂಭ ರಾಶಿಯವರೂ, ಅನಂತರ ವೃಷಭ, ಕರ್ಕ, ಕನ್ಯಾ, ಮೀನ ರಾಶಿಯವರೂ ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

೦೦_೦೦

# ೯

## ಮಶಿನರಿ (ಯಂತ್ರ) ಸಾಮಗ್ರಿ ರಿಪೇರರ್ಸ ವೃತ್ತಿ

ನಾವು ಈ ಹಿಂದೆ ಹೇಳಿದಂತೆ ಇತ್ತೀಚಿಗಂತೂ ಯಾವ ವ್ಯಕ್ತಿಯೂ ತನ್ನ ಎಲ್ಲ ಕೆಲಸ ಕಾರ್ಯಗಳನ್ನು ತಾನೇ ಸ್ವತಃ ಮಾಡಿಕೊಳ್ಳಲು ಸಾಧ್ಯವಾಗದಂಥ ಪರಿಸ್ಥಿತಿ ಇಂದು ನಿರ್ಮಾಣವಾಗಿದೆ. ಅರ್ಥಾತ್ ಆಧುನೀಕರಣ ಬೆಳೆದಂತೆ ಸೌಕರ್ಯ ಹೆಚ್ಚಾದಂತೆ ಪರಾವಲಂಬನೆಯೂ ಹೆಚ್ಚಾಗ ಹತ್ತಿದೆ.

ಉದಾಹರಣೆಗಾಗಿ— ಎಲೆಕ್ಟ್ರೀಶಿಯನ್ ವೃತ್ತಿ ತೆಗೆದುಕೊಳ್ಳಿರಿ. ಈ ಮೊದಲು ದೊಡ್ಡ ದೊಡ್ಡ ಪಟ್ಟಣಗಳಲ್ಲಿಯೇ ಈ ವೃತ್ತಿಯವರ ಬೇಡಿಕೆ ಇತ್ತು. ಇಂದು ನಾಡಿನಲ್ಲಿ ವಿದ್ಯುತ್ ಬಳಕೆ ವಿದ್ಯುತ್ ಉಪಕರಣಗಳ ಬಳಕೆಯೂ ಹೆಚ್ಚಾಗಿದೆ. ಅಷ್ಟೇ ಏಕೆ, ಗ್ರಾಮಾಂತರ ಪ್ರದೇಶದಲ್ಲೂ ಸಹ ಬಹಳ ಹೆಚ್ಚಾಗಿದೆ. ಈ ಮೊದಲು ಜನರು ಹೆಚ್ಚಾಗಿ ಮನೆಯ ದೀಪ, ಪಂಕಾ, ರಸ್ತೆ ದೀಪಗಳಿಗೆ ವಿದ್ಯುತ್‌ನ್ನು ಉಪಯೋಗಿಸುತ್ತಿದ್ದರು. ಆದರೆ ಸರ್ವ-ವಿದ್ಯುತ್ (ಎ-ಈ-ಎಚ್) ಆದ ಬಳಿಕ ವಿದ್ಯುತ್ ಒಲೆ. ನೀರು ಕಾಯಿಸುವ ಕ್ವಾಯಿಲ, ಗ್ರಾಯಿಂಡರ, ಮಿಕ್ಸರ, ಇಸ್ತ್ರೀ ಮೊದಲಾದ ಗೃಹೋಪಯೋಗಿ ವಿದ್ಯುತ್ ಉಪಕರಣಗಳ ಬಳಕೆ ಸಾಮಾನ್ಯವಾಗಿದೆ. ಅಷ್ಟೇ ಏಕೆ, ಗ್ರಾಮಾಂತರ ಪ್ರದೇಶದಲ್ಲಿಯ ಸಾವಿರಾರು ವಿದ್ಯುತ್ ಪಂಪ ಸೆಟ್ಟುಗಳಿಂದಾಗಿ ಬಳಕೆ ಹೆಚ್ಚಾಗಿದೆ. ಈ ಉಪಕರಣಗಳಲ್ಲಿ ತುಸು ನಾದುರಸ್ತಿ ಆದರೆ ಇಲೆಕ್ಟ್ರೀಶಿಯನ್-ಮೇಸ್ತ್ರಿಗಳ ಸಹಾಯ ಬೇಕೇಬೇಕು.

ಇದರಂತೆ ಸಾಯಕಲ್ಲ-ಸ್ಕೂಟರ-ಮೋಟರ ಕಾರ-ಟ್ರಕ್ಕ-ಟ್ರ್ಯಾಕ್ಟರ ಮೊದಲಾದ ವಾಹನಗಳ ದುರಸ್ತಿದಾರರನ್ನು ತೆಗೆದುಕೊಳ್ಳಿರಿ. ಈ ಹಿಂದೆ

ನಾಡಿನಲ್ಲಿ ವಾಹನಗಳ ಸಂಖ್ಯೆ ಹಾಗೂ ಬಳಕೆ ಕಡಿಮೆಯಿತ್ತು. ಅದೂ ಕೂಡ ದೊಡ್ಡ ದೊಡ್ಡ ನಗರಗಳಲ್ಲಿಯ ಶ್ರೀಮಂತರು ಅಧಿಕಾರಿಗಳು ಮಾತ್ರ ಉಪಯೋಗಿಸುತ್ತಿದ್ದರು. ಇಂದು ಗ್ರಾಮಾಂತರ ಪ್ರದೇಶಗಳಲ್ಲಿ ಸಹ ಇವುಗಳ ಸಂಖ್ಯೆ ಹೆಚ್ಚಾಗಿದೆ. ಈ ವಾಹನ ಹಾಗೂ ಬಿಡಿಭಾಗಗಳು ನಾದುರಸ್ತಾದರೆ ಮೇಸ್ತ್ರಿಗಳ ಮೊರೆ ಹೋಗಬೇಕು, ಅವರು ಕೈ-ಹಚ್ಚದೆ ಅವು ಚಲಿಸಲಾರದಂಥ ಪರಿಸ್ಥಿತಿ ನಿರ್ಮಾಣವಾಗಿದೆ.

ಇದರಂತೆಯೇ ಈ ಹಿಂದೆ ರೇಡಿಯೋಗಳ ಸಂಖ್ಯೆ ಕೂಡ ಕಡಿಮೆಯಿತ್ತು. ಇಂದು ಪ್ರತಿ ಮನೆಯಲ್ಲಿಯೂ ರೇಡಿಯೋ ಇಲ್ಲವೆ ಟ್ರಾಂಜಿಸ್ಟರ ಕಾಣಸುತ್ತವೆ. ಇನ್ನು ಕೆಲ ವರ್ಷಗಳಲ್ಲಿ ನಾಡಿನಲ್ಲಿ ರೇಡಿಯೊ ಜಾಗೆಯಲ್ಲಿ ಪ್ರತಿ ಮನೆ-ಮನೆಗಳಲ್ಲಿ ಟಿ. ವಿ. ಸೆಟ್ಟುಗಳನ್ನು ಕಾಣಬಹುದು. ಟಿ. ವಿ-ರೇಡಿಯೋಗಳು ನಾದುರಸ್ತಾದರೆ ರಿಪೇರರ (ದುರಸ್ತಿದಾರರ) ಸಹಾಯ ಬೇಕೇಬೇಕು.

ಈ ಹಿಂದೆ ಶ್ರೀಮಂತರೂ ಪ್ರತಿಷ್ಠಿತರೂ ಮಾತ್ರ ವಾಚ - ಗಡಿಯಾರಗಳನ್ನು ಉಪಯೋಗಿಸುತ್ತಿದ್ದರು. ಇಂದು ಅವು ಮನೆಯಲ್ಲಿಯ ಮಕ್ಕಳಿಗೂ ಬೇಕು, ಮನೆ ಕೆಲಸಗಾರರಿಗೂ-ಕಾರ್ಮಿಕರಿಗೂ ಸಹ ಬೇಕು. ಹೀಗೆ ಈ ವಾಚಗಳು, ನಾಗರಿಕ ಸೌಕರ್ಯ-ಸೌಲಭ್ಯ ಹೆಚ್ಚಾಗಿವೆ. ಅವುಗಳ ರಿಪೇರಿಗಾಗಿ ಪರಾವಲಂಬನೆಯೂ ಹೆಚ್ಚಾಗಿದೆ. ಅಂತೆಯೇ ಈ ಎಲ್ಲ ದುರಸ್ತಿದಾರರ ಬೇಡಿಕೆ ಬಹು ಚೆನ್ನಾಗಿ ಬೆಳೆಯುತ್ತಿದೆ.

ಇಂದಿನ ಯಂತ್ರ ಯುಗದಲ್ಲಿ ಯಂತ್ರಗಳ ಉತ್ಪಾದಕತೆಯು ಎಷ್ಟು ಪ್ರಧಾನವೋ ಅಷ್ಟೇ ಯಂತ್ರ ರಿಪೇರಿಯ ಕೆಲಸವೂ ಪ್ರಧಾನವಾಗಿ ಬಿಟ್ಟಿದೆ. ಯಾವುದೇ ಉತ್ಪಾದಿತ ಯಂತ್ರವನ್ನು ದುರಸ್ತಿ (ರಿಪೇರಿ) ಮಾಡಿಸಿ ಅದರ ಉತ್ತಮ ಸ್ಥಿತಿಯನ್ನು ಕಾಪಾಡಿಕೊಂಡು ಹೋಗದಿದ್ದರೆ ಅದರ ಜೀವಾವಧಿಯು ಕಡಿಮೆಯಾಗುತ್ತದೆ. ಅಂತೆಯೇ ಈ ರಿಪೇರಿ ವೃತ್ತಿಯು ಅನೇಕರನ್ನು ತನ್ನ ವಲಯದಲ್ಲಿ ತೊಡಗಿಸಿಕೊಂಡಿದೆ.

ವಾಚ ರಿಪೇರಿ, ಸೈಕಲ್ಲ ರಿಪೇರಿ, ಸ್ಕೂಟರ-ಮೋಟರ-ಕಾರ-ಟ್ರಕ-ಜೀಪ-ಟ್ರ್ಯಾಕ್ಟರ ರಿಪೇರಿ, ರೇಡಿಯೋ-ಟೀವಿ ರಿಪೇರಿ ಮೊದಲಾದ ನಾನಾ ವಿಧದ ಯಂತ್ರಗಳ ರಿಪೇರಿ ಮಾಡುವ ವೃತ್ತಿಯವರಾದ ಫಿಟರ-ಮೆಕ್ಯಾನಿಕ-ಟರ್ನರ-ಲೇಥಮನ--ಗ್ರಾಯಿಂಡರ--ಫೌಂಡ್ರಿಮನ್-ಡ್ರಿಲರ-ಪ್ಯಾಟರ್ನ ಮೇಕರ--ಮೋಲ್ಡರ--ಪ್ಲಂಬರ--ಶೀಟ ಮೆಟಲ್ ವರ್ಕರ-, ಕೇಬಲ ಜಾಯಿಂಟರ, ಇಲೆಕ್ಟ್ರೀಸಿಯನ್ ಅಲ್ಲದೆ ವರ್ಕಶಾಪ್--ಮಶೀನ ಶಾಪ್‌ಗಳ ಮೇಸ್ತ್ರಿ ಈ ಎಲ್ಲ ವೃತ್ತಿಯವರ ಬೇಡಿಕೆಯಂತೂ ವಿಪರೀತ ಬೆಳೆಯಹತ್ತಿದೆ.

ಆದಾಗ್ಯೂ ಎಲ್ಲ ದುರಸ್ತಿದಾರರ ವೃತ್ತಿ ಚೆನ್ನಾಗಿ ನಡೆಯುತ್ತಿದೆ ಯೆಂದು ಹೇಳಲು ಬಾರದು. ಆದುದರಿಂದ ಫಲ ಜ್ಯೋತಿಷ್ಯದಲ್ಲಿ ಈ ವೃತ್ತಿಯ ಕಾರಕ ಗ್ರಹಾದಿಗಳಾವವು ಎಂಬುದನ್ನು ಪರಿಶೀಲಿಸುವಾ.

ಮಶಿನರಿ ಸಾಮಗ್ರಿ ವೃತ್ತಿಯವರ ಅರ್ಥಾತ್ ಯಂತ್ರ ದುರಸ್ತಿಗಾರರ ( ಮಶಿನರಿ ರಿಪೇರರ್ಸ ) ವೃತ್ತಿಯ ಕಾರಕ ಗ್ರಹ ಯಾವವುದೆಂಬುದನ್ನು ತಿಳಿಯುವ ಮೊದಲು ದುರಸ್ತಿಗಾರರಲ್ಲಿಯ ಪ್ರಕಾರಗಳನ್ನು ತಿಳಿಯುವುದು ಅವಶ್ಯವು. ಏಕೆಂದರೆ ದುರಸ್ತಿಗಾರರಲ್ಲಿ ಕೂಡ ಅನೇಕ ಪ್ರಕಾರಗಳಿದ್ದು ಒಂದು ದುರಸ್ತಿಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗಬಲ್ಲ ಜಾತಕನು ಇನ್ನೊಂದು ಪ್ರಕಾರದ ದುರಸ್ತಿಗಾರಿಕೆ ವೃತ್ತಿಯಲ್ಲಿ ಯಶಸ್ವಿಯಾಗುತ್ತನೆಯೆಂದು ಹೇಳಲು ಬಾರದು. ಏಕೆಂದರೆ ಒಂದೊಂದು ಪ್ರಕಾರದ ದುರಸ್ತಿಗಾರಿಕೆಗೆ ಒಂದೊಂದು ರೀತಿಯ ತಜ್ಞತೆ-ಜಾಣ್ಮೆ-ಕುಶಲತೆ ಬೇಕಾಗುತ್ತವೆ. ಆದ್ದರಿಂದ ಯಾರು ಯಾವ ಪ್ರಕಾರದ ದುರಸ್ತಿ ವೃತ್ತಿ ಕೈಕೊಂಡರೆ ಯಶಸ್ಸು ಲಭಿಸುತ್ತದೆ ಎಂಬುದನ್ನು ಪರಿಶೀಲಿಸುವ ಮೊದಲು ದುರಸ್ತಿಗಾರಿಕೆ ವೃತ್ತಿಯಲ್ಲಿಯ ಪ್ರಕಾರಗಳನ್ನು ಪರಿಶೀಲಿಸುವಾ.

**ದುರಸ್ತಿಗಾರಿಕೆ ( ರಿಪೇರರ್ಸ ) ವೃತ್ತಿಯಲ್ಲಿಯ ಪ್ರಕಾರಗಳು**

ದುರಸ್ತಿಗಾರಿಕೆ ವೃತ್ತಿಯಲ್ಲಿ ದುರಸ್ತಿದಾರರಲ್ಲಿ ಅನೇಕ ಪ್ರಕಾರಗಳಿವೆ.

ಎಷ್ಟು ಪ್ರಕಾರದ ಮಶೀನರಿಗಳು ಉಪಕರಣಗಳು ಇವೆಯೋ ಅಷ್ಟು ಪ್ರಕಾರದ ದುರಸ್ತಿಗಾರರಿದ್ದಾರೆ.

ಮಶಿನರಿಗಳು ಹಾಗು ಉಪಕರಣಗಳು ಮತ್ತು ಅವುಗಳ ಸಂಖ್ಯೆ ಬೇಕಾದಷ್ಟು ಇದ್ದರೂ ಸ್ಥೂಲವಾಗಿ ಮೂರೇ ಮೂರು ಪ್ರಕಾರದ ದುರಸ್ತಿಗಾರರ ವರ್ಗಗಳನ್ನಾಗಿ ವಿಂಗಡಿಸಬಹುದು.

(೧) ಮೆಕ್ಯಾನಿಕಲ್ ರಿಪೇರರ್ಸ

(೨) ಇಲೆಕ್ಟ್ರಿಕಲ್ ಎಂಡ ಎಲೆಕ್ಟ್ರಾನಿಕ್ಸ ರಿಪೇರರ್ಸ

(೩) ಸಿವಿಲ್ ರಿಪೇರರ್ಸ

ರಿಪೇರಿಯರರಲ್ಲಿಯ ಈ ಮೂರೂ ಪ್ರಕಾರದ ದುರಸ್ತಿದಾರರ ಕೆಲಸ ವಿಭಿನ್ನವಿರುವುದರಿಂದ ವಿಭಿನ್ನ ಗ್ರಹಾದಿಗಳು ಕಾರಕವಿರುತ್ತವೆ.

ಆದರೆ ಒಂದು ಸಂಗತಿ, ಎಲ್ಲ ದುರಸ್ತಿಗಾರ ವೃತ್ತಿಯವರ ಮುಖ್ಯ ಸ್ವಭಾವ ಗುಣಧರ್ಮವೆಂದರೆ— ಯಾವ ಯಂತ್ರದ ಯಾವ ಉಪಕರಣದ ದುರಸ್ತಿ ಮಾಡುವುದಿದೆಯೋ ಆ ಯಂತ್ರದ, ಉಪಕರಣದ ಹಾಗು ಅದರ ಭಾಗಗಳ ಸಮಗ್ರ ಕಾರ್ಯ ವಿಧಾನಗಳನ್ನು ತಿಳಿದುಕೊಂಡಿರಬೇಕಾಗುತ್ತದೆ. ಉದಾಹರಣೆಗೆ – ಸ್ಕೂಟರ–ಕಾರ ಮೊದಲಾದ ವಾಹನಗಳ ದುರಸ್ತಿಯವರನ್ನೇ ತೆಗೆದುಕೊಳ್ಳಿರಿ ಕಾರ–ಸ್ಕೂಟರಗಳಲ್ಲಿಯ ಡೆಲ್ಕೊ–ಪಂಪ–ನಾಡಲ್ಸ–ಗೇರಬಾಕ್ಸ–ಪಿಸ್ಟನ್–ಕಾರ್ಬೊರೇಟರ ಮೊದಲಾದವುಗಳ ಭಾಗಗಳ ಕಾರ್ಯ ವಿಧಾನಗಳೇನು ಎಂಬುದರ ಸಮಗ್ರ ಜ್ಞಾನವಿರಬೇಕಾಗುತ್ತದೆ, ಇದರಂತೆ– ಟಿ.ವಿ ರೇಡಿಯೋಗಳ ರಿಪೇರಿಯವರನ್ನೇ ತೆಗೆದುಕೊಳ್ಳಿರಿ. ಕಂಡೆನ್ಸರ, ಕ್ವಾಯಿಲ್, ರೆಜಿಸ್ಟರ, ಟ್ರಾನ್ಸರ, ವಿಡಿಯೋ, ಆಡಿಯೋ, ಟ್ಯೂಬ ಎಂಟಿನಾ ಇವುಗಳ ಕಾರ್ಯ ವಿಧಾನಗಳ ಸಂಪೂರ್ಣ ಕಲ್ಪನೆ ಇರಬೇಕಾಗುತ್ತದೆ. ಅಂತೆಯೇ ಈ ವಿಭಿನ್ನ ಪ್ರಕಾರದ ದುರಸ್ತಿಗಾರಿಕೆ ವೃತ್ತಿಯವರಿಗೆ ವಿಭಿನ್ನ ಗ್ರಹಾದಿಗಳು ಕಾರಕವಿರುತ್ತವೆ.

### ೧) ಮೆಕ್ಯಾನಿಕಲ್ ರಿಪೇರರ್ಸ

**ಕಾರಕ ಗ್ರಹ:** — ಸಾಯಿಕಲ್ಲ-ಮೋಟರ ಸಾಯಿಕಲ್ಲ-ಮೊಪೆಡ್-ಸ್ಕೂಟರ-ಕಾರ-ಟ್ರಕ-ಟ್ರ್ಯಾಕ್ಟರ-ಜೀಪ ಮೊದಲಾದ ಎಲ್ಲ ಪ್ರಕಾರದ ವಾಹನ ಮೆಕ್ಯಾನಿಕಲ್ ದುರಸ್ತಿಗಾರಿಕೆ ಈ ವಿಭಾಗದಲ್ಲಿ ಬರುತ್ತದೆ. ಈ ವಾಹನಗಳ ದುರಸ್ತಿಗಾರಿಕೆ ವೃತ್ತಿಯವರ ಕಾರಕ ಗ್ರಹಗಳೆಂದರೆ ಶನಿ-ಮಂಗಳರು. ಶನಿ-ಮಂಗಳರು ಬಲಾಢ್ಯರಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು. ಅವರಲ್ಲಿಯೂ ಮಂಗಳನಿಗಿಂತ ಶನಿಯು ಬಲಾಢ್ಯನಿರಲೇಬೇಕು. ಏಕೆಂದರೆ ಈ ವಾಹನಗಳ ಯಂತ್ರಗಳು ಎರಡು ಪ್ರಕಾರದವಿರುತ್ತವೆ.

೧) ಪೆಟ್ರೋಲ ಇಂಜಿನ್

೨) ಆಯಿಲ್ ಇಂಜಿನ್ ಡಿಜಾಯಿಲ್ ಇಂಜಿನು

ಯಾವುದೇ ಪ್ರಕಾರದ ಎಣ್ಣೆಯಿಂದ ಕಾರ್ಯ ಮಾಡಲಿ, ಎಲ್ಲ ಪ್ರಕಾರದ ಎಣ್ಣೆಗಳಿಗೆ ಶನಿಯು ಕಾರಕನು. ಎಲ್ಲ ಪ್ರಕಾರದ ಇಂಜಿನಗಳಿಗೆ ಕುಜನು ಕಾರಕನು. ಆದುದರಿಂದ ಶನಿ-ಮಂಗಳರು ಬಲಾಢ್ಯರಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು.

**ಸ್ಥಾನ:**— ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಲಗ್ನ, ತೃತೀಯ, ಚತುರ್ಥ ಈ ಮೂರು ಸ್ಥಾನಗಳು ಕಾರಕವಿರುತ್ತವೆ. ಏಕೆಂದರೆ ಈ ವಾಹನಗಳ ಯಂತ್ರಗಳನ್ನಾಗಲಿ ಉಳಿದ ಯಾವುದೇ ಪ್ರಕಾರದ ಆಯಿಲ್ ಇಂಜಿನ್ನಿನ ಯಂತ್ರಗಳನ್ನಾಗಲಿ ದುರಸ್ತಿ ಮಾಡುವವರು ದೈಹಿಕವಾಗಿ ಸದೃಢರಿರಬೇಕಾಗುತ್ತದೆ. ಆದ್ದರಿಂದ ಲಗ್ನ-ಲಗ್ನೇಶರು ಬಲಾಢ್ಯರಿರದೆ ಇದು ಸಾಧಿಸದು. ಇದರಂತೆ ಈ ಮಶಿನಗಳ ದುರಸ್ತಿ ಮಾಡುವವರು ಸ್ವತಃ ಫಿಟಿಂಗ-ವೆಲ್ಡಿಂಗ-ಡ್ರಿಲಿಂಗ-ಏಲಿಂಗ ಮೊದಲಾದ ಕೆಲಸಗಳನ್ನು ಮಾಡಬೇಕಾಗುತ್ತದೆ. ಅದಕ್ಕಾಗಿ ತೃತೀಯ ಸ್ಥಾನ ತೃತೀಯೇಶರು ಬಲಾಢ್ಯರಿರಬೇಕಾಗುತ್ತದೆ. ಇದರಂತೆ ಈ ಉದ್ಯೋಗ ಕೈಕೊಳ್ಳುವವರು ತಮ್ಮದೇ ಆದ ಗ್ಯಾರೇಜ-ಮಶೀನ ಶಾಪ-ವರ್ಕಶಾಪಗಳನ್ನು ಇಟ್ಟುಕೊಳ್ಳಬೇಕಾಗು

ತ್ತದೆ. ಆದಕ್ಕಾಗಿ ಚತುರ್ಥ ಸ್ಥಾನ-ಚತುರ್ಥೇಶ ಬಲಾಢ್ಯರಿರಬೇಕಾಗು ತ್ತದೆ. ಆದುದರಿಂದ ಲಗ್ನ-ಲಗ್ನೇಶ, ತೃತೀಯ-ತೃತೀಯೇಶ. ಚತುರ್ಥ -ಚತುರ್ಥೇಶರು ಬಲಾಢ್ಯರಿರದೆ ಯಾರೂ ಮಶಿನರಿಯ ಮೇಸ್ತ್ರಿ ವೃತ್ತಿ ಕೈಕೊಳ್ಳಲಾರರು.

ಲಗ್ನ—: ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಕರ್ಕ, ಸಿಂಹ, ತುಲಾ, ವೃಶ್ಚಿಕ, ಮಕರ ಈ ಲಗ್ನದವರೇ ಈ ವೃತ್ತಿ ಯಲ್ಲಿರುವುದು ಕಂಡುಬರುತ್ತದೆ.

ರಾಶಿ :— ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ಸಿಂಹ, ವೃಶ್ಚಿಕ, ಧನು, ಮಕರ, ಕುಂಭ ಈ ರಾಶಿಯವರು ಈ ವೃತ್ತಿಯಲ್ಲಿ ಪಳಗಬಲ್ಲರು.

ಯೋಗಗಳು :— ಈ ವೃತ್ತಿ ಕೈಕೊಳ್ಳುವವರ ಜಾತಕದಲ್ಲಿ ಪ್ರಮುಖ ಯೋಗವೆಂದರೆ ಅನೇಕ ಗ್ರಹಗಳು ಪುರುಷ ರಾಶಿಯಲ್ಲಿರುತ್ತವೆ.

೨) ಇಲೆಕ್ಟ್ರಿಕ್ ಹಾಗೂ ಇಲೆಕ್ಟ್ರಾನಿಕ್ಸ ರಿಪೇರಿಯರ ವೃತ್ತಿ

ಕಾರಕ ಗ್ರಹ:— ಮಿಕ್ಸರ, ಗ್ರ್ಯಾಯಿಂಡರ-ಇಸ್ತ್ರಿ ಪೆಟ್ಟಿಗೆ-ರಿಫ್ರಿಜರೇಟರ -ರೇಡಿಯೋ - ವಿದ್ಯುತ್ ಒಲೆ-ಟೀವಿ-ಕ್ಯಾಲ್ಕುಲೇಟರ-ಕಾಂಪ್ಯುಟರ ಮೊದ ಲಾದ ಇಲೆಕ್ಟ್ರಿಕ್ ಉಪಕರಣಗಳ ಹಾಗೂ ಇಲೆಕ್ಟ್ರಾನಿಕ್ಸ ಉಪಕರಣಗಳ ದುರಸ್ತಿಗಾರರ ವೃತ್ತಿಗೆ ಕಾರಕ ಗ್ರಹವೆಂದರೆ ಮಂಗಳನು. ಮಂಗಳನು ಬಲಾಢ್ಯನಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು. ಏಕೆಂದರೆ ವಿದ್ಯುತ್ತಿನ ಮೇಲೆ ಮಂಗಳನು ಕಾರಕನು, ಮಂಗಳನ ತರುವಾಯ ಬುಧ -ಶುಕ್ರರ ಬಲಾಬಲವನ್ನು ಪರಿಶೀಲಿಸಬೇಕು. ಏಕೆಂದರೆ ಇಲೆಕ್ಟ್ರಿಕ್ ಉಪಕರಣಗಳಿಗೆ ಮಂಗಳನು ಕಾರಕನಿದ್ದರೆ, ಇಲೆಕ್ಟ್ರಾನಿಕ್ಸ ಉಪಕರಣ ಗಳಿಗೆ ಮಂಗಳ-ಬುಧ-ಶುಕ್ರರು ಕಾರಕರು. ಆದುದರಿಂದ ಮಂಗಳ-ಬುಧ-ಶುಕ್ರರು ಬಲಾಢ್ಯರಿದ್ದವರೇ ಈ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

ಸ್ಥಾನ:— ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಲಗ್ನ-ತೃತೀಯ

-ಚತುರ್ಥ ಸ್ಥಾನಗಳೇ ಕಾರಕಗಳು. ಏಕೆಂದರೆ ಮೇಲೆ ಬರೆದ ಯಂತ್ರಗಳು ಸೂಕ್ಷ್ಮವಿದ್ದು ಅವುಗಳ ಬಿಡಿಭಾಗಗಳ ಜೋಡಣೆಯು ಬಹಳ ಸೂಕ್ಷ್ಮವಿರುತ್ತದೆ. ಅದಕ್ಕಾಗಿ ಸ್ಥಿರ ಮನಸ್ಸು, ಶಾಂತ ವಾತಾವರಣ ಅವಶ್ಯ. ಆದುದರಿಂದ ಮನಸ್ಸಿನ ಸ್ಥಾನಗಳಾದ ಲಗ್ನ-ಚತುರ್ಥ ಸ್ಥಾನಗಳು ಪೂರಕವಿರಬೇಕು. ಇದರಂತೆ ಇವರೇ ಸ್ವತಃ ಈ ಕಾರ್ಯಗಳನ್ನು ಕೈಕೊಳ್ಳಬೇಕಾಗುವುದರಿಂದ ತೃತೀಯ ಸ್ಥಾನ ಹಾಗೂ ತೃತೀಯೇಶರು ಬಲಾಢ್ಯರಿರಬೇಕಾಗುತ್ತದೆ. ತಾವೇ ರಿಪೇರಿ ಕೆಲಸ ಮಾಡದೆ ನೌಕರ-ಚಾಕರರಿಂದ ಈ ಕೆಲಸ ಮಾಡಿಸುವವರ ಜಾತಕದಲ್ಲಿ ಚತುರ್ಥ ಸ್ಥಾನ ಪೂರಕವಿರಲೇಬೇಕು. ಏಕೆಂದರೆ ಚತುರ್ಥ ಸ್ಥಾನ ಇದು ನೌಕರ-ಚಾಕರ ಸೌಖ್ಯ ಸ್ಥಾನವಿರುತ್ತದೆ. ಅಲ್ಲದೆ ಮಶಿನರಿಗಳ ರಿಪೇರಿಗಾಗಿ ಪ್ರತ್ಯೇಕವಾದ ಸ್ವತಂತ್ರವಾದ ಜಾಗ ಬೇಕಾಗುತ್ತದೆ. ಚತುರ್ಥ ಇದು ಜಾಗೆಯ ಸ್ಥಾನವಿರುತ್ತದೆ.

**ಲಗ್ನ** :—ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಮಿಥುನ, ಕರ್ಕ, ಸಿಂಹ, ಧನು, ಮಕರ ಈ ಲಗ್ನಗಳು ಕಾರಕವಿರುತ್ತವೆ.

**ರಾಶಿ**:— ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಮಿಥುನ, ತುಲಾ, ಕುಂಭ ರಾಶಿಗಳು, ತದನಂತರ ವೃಷಭ, ಕರ್ಕ, ಕನ್ಯಾ, ಮೀನ ರಾಶಿಗಳು ಪೂರಕವಾಗಿರುತ್ತವೆ.

**ಯೋಗ**:- ಇವರ ಜಾತಕದಲ್ಲಿ ಬುಧ-ಶುಕ್ರ-ಚಂದ್ರರು ಭೂ-ವಾಯು-ಸ್ತ್ರೀ ರಾಶಿಗಳಲ್ಲಿರುತ್ತಾರೆ.

೩) ಸಿವಿಲ್ ರಿಪೇರರ್ಸ :

**ಕಾರಕ ಗ್ರಹ**:— ಕಟ್ಟಡ-ಸೇತುವೆ-ಕಾಲುವೆಗಳ ರಿಪೇರಿ, ಪಾಯಿಪ ಲಾಯಿನ-ನಳದ ರಿಪೇರಿ, (ಪ್ಲಂಬರ ಕೆಲಸ ) ವಾಶಬೇಶನ, ಒಳಚರಂಡಿ ಮೊದಲಾದ ಸ್ಯಾನಿಟರಿ ಉಪಕರಣಗಳ ರಿಪೇರರ್ಸ ಮೊದಲಾದ ಕೆಲಸಗಳಿಗೆ

ಶನಿ-ಚಂದ್ರರು ಕಾರಕರು. ಶನಿ-ಚಂದ್ರರು ಬಲಾಢ್ಯರಿರದೆ, ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು.

ಸ್ಥಾನ :— ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಲಗ್ನ ಹಾಗೂ ತೃತೀಯ ಈ ಎರಡೂ ಸ್ಥಾನಗಳು ಕಾರಕವಿರುತ್ತವೆ, ಆದ್ದರಿಂದ ಲಗ್ನ-ಲಗ್ನೇಶ, ತೃತೀಯ-ತೃತಿಯೇಶರು ಬಲಾಢ್ಯರಿರಬೇಕಾಗುತ್ತದೆ.

ಲಗ್ನ:- ಲಗ್ನ ದೃಷ್ಟಿಯಿಂದ ಪರಶೀಲಿಸಿದರೆ ಮೇಷ, ವೃಷಭ, ಕರ್ಕ, ತುಲಾ, ವೃಶ್ಚಿಕ, ಮಕರ, ಈ ಲಗ್ನಗಳು ಪೂರಕವಿರುತ್ತವೆ.

ರಾಶಿ: ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಸಿಂಹ, ವೃಶ್ಚಿಕ, ಧನು, ಮಕರ, ಕುಂಭ ಈ ರಾಶಿಗಳು ಪೂರಕವಿರುತ್ತವೆ.

**೪) ವಾಚ ರಿಪೇರಿಯರ ವೃತ್ತಿ :**

ವಾಚ-ಗಡಿಯಾರ-ಟಾಯಿಪೀಸ-ರಿಪೇರಿಯರ ವೃತ್ತಿಯು ಮೆಕ್ಯಾನಿಕಲ್ ರಿಪೇರಿಯರ ವೃತ್ತಿಯಲ್ಲಿ ಬರುತ್ತಿದ್ದಾಗ್ಯೂ ಕೂಡ ಈ ಕೆಲಸದಲ್ಲಿ ಭಿನ್ನತೆ ಇರುವದರಿಂದ ಇದನ್ನು ಪ್ರತ್ಯೇಕವಾಗಿ ವಿವೇಚಿಸಲಾಗಿದೆ. ಏಕೆಂದರೆ ಈ ಯಂತ್ರಗಳಲ್ಲಿ ಲಿವ್ಹರ, ಮೇನ ಸ್ಪಿಂಗ, ಬ್ಯಾಲನ್ಸ ವ್ಹೀಲು, ಮುಳ್ಳುಗಳು ಮೊದಲಾದವು ಸೂಕ್ಷ್ಮಾತಿ ಸೂಕ್ಷ್ಮವಿರುತ್ತವೆ. ಇಂಥ ಅತಿ ಸೂಕ್ಷ್ಮ ಯಂತ್ರ ಭಾಗಗಳ ದುರಸ್ತಿಯ ಕೆಲಸವೂ ಬಹು ಸೂಕ್ಷ್ಮವಿರುತ್ತದೆ. ಆದುದರಿಂದ ಶನಿ-ಶುಕ್ರ-ಚಂದ್ರರೇ ಕಾರಕ ಗ್ರಹಗಳು. ಹೀಗಾಗಿ ಶನಿ-ಶುಕ್ರ-ಚಂದ್ರರು ಬಲಾಢ್ಯರಿರದೆ ಯಾರೂ ಈ ವೃತ್ತಿಯಲ್ಲಿ ಯಶಸ್ವಿಯಾಗರು.

ಸ್ಥಾನ: — ಸ್ಥಾನ ದೃಷ್ಟಿಯಿಂದ ಪರಿಶೀಲಿಸಿದರೆ ಲಗ್ನ, ತೃತೀಯ, ಚತುರ್ಥ ಸ್ಥಾನಗಳು ಕಾರಕವಿರುತ್ತವೆ. ಏಕೆಂದರೆ ಇವರು ಸ್ವತಃ ಕೆಲಸ ಮಾಡಬೇಕಾಗುವುದರಿಂದ ತೃತೀಯ ಸ್ಥಾನವೇ ಮೂಲ ಹಾಗೂ ಮುಖ್ಯವಿರುತ್ತದೆ. ತೃತೀಯದ ನಂತರ ಲಗ್ನ-ಚತುರ್ಥ ಸ್ಥಾನಗಳನ್ನು ಪರಿಶೀಲಿಸಬೇಕು. ಏಕೆಂದರೆ ವಾಚ ರಿಪೇರಿಯರ ಮುಖ್ಯ ಗುಣಧರ್ಮ

ವೆಂದರೆ ಆತನು ಶಾಂತಚಿತ್ತನೂ ಹಾಗು ಸ್ಥಿರ ಕದಲದ ಒಂದೇ ಜಾಗೆ ಯಲ್ಲಿ ಅನೇಕ ತಾಸುಗಳವರೆಗೆ ಕುಳಿತುಕೊಳ್ಳಬಲ್ಲವನೂ ಇರಬೇಕು. ಅದಕ್ಕಾಗಿ ಲಗ್ನ-ಚತುರ್ಥ ಸ್ಥಾನಗಳೂ ಈ ಸ್ಥಾನಾಧೀಶರೂ ಪೂರಕವಿರಬೇಕು.

ಲಗ್ನ :— ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ಮೇಷ, ವೃಷಭ, ಮಿಥುನ, ಕರ್ಕ, ತುಳಾ, ಮಕರ, ಕುಂಭ ಲಗ್ನಗಳು ಪೂರಕವಾಗಿವೆ.

ರಾಶಿ: — ರಾಶಿ ದೃಷ್ಟಿಯಿಂದ ಪರಿಶೀಲಿಸಿದರೆ ಮಿಥುನ, ತುಳಾ, ಕುಂಭ ರಾಶಿಯವರು, ತದನಂತರ ವೃಷಭ, ಕರ್ಕ, ಕನ್ಯಾ, ಮೀನ ರಾಶಿಯವರು ಈ ವೃತ್ತಿಯಲ್ಲಿ ನಿಷ್ಣಾತರಿರುತ್ತಾರೆ.

೦೦–೮೦

# ೧೦

## ಮಾಲಿಕತ್ವ ವೃತ್ತಿ

ನಗರೀಕರಣ ಬೆಳೆದಂತೆ ಮಾಲಿಕತ್ವವು ಒಂದು ಸ್ವತಂತ್ರ ವೃತ್ತಿಯಂತೆ ಬೆಳೆದಿದೆ. ಈ ವರ್ಗದವರಿಗೆ ಸುಖಿ ವರ್ಗದವರೆಂದು ಕರೆಯಬಹುದು. ಸುಖಿ ವರ್ಗ ಇದು ಯಾವ ಉದ್ಯೋಗವೂ ಅಲ್ಲಾ ಯಾವ ಖಾತೆಯೂ ಅಲ್ಲಾ. ಸಮಾಜದಲ್ಲಿಯೇ ಸುಖಿ ಜೀವನ ಸಾಗಿಸುವ ಸುದೈವಿಗಳ ವರ್ಗವೆಂದೇ ಹೇಳಬಹುದು. ಈ ವರ್ಗಕ್ಕೆ ಸುಖಿ ವರ್ಗವೆಂದು ಕರೆಯಬಹುದು. ಬಹು ವಿಸ್ತೃತವಾದ ವಿಶಾಲಾರ್ಥದಲ್ಲಿ ಮಾಲಿಕತ್ವವೂ ಒಂದು ಬಗೆಯ ಜೀವನ ವೃತ್ತಿಯೆಂದೂ ಕರೆಯಬಹುದು. ಇಂಥ ವಿಶಿಷ್ಟ ವೃತ್ತಿಯವರ, ವರ್ಗದವರ ಕಾರಕ ಗ್ರಹಗಳಾವವು, ಅವರ ಜಾತಕ ಹೇಗಿರುತ್ತದೆ ಎಂಬುದನ್ನು ಪರಿಶೀಲಿಸುವಾ.

**ಮಾಲಿಕತ್ವ ವೃತ್ತಿಯಲ್ಲಿಯ ಪ್ರಕಾರಗಳು :**

ಸುಖೀವರ್ಗದವರ, ಇಲ್ಲವೆ ಮಾಲಕತ್ವ ವೃತ್ತಿಯವರ ಕಾರಕ ಗ್ರಹಾದಿಗಳು ಯಾವವು ಎಂಬುದನ್ನು ತಿಳಿಯುವ ಮೊದಲು ಸುಖೀ ವರ್ಗದವರಲ್ಲಿಯ, ಮಾಲಕ ವೃತ್ತಿಯಲ್ಲಿಯ ಪ್ರಕಾರಗಳನ್ನು ತಿಳಿಯುವುದು ಅವಶ್ಯವು. ವಿಭಿನ್ನ ಪ್ರಕಾರದ ಮಾಲಿಕತ್ವ ವೃತ್ತಿಗೆ ವಿಭಿನ್ನ ಗ್ರಹ ಸ್ಥಾನಾದಿಗಳು ಕಾರಕವಿರುತ್ತವೆ. ಆದುದರಿಂದ ಮೊದಲು ಮಾಲಕ ವೃತ್ತಿಯ ಪ್ರಕಾರಗಳನ್ನು ತಿಳಿಯುವಾ.

ಮಾಲಕ ವೃತ್ತಿಯಲ್ಲಿ ಅನೇಕ ಪ್ರಕಾರಗಳಿದ್ದರೂ ಸಹ ಮುಖ್ಯವಾದ ನಾಲ್ಕು ವರ್ಗದ ಮಾಲಕತ್ವ ವೃತ್ತಿಯವರ ವಿಷಯವಾಗಿ ಮಾತ್ರ ಇಲ್ಲಿ ವಿವೇಚಿಸಲಾಗಿದೆ. ಅವುಗಳೆಂದರೆ,

(೧) ಕಟ್ಟಡಗಳ ಮಾಲಕತ್ವ ವೃತ್ತಿ.

(೨) ವಾಹನಗಳ ಹಾಗೂ ಮಶಿನರಿಗಳ ಮಾಲಿಕತ್ವ ವೃತ್ತಿ.

(೩) ಬಡ್ಡಿ ವ್ಯವಹಾರದ (ಸಾಹುಕಾರಿ) ವೃತ್ತಿ

(೪) ತೋಟ-ಗದ್ದೆ-ಹೊಲಗಳ ಮಾಲಿಕತ್ವದ ವೃತ್ತಿ.

ಈ ನಾಲ್ಕು ಪ್ರಕಾರದ ಮಾಲಿಕತ್ವ ವೃತ್ತಿಗೆ ಭಿನ್ನ ಭಿನ್ನ ಗ್ರಹ ಲಗ್ನ ಸ್ಥಾನಗಳು ಕಾರಕವಿರುತ್ತವೆ.

**(೧) ಕಟ್ಟಡಗಳ ಮಾಲಿಕತ್ವ ವೃತ್ತಿ**

ಔದ್ಯೋಗೀಕರಣವು ದ್ರುತಗತಿಯಿಂದ ಸಾಗಿರುವುದು ನಗರಗಳಲ್ಲಿ. ಆದುದರಿಂದ ಜೀವನ ಸಾಗಿಸಲು ಅವಶ್ಯವಾದ ಉದ್ಯೋಗಾವಕಾಶಗಳನ್ನು ಹುಡುಕುತ್ತಲಿ ಹಳ್ಳಿಗರು ಪಟ್ಟಣಗಳಿಗೇ ಧಾವಿಸುತ್ತಾರೆ. ಇದರಿಂದ ಎಲ್ಲೆಡೆಯಲ್ಲೂ ಜನಸಂಖ್ಯೆ ಸ್ಫೋಟವಾಗುತ್ತಿದೆ. ಇಂತು ಪಟ್ಟಣಗಳಲ್ಲಿ ಜನಸಂಖ್ಯೆ ವಿಪರೀತ ಬೆಳೆದಿದೆ. ವಾಸದ ಕಟ್ಟಡಗಳ ಅಭಾವವಂತೂ ಹೇಳತೀರದಷ್ಟು. ಹೀಗಾಗಿ ಗೃಹ ರಹಿತರ ಸಂಖ್ಯೆಯು ನಗರಗಳಲ್ಲಿ ಹೇರಳವಾಗಿರುತ್ತದೆ, ಅನೇಕ ಗೃಹಗಳನ್ನು, ಹೋಟೆಲುಗಳನ್ನು (ಟಾಕು) ಅಂಗಡಿಗಳನ್ನು ನಾಟಕ-ಸಿನೇಮಾ ಮಂದಿರಗಳ ಟಾಕೀಜಗಳ ಕಟ್ಟಡಗಳನ್ನು ಕಟ್ಟಿಸಿ, ಅವುಗಳ ಉತ್ಪನ್ನದಿಂದ ಜೀವನ ನಡೆಸುವುದು ಒಂದು ವೃತ್ತಿಯಂತಾಗಿದೆ. ಮದುವೆ-ಮುಂಜಿ-ಸಭೆ--ಸಮಾರಂಭ ಮೊದಲಾದ ಕಾರ್ಯಕ್ರಮಗಳಿಗಾಗಿ ಕಲ್ಯಾಣ ಮಂಟಪ ಕಟ್ಟಿಸಿ ಅದರ ಆ ಉತ್ಪನ್ನದಿಂದ ಜೀವನ ನಡೆಸುವ ಹೊಸ ಜೀವನ ಶೈಲಿ ಈಗ ಪ್ರಾರಂಭವಾಗಿದೆ. ಮನೆ ಮಾಲಿಕರಾಗುವದು ಕಟ್ಟಡದ ಮಾಲಿಕರಾಗುವುದು ಒಂದು ಬಗೆಯ ಹೊಸ ವೃತ್ತಿಯಾಗಿದೆ. ಇದಕ್ಕೆ ಪೂರಕವೂ ಸಮಾಂತರವೂ ಆದ ಇನ್ನೊಂದು ಸಂಗತಿಯೆಂದರೆ "ಲಾಡ್ಜ" ನಡೆಸುವುದು. ಪರಸ್ಥಳಗಳಿಂದ ನಗರಗಳಿಗೆ ವ್ಯಾಪಾರ-ವಾಣಿಜ್ಯ-ಉದ್ಯೋಗ-ಕಚೇರಿ ಮೊದಲಾದ ಕೆಲಸಕ್ಕೆ ಬರುವ ಪ್ರಯಾಣಿಕರಿಗೆ ತಂಗಲು ವಸತಿ ಸೌಕರ್ಯ ಅವಶ್ಯವಾಗಿದೆ. ಅದುವೇ ನಗರಗಳಲ್ಲಿ ಲಾಡ್ಜ ನಡೆಸುವುದು ವಿಶಿಷ್ಟ ವೃತ್ತಿಯಾಗಿದ್ದು

ಇದು ಕೂಡ ಕಟ್ಟಡಗಳ ಮಾಲಿಕತ್ವ ವೃತ್ತಿಯಲ್ಲಿಯೇ ಬರುತ್ತದೆ.

## ೨) ವಾಹನಗಳ ಹಾಗು ಮಶಿನರಿಗಳ ಮಾಲಿಕತ್ವ ವೃತ್ತಿ

ಟ್ರಕ್ಕು, ಕಾರು ( ಟ್ಯಾಕ್ಸಿ ), ರಿಕ್ಷಾ, ಟೆಂಪೋ, ಸ್ಟೋನಕ್ರಶರ, ಕಾಂಕ್ರೀಟ ಮಿಕ್ಸರ, ಗಿರಿಣಿ-ಕಾರಖಾನೆ ಮೊದಲಾದ ಪ್ರಯಾಣಿಕರ ಸಾರಿಗೆಯ ವಾಹನಗಳನ್ನು, ಸಾಮಗ್ರಿ ವಾಹನಗಳನ್ನು, ಯಂತ್ರ-ಮಶಿನರಿಗಳನ್ನು ಬೇರೆಯವರಿಗೆ ಬಾಡಿಗೆಯಿಂದ ದುಡಿಸಲು ಕೊಟ್ಟು ಆ ಬಾಡಿಗೆ ಹಣದಿಂದ ಜೀವನ ಸಾಗಿಸುವವರ ವಾಹನ-ಮಶಿನರಿಗಳ ಮಾಲಿಕತ್ವ ವೃತ್ತಿಯು ಎರಡನೆಯ ಪ್ರಕಾರದ್ದು.

## ೩) ಸುಖಿ ವರ್ಗದವರು

ಧನವಂತನು ತನ್ನ ಹಣದಿಂದ ಹಣವನ್ನು ಹೆಚ್ಚಿಗೆ ಬೆಳಸುತ್ತಾನೆ. ಅಂಚೇ ಕಚೇರಿ ಇಲ್ಲವೆ ಬ್ಯಾಂಕುಗಳಲ್ಲಿ ಹಣವನ್ನು ಠೇವಣಿಯಾಗಿ ತೊಡಗಿಸಿ ಇಲ್ಲವೆ ಯಾವುದೊಂದು ಕಂಪನಿಯಲ್ಲಿ ಶೇರು ತೆಗೆದುಕೊಂಡು ಇಲ್ಲವೆ ಕಂಪನಿಯಲ್ಲಿ ಹಣ ತೊಡಗಿಸಿ ಬರುವ ಬಡ್ಡಿಯಿಂದ ಇಲ್ಲವೆ ಡಿಬೆಂಚರ -ಬೊನಸ್ಸದಿಂದ ಇಲ್ಲವೆ ಅಡಚಣಿಯದ್ದಂಥವರಿಗೆ ಬಡ್ಡಿಯಿಂದ ಸಾಲ ಕೊಟ್ಟು ಸಾವುಕಾರಿ ವೃತ್ತಿಯಿಂದ ಜೀವನೋಪಾಯ ವೃತ್ತಿ ಕೈಕೊಳ್ಳುವ ಸುಖೀ ಜೀವನ ವರ್ಗದವರು ಇವರು.

## ೪) ತೋಟ ಗದ್ದೆ ಹೊಲಗಳ ಮಾಲಿಕತ್ವ ವೃತ್ತಿ

ಗ್ರಾಮ-ಪಟ್ಟಣಗಳಲ್ಲಿ ರೈತ ಬೇಸಾಯಗಾರಿಗೆ ತೋಟ-ಗದ್ದೆ-ಹೊಲಗಳನ್ನು ಊಳಲು ಕೊಟ್ಟು ಅದರ ಮುಖಾಂತರವೇ ಚರಿತಾರ್ಥವನ್ನು ಸಾಗಿಸುವವರು ನಾಲ್ಕನೆ ವರ್ಗದವರು. ಭೂಸುಧಾರಣೆ ಕಾಯಿದೆಯಿಂದ ಈ ವೃತ್ತಿ ಕಡಿಮೆಯಾಗಿದ್ದರೂ ಸಂಪೂರ್ಣ ಹೋಗಿಲ್ಲ.

ಹೀಗೆ ಈ ನಾಲ್ಕು ಪ್ರಕಾರದ ಮಾಲಿಕತ್ವ ವೃತ್ತಿಯ ಕಾರಕ ಗ್ರಹಗಳಾವವು ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ:** — ಈ ನಾಲ್ಕು ತರಹದ ಸುಖೀವರ್ಗದವರು ಅರ್ಥಾತ್ ಮಾಲಿಕ ವೃತ್ತಿಯವರು ಸಾಮಾನ್ಯವಾಗಿ ಜನ್ಮತಃ ಸುಖಿ

ಗಳಾಗಿರುವುದರಿಂದ ರವಿ-ಚಂದ್ರ-ಮಂಗಳ-ಗುರು-ಶುಕ್ರ ಈ ಐದು ಗ್ರಹ ಗಳು ಕಾರಕಗಳು. ಈ ಐದೂ ಗ್ರಹಗಳು ಬಲಾಢ್ಯರಿದ್ದವರೇ ಮಾಲಿಕ ವೃತ್ತಿಯಲ್ಲಿ ಯಶಸ್ವಿಯಾಗುತ್ತಾರೆ.

ಅದರಲ್ಲಿಯೂ ಟ್ರಕ್, ಕಾರು, ರಿಕ್ಷಾ, ಟೆಂಪೋ, ಸ್ಟೋನ ಕ್ರಶರ, ಕಾಂಕ್ರೀಟ ಮಿಕ್ಸರಗಳಂಥ ವಾಹನಗಳನ್ನು ಬೇರೆಯವರಿಗೆ ಬಾಡಿಗೆ ಯಿಂದ ನಡೆಸಲು ಕೊಡುವ ಈ ಮಾಲಿಕ ವರ್ಗದವರಿಗೆ ಶುಕ್ರ-ಚಂದ್ರ-ಮಂಗಳರು ಕಾರಕರು. ಆದ್ದರಿಂದ ಈ ಮೂರೂ ಗ್ರಹಗಳು ಬಲಾಢ್ಯವಿರಲೇ ಬೇಕಾಗುತ್ತದೆ. ಬಲಾಢ್ಯವೆಂದರೆ ರಾಶಿ ಬಲದವರೂ ಸ್ಥಾನ ಬಲದವರೂ ಯೋಗ ಕಾರಕರೂ ಇರಬೇಕು.

ಇದರಂತೆ ಗಿರಣಿ--ಕಾರಖಾನೆಗಳನ್ನು ಬೇರೆಯವರಿಗೆ ಬಾಡಿಗೆ ಯಿಂದ ನಡೆಸಲು ಕೊಡುವ ಈ ಮಾಲಿಕ ವರ್ಗದವರಿಗೆ ರವಿ-ಮಂಗಳ-ಗುರು-ಶುಕ್ರ-ಚಂದ್ರ ಈ ಐದೂ ಗ್ರಹಗಳು ಕಾರಕವಿದ್ದು, ಈ ಐದೂ ಗ್ರಹಗಳು ರಾಶಿಬಲದವರೂ ಸ್ಥಾನ ಬಲದವರೂ ಇರಬೇಕು.

ಇದರಂತೆ ಮನೆ - ಖೋಲಿ-ಚಾಳು ಮೊದಲಾದವುಗಳನ್ನು ಬಾಡಿಗೆ ಯಿಂದ ಕೊಟ್ಟು ಅದರ ಉತ್ಪನ್ನದ ಮೇಲಿಂದ ಉಪಜೀವನ ನಡೆಸುವ ಈ ಮಾಲಿಕ ವರ್ಗದವರಿಗೆ ಶುಕ್ರ- ಚಂದ್ರ-ಗುರುಗಳು ಕಾರಕರಿದ್ದು ಈ ಮೂರೂ ಗ್ರಹಗಳು ಜಾತಕನ ಕುಂಡಲಿಯಲ್ಲಿ ರಾಶಿಬಲದವೂ ಸ್ಥಾನ ಬಲ-ದವೂ ಇರಬೇಕು.

ಇದರಂತೆ ಅನೇಕ ಖೋಲಿಗಳ ಚಾಳ - ಲಾಜಂಗ- ಕಾಂಪ್ಲೆಕ್ಸ ವಹಿಡಿ ಬಾಡಿಗೆ ನಡೆಸುವ ಈ ಮಾಲಿಕ ವರ್ಗದವರಿಗೆ ಶುಕ್ರ-ಚಂದ್ರ -ರವಿ-ಗುರುಗಳು ಕಾರಕರು. ಇಂಥಾ ಈ ನಾಲ್ಕು ಗ್ರಹಗಳು ರಾಶಿ ಬಲದವರೂ ಸ್ಥಾನಬಲದವರೂ ಇರಬೇಕು.

ಇದರಂತೆ ಕಲ್ಯಾಣ ಮಂಟಪಗಳನ್ನು ಕಟ್ಟಿಸಿ ಮದುವೆ-ಮುಂಜಿ ಮೊದಲಾದ ಮಂಗಳ ಕಾರ್ಯಗಳಿಗೂ ಸಾರ್ವಜನಿಕ ಕಾರ್ಯಕ್ರಮ ಗಳಿಗೂ ಬಾಡಿಗೆ ಕೊಟ್ಟು ಅದರಿಂದ ಉಪಜೀವಿಸುವ ವರ್ಗದವರಿಗೆ

ಶುಕ್ರ, ಚಂದ್ರ, ಗುರುಗಳು ಕಾರಕರಿದ್ದು, ಈ ಮೂರೂ ಗ್ರಹಗಳು ರಾಶಿ ಬಲದವರೂ ಸ್ಥಾನ ಬಲದವರೂ ಇರುತ್ತಾರೆ.

ಇದರಂತೆ ಸಿನೇಮಾ (ಟಾಕೀಜ), ನಾಟಕಗಳ ರಂಗ ಮಂದಿರ ಗಳನ್ನು ಕಟ್ಟಿಸಿ ಅವುಗಳನ್ನು ಬೇರೆಯವರಿಗೆ ಕೊಟ್ಟು ಅದರಿಂದ ಉಪ ಜೀವನ ಕೈಕೊಳ್ಳುವವರಿಗೆ ಶುಕ್ರ, ಚಂದ್ರ, ರವಿ, ಮಂಗಳ ಈ ನಾಲ್ಕು ಗ್ರಹಗಳೇ ಕಾರಕವಿದ್ದು ಈ ಗ್ರಹಗಳು ರಾಶಿ ಬಲದವರೂ ಸ್ಥಾನ ಬಲ ದವರೂ ಇರುತ್ತಾರೆ.

ಇದರಂತೆ ಬ್ಯಾಂಕ, ಅಂಚೆ ಕಚೇರಿ, ಖಾಸಗಿ ಫಾಯನಾನ್ಸ ಕಾರ್ಪೋರೇಶನ, ಬೇರೆ ಕಂಪನಿಗಳಲ್ಲಿ ಶೇರು, ಠೇವು ಮೊದಲಾದ ರೀತಿ ಯಿಂದ ಹಣ ತೊಡಗಿಸಿ ಅದರಿಂದ ಬರುವ ಬಡ್ಡಿ-ಡಿವಿಡೆಂಡ-ಡಿಬೆಂಚರ ಗಳಿಂದ ಉಪಜೀವನ ನಡೆಸುವ ಸುಖಿ ವರ್ಗದವರಿಗೆ ಚಂದ್ರ-ಶುಕ್ರ-ರವಿ-ಗುರುಗಳು ಬಲಾಢ್ಯರಿರುತ್ತಾರೆ. ಅಂದರೆ ಈ ನಾಲ್ಕು ಗ್ರಹಗಳು ರಾಶಿ ಬಲದವರೂ ಸ್ಥಾನ ಬಲದವರೂ ಇರುತ್ತಾರೆ.

ಇದರಂತೆ ತೋಟ, ಗದ್ದೆ, ಹೊಲಗಳನ್ನು ಬೇರೆಯವರಿಗೆ ತೋಂಡಿ ಕೋರ-ಲಾವಣಿ ಕೊಟ್ಟು ಹೆಸರಿಗಾಗಿ ಮಾತ್ರ ಅರ್ಥಾತ್ ಸ್ವಂತ ಎಂಟ್ರಿಗಾಗಿ ಮಾತ್ರ ಹೊಲದ ಯಾವತ್ತೂ ಸಾಗುವಳಿ ಕೆಲಸವನ್ನು ರೈತರಿಂದಲೇ ಮಾಡಿಸಿ ಉಪಜೀವನ ಸಾಗಿಸುವ ಸುಖಿ ವಸ್ತುವರ್ಗದವರಿಗೆ ಗುರು-ಶುಕ್ರ- ಚಂದ್ರ ಕಾರಕರಿರುತ್ತಾರೆ. ಹಾಗೂ ಈ ಮೂರೂ ಗ್ರಹಗಳು ಬಲಾಢ್ಯವಿರುತ್ತವೆ.

ಮೇಲೆ ಬರೆದ ನಾಲ್ಕು ಪ್ರಕಾರದ ಮಾಲಕ ವರ್ಗದವರಿಗೆ, ಸುಖೀ ವರ್ಗದವರಿಗೆ ಶುಕ್ರ-ಚಂದ್ರರು ಬಲಾಢ್ಯರಿರಬೇಕು.

**ಕಾರಕ ಸ್ಥಾನ :--** ಈ ತರಹದ ಸುಖೀ ವರ್ಗದವರು ಸುದೈವಿ ಗಳಿರುವುದರಿಂದ ಆ ವ್ಯಕ್ತಿಗೆ ಸುಖ ಸ್ಥಾನವೇ ಕಾರಕವು. ಆದುದ

ರಿಂದ ಚತುರ್ಥ ಸ್ಥಾನ, ಚತುರ್ಥೇಶ ಬಲಾಢ್ಯರಿರದೆ ಯಾರೂ ಮೇಲೆ ಬರೆದ ಯಾವುದೇ ಪ್ರಕಾರದ ಮಾಲಿಕ ವೃತ್ತಿಯಲ್ಲಿ ಸುಖೀವರ್ಗದವರಾಗ ಲಾರರು. ಸುಖ ಸ್ಥಾನದ ನಂತರ ಮಾಲಿಕ ವರ್ಗದವರಿಗೆ ಪೂರಕ ಸ್ಥಾನವೆಂದರೆ ಭಾಗ್ಯ ಸ್ಥಾನವೇ. ಏಕೆಂದರೆ ಈ ಪ್ರಕಾರದ ಮಾಲಿಕ ವರ್ಗದವರಿಗೆ ಭಾಗ್ಯ ಸ್ಥಾನ ಬಲಾಢ್ಯವಿರುತ್ತದೆ. ಆದ್ದರಿಂದ ಭಾಗ್ಯ ಸ್ಥಾನ-ಭಾಗ್ಯೇಶರು ಬಲಾಢ್ಯರಿರಬೇಕು. ಚತುರ್ಥ, ನವಮಗಳ ನಂತರ ಲಗ್ನ (ತನು), ಪಂಚಮ ಸ್ಥಾನಗಳು ಕಾರಕವಿರುತ್ತವೆ. ಆದ್ದರಿಂದ ಲಗ್ನ; ಲಗ್ನೇಶ, ಚತುರ್ಥ-ಚತುರ್ಥೇಶ, ಪಂಚಮ--ಪಂಚಮೇಶ, ಭಾಗ್ಯ-ಭಾಗ್ಯೇಶ ಈ ಎಂಟು ಸಂಗತಿಗಳು ಪೂರಕವಿದ್ದವರೇ ಮಾಲಿಕ ವೃತ್ತಿಯವರಾಗಲಿ, ಸುಖಿ ವರ್ಗದವರಾಗಲಿ ಇರುತ್ತಾರೆ.

ಅದರಲ್ಲಿಯೂ ಲಂಚ, ಬ್ಯಾಂಕ ಕಂಪನಿಗಳಲ್ಲಿ ಹಣ ತೊಡಗಿಸಿ ಇಲ್ಲವೆ ಶೇರುಗಳನ್ನು ಕೊಂಡು ಅವುಗಳಿಂದ ಬರುವ ಡಿವೆಂಚರ, ಡಿವಿಡೆಂಡ, ಬಡ್ಡಿಗಳಿಂದ ಉಪಜೀವನ ಕೈಕೊಳ್ಳುವವರಿಗೆ ಚತುರ್ಥ, ಪಂಚಮ ಸ್ಥಾನಗಳು ಕಾರಕವಿದ್ದು ಚತುರ್ಥೇಶ,ಪಂಚಮೇಶರೂ ಬಲಾಢ್ಯರಿರುತ್ತಾರೆ.

ಅದರೆ ಮನೆ, ಖೋಲಿ, ಅಂಗಡಿಗಳನ್ನು ಬಾಡಿಗೆ ಕೊಟ್ಟು ಇಲ್ಲವೆ ಲಾಜಿಂಗದಿಂದ ಹಣ ಗಳಿಸುವವರಿಗೆ ಚತುರ್ಥ, ಭಾಗ್ಯ ಸ್ಥಾನಗಳು ಕಾರಕವಿರುತ್ತವೆ. ಹಾಗೂ ಈ ಸ್ಥಾನಾಧೀಶರು ಬಲಾಢ್ಯರಿರುತ್ತಾರೆ.

ಇದರಂತೆ ಸಿನೇಮಾ, ನಾಟಕ ಮಂದಿರಗಳನ್ನು ಗಿರಣಿ, ಕಾರಖಾನೆಗಳನ್ನು ಬಾಡಿಗೆಯಿಂದ ಕೊಡುವ ಮಾಲಿಕ ವರ್ಗದವರಿಗೆ ಚತುರ್ಥ, ಭಾಗ್ಯ, ಪಂಚಮ ಸ್ಥಾನಗಳು ಹಾಗೂ ಸ್ಥಾನಾಧೀಶರು ಬಲಾಢ್ಯರಿರುತ್ತಾರೆ.

ಇದರಂತೆ ಟ್ರಕ್, ಟ್ಯಾಕ್ಸಿ (ಕಾರು) ರಿಕ್ಷಾ, ಟೆಂಪೊ, ಸ್ಟೋನ ಕ್ರಶರ, ಕಾಂಕ್ರೀಟ ಮಿಕ್ಸರ ಮೊದಲಾದ ಮಶಿನರಿ ವಾಹನಗಳನ್ನು ಬಾಡಿಗೆ ಕೊಡುವ ಮಾಲಿಕ ವರ್ಗದವರಿಗೆ ಚತುರ್ಥ-ಭಾಗ್ಯ-ಲಗ್ನ ಸ್ಥಾನಗಳು ಕಾರಕವಿದ್ದು ಈ ಸ್ಥಾನಗಳು ಈ ಸ್ಥಾನಾಧೀಶರು ಬಲಾಢ್ಯರಿರುತ್ತಾರೆ.

ಇನ್ನು ಹೊಲ, ಗದ್ದೆ, ತೋಟಗಳನ್ನು ಬೇರೆಯವರಿಗೆ ಉಳಿಮೆಗೆ ಒಪ್ಪಿಸಿ ಉಪಜೀವನ ಸಾಗಿಸುವವರಿಗೆ ಚತುರ್ಥ, ಲಗ್ನ ಸ್ಥಾನಗಳು ಕಾರಕವಿದ್ದು ಈ ಸ್ಥಾನಗಳೂ ಈ ಸ್ಥಾನಾಧೀಶರೂ ಬಲಾಢ್ಯರಿರುತ್ತಾರೆ.

ಲಗ್ನ :— ಲಗ್ನ ದೃಷ್ಟಿಯಿಂದ ನೋಡಿದರೆ ನಿರ್ದಿಷ್ಟ ಲಗ್ನದವರೇ ಈ ಸುಖಿ ವರ್ಗದವರಾಗಲಿ ಮಾಲಿಕ ವ್ಯಕ್ತಿಯಾವರಾಗಲಿ ಇರುತ್ತಾರೆ ಎಂದು ಹೇಳಲು ಬಾರದಿದ್ದರೂ ಮೇಷ, ಕರ್ಕ, ಸಿಂಹ, ತುಲಾ, ವೃಶ್ಚಿಕ, ಧನು, ಮೀನ ಈ ಲಗ್ನದವರೇ ಹೆಚ್ಚಾಗಿರುವುದು ಕಂಡುಬರುತ್ತದೆ.

ರಾಶಿ :— ರಾಶಿ ದೃಷ್ಟಿಯಿಂದ ನೋಡಿದರೆ ನಿರ್ದಿಷ್ಟ ರಾಶಿಯವರೇ ಮೇಲೆ ಬರೆದ ಸುಖೀ ವರ್ಗದವರಾಗಲಿ ಮಾಲಿಕ ವ್ಯಕ್ತಿಯವರಾಗಲಿ ಇರುತ್ತಾರೆಯೆಂದು ಹೇಳುವುದು ಕಠಿಣ. ಆದರೆ ಯಾವುದೇ ವರುಷದ ಯಾವುದೇ ತಿಂಗಳದ ಶುಕ್ಲ ಪಕ್ಷದ ದಶಮಿ ತಿಥಿಯಿಂದ ಕೃಷ್ಣ ಪಕ್ಷದ ಪಂಚಮಿ ತಿಥಿಯವರೆಗೆ ಜನಿಸಿದವರಿರುತ್ತಾರೆ.

ಯೋಗಗಳು

ಮೇಲೆ ಬರೆದ ನಾಲ್ಕು ಪ್ರಕಾರದ ಸುಖೀ ವರ್ಗದವರಿಗೆ ಅರ್ಥಾತ್ ಮಾಲಿಕ ವ್ಯಕ್ತಿಯವರಿಗೆ ಈ ಕೆಳಗೆ ಕಾಣಿಸಿದ ಯೋಗಗಳಿರುವುದು ಕಂಡುಬರುತ್ತಿದೆ.

(೧) ಲಗ್ನ, ಲಗ್ನೇಶ, ಚತುರ್ಥ, ಚತುರ್ಥೇಶ, ಪಂಚಮ, ಪಂಚಮೇಶ, ಭಾಗ್ಯ, ಭಾಗ್ಯೇಶ ಈ ಎಂಟು ಸಂಗತಿಗಳಲ್ಲಿ ಯಾವುದೇ ೫ ಸಂಗತಿಗಳು ಪೂರಕವೂ ಪೋಷಕವೂ ಇರಬೇಕು.

(೨) ಶುಕ್ರ, ಚಂದ್ರ, ರವಿ, ಇಲ್ಲವೆ ಶುಕ್ರ, ಚಂದ್ರ, ಗುರು, ಇಲ್ಲವೆ ಶುಕ್ರ, ಚಂದ್ರ, ಬುಧ ಇವರು ಬಲಾಢ್ಯರಿರುತ್ತಾರೆ.

(೩) ಶುಕ್ರ, ಚಂದ್ರ, ಚತುರ್ಥ ಸ್ಥಾನ, ಚತುರ್ಥೇಶ, ಭಾಗ್ಯ ಸ್ಥಾನ, ಭಾಗ್ಯೇಶ ಈ ಆರು ಸಂಗತಿಗಳಲ್ಲಿ ಯಾವುದೇ ನಾಲ್ಕು ಸಂಗತಿ

ಗಳು ಪೂರಕವಿದ್ದರೂ ಯಶಸ್ವಿ ಸುಖೀವರ್ಗದ ಜೀವನ ಸಾಗಿಸಬಲ್ಲರು.

(೪) ಶನಿ-ಮಂಗಳ, ಶನಿ-ಚಂದ್ರ, ಶನಿ-ರವಿ, ಚಂದ್ರ-ರಾಹು ಇವುಗಳ ಯುತಿಯೋಗ ಪ್ರತಿಯೋಗ ಮೊದಲಾದ ಯಾವದೇ ತರದ ಅಶುಭ ಯೋಗಗಳು ಇವರ ಜಾತಕದಲ್ಲಿ ಇರುವುದಿಲ್ಲ.

(೫) ಇವರ ಜಾತಕದಲ್ಲಿ ಅನೇಕ ಗ್ರಹಗಳು ಸ್ವಗೃಹ ಇಲ್ಲವೆ ಉಚ್ಚ ರಾಶಿಯಲ್ಲಿರುತ್ತವೆ.

oo

# ೧೧

## ರಾಜಕೀಯ-ಸಾಮಾಜಿಕ ಕಾರ್ಯಕರ್ತರ ವೃತ್ತಿ

ಹಿಂದಿನ ರಾಜ-ಮಹಾರಾಜರು-ಸಂಸ್ಥಾನಿಕರು-ನವಾಬರು-ಜಹಗೀರದಾರರು, ದೇಸಾಯಿ-ದೇಶಪಾಂಡೆಯವರು ರಾಜ್ಯಭಾರ-ಆಡಳಿತ ನಡಿಸಿ ಆಳುವ ಕಾಲವೊಂದಿತ್ತು. ಆ ಕಾಲ ಅಳಿದು ಹೋಗಿ ಪ್ರಜಾ (ಜನತಾ) ಪ್ರಭುತ್ವ ತತ್ವದ ಮೇರೆಗೆ ವ್ಯಕ್ತಿ ಸ್ವಾತಂತ್ರ್ಯವಿದ್ದ ಜನತೆ ಆಯ್ಕೆ ಮಾಡಿದ ನೂತನ ಆಡಳಿತ ವರ್ಗವನ್ನು ಕಾಣುವ ಕಾಲ ಇದೀಗ ಬಂದಿದೆ. ಸ್ವಾತಂತ್ರ್ಯೋತ್ತರ ಭಾರತದಲ್ಲಿ ರಾಜಕೀಯ-ಸಾರ್ವಜನಿಕ ಕಾರ್ಯಕರ್ತರದೂ ಸಹ ಒಂದು ವಿಧದ ವೃತ್ತಿಯಂತಾಗಿಯೆ ಬೆಳೆದು ಬಂದಂತಿದೆ.

ಇಂದಿನ ಸಾರ್ವಜನಿಕ ಹಾಗೂ ರಾಜಕೀಯ ಕ್ಷೇತ್ರವನ್ನು ನಿರೀಕ್ಷಿಸಿದರೆ ಅದರಲ್ಲಿ ಕಂಡುಬರುವದೇನೆಂದರೆ, ಹಳ್ಳಿಗಳಲ್ಲಿ ಮಂಡಲ ಪಂಚಾಯತಿ ಸದಸ್ಯರು, ಅಧ್ಯಕ್ಷರು, ಗ್ರಾಮ ಪಂಚಾಯತಿಯ ಸದಸ್ಯರು, ಸರಪಂಚರು, ಸಂಘ-ಸಂಸ್ಥೆಗಳ ಹಾಗೂ ಸಹಕಾರಿ ಸೊಸೈಟಿ ಬ್ಯಾಂಕುಗಳ ಸದಸ್ಯರು, ಅಧ್ಯಕ್ಷರು, ನಗರಗಳಲ್ಲಿಯ ಮುನಿಸಿಪಾಲ್ಟಿ ಸದಸ್ಯರು (ಕೌನ್ಸಿಲರರು) ಅಧ್ಯಕ್ಷರು, ಸ್ಟ್ಯಾಂಡಿಂಗ ಕಮೀಟಿ ಸದಸ್ಯರು, ಚೇರಮನ್ನರು, ಕಾರ್ಪೋರೇಶನಗಳ ಕಾರ್ಪೋರೇಟರರು, ಮೇಯರರು, ಹಾಗೆಯೇ ಒಕ್ಕಲುತನ ಅಭಿವೃದ್ಧಿ ಮಂಡಳಿಗಳ ಸದಸ್ಯರು, ಅಧ್ಯಕ್ಷರು, ರೆಗ್ಯುಲೇಟಿಂಗ್ ಮಾರ್ಕೆಟಿಂಗ ಕಮೀಟಿ ಸದಸ್ಯರು ಅಧ್ಯಕ್ಷರು, ಜಿಲ್ಲಾ ಪರಿಷತ್ತಿನ ಸದಸ್ಯರು ಅಧ್ಯಕ್ಷರು, ವಿವಿಧ ಕಮೀಟಿಗಳ ವಿವಿಧ ಬೋರ್ಡು-ನಿಗಮದ ಕಾರ್ಪೋರೇಶನ್ನಗಳ ಸದಸ್ಯರು ಅಧ್ಯಕ್ಷರು, ಚೇರಮನ್ನ, ಉಪಾಧ್ಯಕ್ಷರು, ಅಲ್ಲದೆ ವಿವಿಧ ಶೈಕ್ಷಣಿಕ ಸಂಸ್ಥೆಗಳ ಸದಸ್ಯರು ಅಧ್ಯಕ್ಷರು, ವ್ಯವಸ್ಥಾಪಕ ಮಂಡಳಿಗಳ, ಕಾರ್ಯಕಾರಿ ಕಮೀಟಿಗಳ ಸದಸ್ಯರು, ವಿಶ್ವ

ವಿದ್ಯಾಲಯಗಳ ಸಿನೇಟ-ಸಿಂಡಿಕೇಟ-ಎಕ್ಯಾಡೆಮಿಕ ಕೌನ್ಸಿಲಗಳ ಸದಸ್ಯರು-ಉಪಕುಲಪತಿಗಳು, ಇದಲ್ಲದೆ ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಸಂಸ್ಥೆಗಳ ಎಕ್ಯಾಡೆಮಿಗಳ ಸದಸ್ಯರು ಅಧ್ಯಕ್ಷರು, ರೋಟರಿ-ಲಾಯನ್ಸ-ಜ್ಯೂನಿಯರ ಚೇಂಬರ ಮೊದಲಾದ ಸೇವಾ ಸಂಸ್ಥೆಗಳ ಸದಸ್ಯರು ಅಧ್ಯಕ್ಷರು, ಇದು ಅಲ್ಲದೆ ಉಚಿತ ಚಿಕಿತ್ಸಾಲಯ-ಹಾಸ್ಟೆಲ-ಬೋರ್ಡಿಂಗಗಳ ಸದಸ್ಯ ಅಧ್ಯಕ್ಷರು, ಧಾರ್ಮಿಕ ಗುಡಿ-ಗುಂಡಾರ-ಮಠ- ಮಾನ್ಯ-ಭಜನಾ ಮಂದಿರಗಳ ಸದಸ್ಯರು, ಹಾಗು ಕಾರ್ಮಿಕ ಸಂಘ ಸಂಸ್ಥೆಗಳ ಸದಸ್ಯರು, ಕಾರ್ಯದರ್ಶಿಗಳು, ಮೂಲಕ ಇಲ್ಲವೆ ಅಧಿಕಾರಿ ಸಂಸ್ಥೆಗಳ ಸದಸ್ಯರು ಅಧ್ಯಕ್ಷರು, ಅಲ್ಲದೆ ವಿಧಾನ ಸಭೆ-ವಿಧಾನ ಪರಿಷತ್ತು-ರಾಜ್ಯಸಭೆ-ಲೋಕಸಭೆಗಳ- ಸದಸ್ಯರು, ರಾಜ್ಯಪಾಲರು, ಉಪ ಸಭಾಪತಿಗಳು, ರಾಜ್ಯಪಾಲರು, ವಿವಿಧ ರಾಜಕೀಯ ಪಕ್ಷಗಳ ಅಧ್ಯಕ್ಷರು, ಕೇಂದ್ರ ಹಾಗೂ ರಾಜ್ಯ ಸರಕಾರಗಳ ಸಚಿವರು ಪಕ್ಷಗಳ ಸದಸ್ಯರು ಅಧ್ಯಕ್ಷರು ಮೊದಲಾದ ಎಲ್ಲ ವ್ಯಕ್ತಿಗಳು ರಾಜಕೀಯ-ಸಾರ್ವಜನಿಕ ಕಾರ್ಯಕರ್ತರ ವರ್ಗದಲ್ಲಿ ಸೇರ್ಪಡೆಯಾಗುತ್ತಾರೆ. ಈ ವರ್ಗದಲ್ಲಿ ಕೆಲವರು ತಮ್ಮತಮ್ಮ ಸ್ವಂತದ ಉದ್ಯೋಗಾದಿಗಳನ್ನು ಮಾಡುತ್ತಲೇ ಸಾರ್ವಜನಿಕ ಸೇವೆಯನ್ನು ಉಚಿತವಾಗಿ ಮಾಡುತ್ತಿದ್ದರೆ, ಕೆಲವರು ಗೌರವಧನ-ಭತ್ತೆ ಪಡೆದು ಸೇವೆ ಮಾಡುವದುಂಟು. ಆದರೆ ಮತ್ತೆ ಕೆಲವರು ತಾವು ಪೂರ್ಣಾವಧಿ ಸಾರ್ವಜನಿಕ ಕಾರ್ಯಕರ್ತರೆಂದು ಕರೆಸಿಕೊಳ್ಳುತ್ತಾರೆ. ಹಾಗೂ ಅವರು — ಅವರಲ್ಲಿ ಹಲವರು — ತಮ್ಮ ಉಪಜೀವನಕ್ಕಾಗಿ ಬೇರೆ ಉದ್ಯೋಗ ಮಾಡದೆ ಸಾರ್ವಜನಿಕ ಸೇವಾಕಾರ್ಯಕ್ಕಾಗಿಯೇ ಅರ್ಪಿಸಿಕೊಂಡವರು ಇರುತ್ತಾರೆ. ಹೀಗಾಗಿ ರಾಜಕೀಯ - ಸಾಮಾಜಿಕ ಸೇವೆಯೂ ಒಂದು ಬಗೆಯ ವೃತ್ತಿಯಾಗಿ ಬೆಳೆದಿದೆ.

ಸ್ವಾಭಾವಿಕವಾಗಿ ಈ ವಿವಿಧ ಕ್ಷೇತ್ರಗಳಲ್ಲಿ ವಿವಿಧ ಹುದ್ದೆಗಳಲ್ಲಿರುವ ಇವರ ಕಾರ್ಯ ವ್ಯಾಪ್ತಿಯಲ್ಲಿ ಮುಖ್ಯವಾಗಿ ಸಾರ್ವಜನಿಕರೊಂದಿಗೆ ನಿಕಟಸಂಪರ್ಕವಿದ್ದೇ ಇರುತ್ತದೆ. ಹಾಗೂ ಆಡಳಿತದಲ್ಲಿರುವ ಅಧಿಕಾರಿಗಳೊಡನೆ ತಮ್ಮ ಹುದ್ದೆಗಳಿಗನುಸಾರ ಧೋರಣೆಗಳನ್ನು ರೂಪಿಸುವುದು, ಅವುಗಳನ್ನು ಕಾರ್ಯರೂಪದಲ್ಲಿ ತರಲು ಹಚ್ಚುವುದು ವಿವಿಧ ಖಾತೆಗಳಲ್ಲಿಯ ನೌಕರರೊಂದಿಗೆ ಸಂಬಂಧವಿರಿಸಿಕೊಳ್ಳುವುದು ಇವೇ ಮೊದ

ಲಾದ ಕೆಲಸಗಳಿರುತ್ತವೆ. ಒಂದು ದೃಷ್ಟಿಯಿಂದ ಇವರು ಸಾಮಾನ್ಯ ಕಾರ್ಯಕರ್ತರೂ ಹೌದು, ಜನತೆಯನ್ನು ಸರಕಾರವನ್ನು ಆಳುವ ಉಚ್ಚ ಅಧಿಕಾರಸ್ಥರೂ ಹೌದು, ಏಕೆಂದರೆ ಇವರು ತಮ್ಮ ಕಾರ್ಯ ಕ್ಷೇತ್ರ ದಲ್ಲಿ ತಮ್ಮ ಮನಸ್ಸಿಗೆ ಬಂದ ಅಧಿಕಾರ ಚಲಾಯಿಸಬಲ್ಲರು. ಇದಲ್ಲದೆ ಹೊಸದಾಗಿ ಖಾತೆಗಳನ್ನು ಹುದ್ದೆಗಳನ್ನು ನಿರ್ಮಿಸುವುದು, ನೌಕರದಾರರ ವರ್ಗಾವಣೆ, ನೌಕರರಿಗೆ ಬಡತಿ ಕೊಡುವುದರಲ್ಲಿ ಸಹಾಯ, ಹೊಸದಾಗಿ ನೌಕರಿ ಹುದ್ದೆ ಕೊಡಿಸುವಿಕೆ, ವ್ಯಾಪಾರಸ್ಥರಿಗೆ, ಉದ್ಯಮದಾರರಿಗೆ ಲೈಸನ್ಸ-ಪರ್ಮಿಟ ನೀಡಿಕೆ ಮೊದಲಾದ ಅನೇಕ ಕೆಲಸಗಳನ್ನು ಮಾಡಿಸಿ ಕೊಡುವದಿರುತ್ತದೆ.

ಹೀಗಾಗಿ ರಾಜಕೀಯ-ಸಾರ್ವಜನಿಕ ಕಾರ್ಯಕರ್ತರಿಗೆ ಸ್ವಾತಂತ್ರ್ಯದ ನಂತರ ಬಹಳ ಮಹತ್ವ ಬಂದಿದೆ. ಅಂತೆಯೇ ಅನೇಕರು ಒಂದೊಂದು ಪ್ರಕಾರದ ರಾಜಕೀಯ ಸಾರ್ವಜನಿಕ ಕಾರ್ಯಕರ್ತರಾಗಲು ಹವಣಿಸುತ್ತಾರೆ. ಆದರೆ ಎಲ್ಲರಿಗೂ ಇದು ಸಾಧಿಸದು. ಆದ್ದರಿಂದ ಫಲ ಜ್ಯೋತಿಷ್ಯದ ಪ್ರಕಾರ ರಾಜಕೀಯ ಸಾರ್ವಜನಿಕ ಕಾರ್ಯಕರ್ತರಾಗಲು ಜಾತಕ ಹೇಗಿ ರುತ್ತದೆ, ಕಾರಕ ಗ್ರಹ ಲಗ್ನ ಸ್ಥಾನ ರಾಶ್ಯಾದಿಗಳು ಯಾವವು ಎಂಬುದನ್ನು ಪರಿಶೀಲಿಸುವಾ.

ರಾಜಕೀಯ ಸಾರ್ವಜನಿಕ ಕಾರ್ಯಕರ್ತರಾಗಲು ಕಾರಕ ಗ್ರಹ ಯಾವು ದೆಂಬುದನ್ನು ತಿಳಿಯುವ ಮೊದಲು ರಾಜಕೀಯ-ಸಾರ್ವಜನಿಕ ಕಾರ್ಯ ಕರ್ತಗಳಲ್ಲಿಯ ಪ್ರಕಾರಗಳನ್ನು ತಿಳಿಯುವುದು ಅವಶ್ಯ. ಏಕೆಂದರೆ ರಾಜ ಕೀಯ-ಸಾರ್ವಜನಿಕ ಕಾರ್ಯಕರ್ತರಲ್ಲಿ ಅನೇಕ ಪ್ರಕಾರಗಳಿವೆ. ಒಂದು ಕ್ಷೇತ್ರ ದಲ್ಲಿ ಯಶಸ್ವಿಯಾಗಬಲ್ಲ ಜಾತಕನು ಇನ್ನೊಂದರಲ್ಲಿ ಯಶಸ್ವಿಯಾಗಲಾರ. ಅಲ್ಲದೆ ಇಂದು ರಾಜಕಾರಣವು ಹಿಂದಿನದಕ್ಕಿಂತ ವಿಸ್ತೃತವೂ ಆಗಿರುವುದರಿಂದ ಅನೇಕ ಗ್ರಹಗಳು ಕಾರಕವಿರುತ್ತವೆ. ಇದೂ ಅಲ್ಲದೆ ವಿಭಿನ್ನ ಪ್ರಕಾರದ ರಾಜ ಕಾರಣಗಳಿಗೆ ವಿಭಿನ್ನ ಗ್ರಹಗಳು ಕಾರಕವಿರುತ್ತವೆ. ಆದುದರಿಂದ ಮೊದಲು ರಾಜಕೀಯ -- ಸಾರ್ವಜನಿಕ ಕಾರ್ಯಕರ್ತರಲ್ಲಿಯ ವಿವಿಧ ಪ್ರಕಾರಗಳನ್ನು ಪರಿಶೀಲಿಸುವಾ.

**ರಾಜಕೀಯ-ಸಾಮಾಜಿಕ ಕಾರ್ಯಕರ್ತರಲ್ಲಿಯ ಪ್ರಕಾರಗಳು**

ರಾಜಕೀಯ - ಸಾಮಾಜಿಕ ಕಾರ್ಯಕರ್ತರಲ್ಲಿ ಅನೇಕ ಪ್ರಕಾರಗಳಿದ್ದು ಅವುಗಳಲ್ಲಿ ಮುಖ್ಯವಾಗಿರುವ ೫ ಪ್ರಕಾರದ ರಾಜಕಾರಣಿಗಳ ವಿಷಯವಾಗಿ ಮಾತ್ರ ಇಲ್ಲಿ ವಿವರಿಸಲಾಗಿದೆ.

೧) ರಾಜ್ಯ ಹಾಗೂ ರಾಷ್ಟ್ರ ಮಟ್ಟದ ರಾಜಕಾರಣಿಗಳು
೨) ಸ್ಥಾನಿಕ ಹಾಗೂ ಸಹಕಾರ ಸಂಸ್ಥೆಗಳ ರಾಜಕಾರಣಿಗಳು
೩) ಶೈಕ್ಷಣಿಕ ಹಾಗೂ ಸಂಘ-ಸಂಸ್ಥೆಗಳ ರಾಜಕಾರಣಿಗಳು
೪) ಧಾರ್ಮಿಕ ವೃತ್ತಿ - ಸೇವಾ ಸಂಸ್ಥೆಗಳ ರಾಜಕಾರಣಿಗಳು
೫) ಕಾರ್ಮಿಕ ಸಂಘಸಂಸ್ಥೆಗಳ ಹಾಗೂ ಮಾಲಕ ವರ್ಗಗಳ ಧುರೀಣರು

ಹೀಗೆ ರಾಜಕಾರಣಿಗಳಲ್ಲಿ ಹಾಗೂ ರಾಜಕೀಯ-ಸಾಮಾಜಿಕ ಕಾರ್ಯಕರ್ತರಲ್ಲಿ ವೈವಿಧ್ಯತೆಯಿರುವುದರಿಂದ ವಿಶಿಷ್ಟ ಪ್ರಕಾರದ ರಾಜಕೀಯ-ಸಾಮಾಜಿಕ ಕಾರ್ಯಕರ್ತರಿಗೆ ವಿಶಿಷ್ಟ ಗ್ರಹಗಳು ಕಾರಕವಿರುತ್ತವೆ. ಆದುದರಿಂದ ಯಾವ ಪ್ರಕಾರದ ರಾಜಕಾರಣಿಗಳಿಗೆ ಯಾವ ಯಾವ ಗ್ರಹಗಳು ಕಾರಕವಿರುತ್ತವೆ ಎಂಬುದನ್ನು ಪರಿಶೀಲಿಸುವಾ.

**ಕಾರಕ ಗ್ರಹ:—** ಯಾವುದೇ ಪ್ರಕಾರದ ರಾಜಕೀಯ-ಸಾಮಾಜಿಕ ಕಾರ್ಯಕರ್ತರಿರಲಿ ರಾಜಕಾರಣಿ ಇರಲಿ ರಾಜಕೀಯಕ್ಕೆ ಕಾರಕ ಗ್ರಹವೆಂದರೆ ರವಿಯು. ಆತ ಬಲಾಢ್ಯನಿರದೆ ಯಾರೂ ಯಾವುದೇ ಪ್ರಕಾರದ ರಾಜಕಾರಣಿಯಾಗಲಾರರು. ಏಕೆಂದರೆ ಜನಸಾಮಾನ್ಯರಲ್ಲಿ ಪ್ರೀತಿ-ವಿಶ್ವಾಸ ಹೊಂದಲು ರವಿಯು ಬಲಾಢ್ಯನಿರಲೇಬೇಕು. ಅದರಲ್ಲಿಯೂ ವಿಧಾನ ಸಭೆ-ವಿಧಾನ ಪರಿಷತ್ತು-ರಾಜ್ಯಸಭೆ-ಲೋಕ ಸಭೆಗಳಂಥ ರಾಜ್ಯ ಹಾಗೂ ರಾಷ್ಟ್ರಮಟ್ಟದ ಧುರೀಣರಾಗಲು ರಾಜಕೀಯ ಪಕ್ಷಗಳಿಗೆ ಗೌರವಾಸ್ಪಿತ ಸದಸ್ಯರಾಗಲು ಸ್ಥಾನ-ಮಾನ ಅಧಿಕಾರ ಹೊಂದಲು ರವಿಯು ಬಲಾಢ್ಯನಿರಲೇಬೇಕು. ಬಲಾಢ್ಯನೆಂದರೆ ರಾಶಿಬಲದವನೂ, ಸ್ಥಾನ ಬಲದವನೂ ಇರಬೇಕು.

ಇದರಂತೆ ಮಂಡಲ ಪಂಚಾಯತಿ, ಜಿಲ್ಲಾ ಪರಿಷತ್‌ಗಳ ಸದಸ್ಯರು, ಮುನಿಸಿಪಾಲ್ಟಿಗಳ ಕೌನ್ಸಿಲರರು ಕಾರ್ಪೋರೇಶನಗಳ ಕಾರ್ಪೋರೇಟರ ಮೊದಲಾದ ಸ್ಥಾನಿಕ ಸಂಸ್ಥೆಗಳ ಗೌರವಾನ್ವಿತ ಸದಸ್ಯರಾಗಲಿ ಅಧ್ಯಕ್ಷ, ಉಪಾಧ್ಯಕ್ಷ, ಚೇರಮನ,ವ್ಹಾಯಿಸ ಚೇರಮನ,ಮೇಯರ ಮೊದಲಾದ ಸ್ಥಾನ ಮಾನ ಅಧಿಕಾರ ಹೊಂದಲು ರವಿಯ ಸಂಗಡ ಶನಿಯ ಬಲಾಬಲವನ್ನು ಪರಿಶೀಲಿಸಬೇಕು. ಆದರೆ ರವಿಯು ರಾಶಿಬಲದವನೂ ಸ್ಥಾನಬಲದವನೂ ಇದ್ದರೆ ಶನಿಯು ಕೇವಲ ರಾಶಿಬಲದವನಿದ್ದರೆ ಸಾಕು.

ಇದರಂತೆ ವಿಶ್ವವಿದ್ಯಾಲಯಗಳ ಸಿನೇಟ, ಸಿಂಡಿಕೇಟ ಎಕ್ಯಾಡೆಮಿಕ ಕೌನ್ಸಿಲಗಳ ಹಾಗೂ ಶಿಕ್ಷಣ ಸಂಸ್ಥೆಗಳ ಸದಸ್ಯರು ವ್ಯವಸ್ಥಾಪಕ ಮಂಡಳಗಳ ಅಧ್ಯಕ್ಷ, ಉಪಾಧ್ಯಕ್ಷ, ಕಾರ್ಯಾಧ್ಯಕ್ಷ, ಚೇರಮನ, ಕಾರ್ಯದರ್ಶಿ ಇವೇ ಮೊದಲಾದ ಶೈಕ್ಷಣಿಕ ಸಂಸ್ಥೆಗಳ ಪದಾಧಿಕಾರಿಯಾಗಲು, ಧುರೀಣರಾಗಲು ರವಿಯ ಸಂಗಡ ಗುರುವಿನ ಬಲಾಬಲವನ್ನು ಪರಿಶೀಲಿಸಬೇಕು. ಏಕೆಂದರೆ ಇಲ್ಲಿ ಶಿಕ್ಷಣದ ಪ್ರಗತಿಯ ಸಂಬಂಧವೇ ಮುಖ್ಯವಿರುತ್ತದೆ. ಇಲ್ಲಿಯೂ ಅಷ್ಟೇ, ರವಿಯು ರಾಶಿ ಬಲದವನೂ ಸ್ಥಾನ ಬಲದವನೂ ಇದ್ದರೆ ಗುರುವು ಕೇವಲ ರಾಶಿ ಬಲದವನು ಇದ್ದರಾಯಿತು.

ಇದರಂತೆ ಸಹಕಾರ ಹಾಗೂ ಮಾರ್ಕೆಟಿಂಗ ಕಮೀಟಿಗಳ, ಸಂಘ-ಸಂಸ್ಥೆ-ಸೊಸೈಟಿ ಬ್ಯಾಂಕುಗಳ, ಕೃಷಿ ಅಭಿವೃದ್ಧಿ ಸಂಸ್ಥೆಗಳ ಇವೇ ಮೊದಲಾದ ಸಂಸ್ಥೆಗಳ ಸದಸ್ಯರು ಹಾಗೂ ಅಧ್ಯಕ್ಷ-ಚೇರಮನ್ ಮೊದಲಾದ ಎಲ್ಲ ಬಗೆಯ ಗೌರವಾನ್ವಿತ ಹುದ್ದೆಗಳಿಗೆ ರವಿಯ ಸಂಗಡ ಶನಿ-ಬುಧರನ್ನು ಪರಿಶೀಲಿಸಬೇಕು. ಇಲ್ಲಿಯೂ ಅಷ್ಟೇ, ರವಿಯು ರಾಶಿಬಲದವನೂ ಸ್ಥಾನ ಬಲದವನೂ ಇದ್ದರೆ ಶನಿ ಬುಧರು ಕೇವಲ ರಾಶಿ ಬಲದವರಿದ್ದರೆ ಸಾಕು.

ಇದರಂತೆ ಲಾಯನ್ಸ, ರೋಟರಿಗಳಂಥ ಸೇವಾ ಸಂಸ್ಥೆಗಳ ಸದಸ್ಯರು ಗೌರವಾನ್ವಿತ ಅಧ್ಯಕ್ಷರು, ಉಪಾಧ್ಯಕ್ಷರು, ಕಾರ್ಯದರ್ಶಿಗಳು ವ್ಯವಸ್ಥಾಪಕ ಮಂಡಳಗಳ ಸದಸ್ಯ ಮೊದಲಾದವುಗಳಿಗೆ ರವಿಯ ಸಂಗಡ ಗುರು-ಶುಕ್ರ-ಚಂದ್ರರ ಬಲಾಬಲವನ್ನು ಪರಿಶೀಲಿಸಬೇಕು. ಇಲ್ಲಿಯೂ

ಅಷ್ಟೇ, ರವಿಯು ರಾಶಿ ಬಲದವನೂ ಸ್ಥಾನ ಬಲದವನೂ ಇದ್ದರೆ ಗುರು-ಶುಕ್ರ-ಚಂದ್ರರು ಕೇವಲ ರಾಶಿ ಬಲದವರಿರುತ್ತಾರೆ.

ಇದರಂತೆ ಚೇಂಬರ ಆಫ್ ಕಾಮರ್ಸ್, ವಾಣಿಜ್ಯ ಸಂಸ್ಥೆಗಳ ಅಧ್ಯಕ್ಷ-ಕಾರ್ಯಾಧ್ಯಕ್ಷ, ಕಾರ್ಯದರ್ಶಿಗಳಂಥ ಗೌರವಾನ್ವಿತ ಸ್ಥಾನ ಪಡೆಯಲು ರವಿಯ ಸಂಗಡ ಬುಧನನ್ನು ಪರಿಶೀಲಿಸಬೇಕು. ರವಿಯು ರಾಶಿಬಲದವನೂ ಸ್ಥಾನ ಬಲದವನಿದ್ದರೆ ಬುಧನು ಕೇವಲ ರಾಶಿಬಲದವನಿರಬಹುದು.

ಇದರಂತೆ ಸಾಹಿತ್ಯ, ನಾಟಕ, ಲಲಿತ ಕಲೆ ಮೊದಲಾದ ಸಾಂಸ್ಕೃತಿಕ ಹಾಗೂ ಸಾಹಿತ್ಯ, ಲಲಿತಕಲಾ ಎಕ್ಯಾಡೆಮಿಗಳ ಅಧ್ಯಕ್ಷ ಸದಸ್ಯ ಸ್ಥಾನ ಪಡೆಯಲು ರವಿಯ ಸಂಗಡ ಶುಕ್ರ-ಬುಧ-ಚಂದ್ರರನ್ನು ಪರಿಶೀಲಿಸಬೇಕು. ರವಿಯು ರಾಶಿ-ಸ್ಥಾನ ಬಲದವನಿದ್ದರೆ ಬುಧ-ಶುಕ್ರ-ಚಂದ್ರರು ಕೇವಲ ರಾಶಿ ಬಲದವರಿದ್ದರಾಯಿತು.

ಇದರಂತೆ ಗುಡಿ-ಗುಂಡಾರ-ಮಠ-ಪಠಾಣ್ಯ-ಭಜನಾ ಮಂಡಳಗಳಂಥ ಧಾರ್ಮಿಕ ಸಂಸ್ಥೆಗಳ ಅಧ್ಯಕ್ಷ, ಕಾರ್ಯದರ್ಶಿ, ಚೇರಮನಗಳಂಥ ಗೌರವ ಸ್ಥಾನ ಹೊಂದಲು ರವಿಯ ಸಂಗಡ ಗುರುವಿನ ಬಲಾಬಲವನ್ನೂ ಪರಿಶೀಲಿಸಬೇಕು. ಇಲ್ಲಿಯೂ ಅಷ್ಟೇ, ರವಿಯು ರಾಶಿಬಲದವನೂ ಸ್ಥಾನ ಬಲದವನೂ ಇದ್ದರೆ ಗುರುವು ಕೇವಲ ರಾಶಿಬಲದವನಿರಬಹುದು.

ಇದರಂತೆ ಕಾರ್ಮಿಕ ಸಂಘ ಸಂಸ್ಥೆಗಳ ಧುರೀಣರಾಗಲು ಕಾರ್ಮಿಕ ಸಂಘ -- ಸಂಸ್ಥೆಗಳ ಅಧ್ಯಕ್ಷ ಕಾರ್ಯದರ್ಶಿ ಚೇರಮನ ವ್ಯವಸ್ಥಾಪಕ ಮಂಡಳದ ಸದಸ್ಯ ಮೊದಲಾದ ಗೌರವಯುತ ಸ್ಥಾನ ಪಡೆಯಲು ಶನಿಯು ಕಾರಕನು. ಏಕೆಂದರೆ ಕಾರ್ಮಿಕರ ಇಲ್ಲವೆ ನೌಕರರ ಕಲ್ಯಾಣ ಹಾಗೂ ಹಿತ ಸಾಧನೆಯೇ ಮುಖ್ಯ ಧ್ಯೇಯವಿರುವುದರಿಂದ ಶನಿಯು ಕಾರಕನು. ಆದರೆ ಇಲ್ಲಿಯೂ ಅಷ್ಟೆ, ರವಿಯು ರಾಶಿ ಬಲದವನೂ, ಸ್ಥಾನ ಬಲದವನೂ ಇದ್ದರೆ ಶನಿಯು ಕೇವಲ ರಾಶಿ ಬಲದವನಿರುತ್ತಾನೆ.

ಇದರಂತೆ ಮೂಲಕ ವೃತ್ತಿಯವರ, ಅಧಿಕಾರಿಗಳ, ಸಂಘಗಳ ಧುರೀಣರಾಗಲು ರವಿಯೊಂದಿಗೆ ಚಂದ್ರ-- ಮಂಗಳ - ಶುಕ್ರರು ಕಾರಕರಿರುತ್ತಾರೆ. ಇಲ್ಲಿಯೂ ಅಷ್ಟೆ, ರವಿಯು ರಾಶಿಬಲದವನೂ, ಸ್ಥಾನಬಲದವನೂ ಇದ್ದರೆ ಚಂದ್ರ - ಮಂಗಳ - ಶುಕ್ರರು ಕೇವಲ ರಾಶಿಬಲದವರಿರಬಹುದು. ಹೀಗೆ ವಿಭಿನ್ನ ಪ್ರಕಾರದ ರಾಜಕಾರಣಿಗಳಿಗೆ ರಾಜಕೀಯ - ಸಾಮಾಜಿಕ ಕಾರ್ಯಕರ್ತರಿಗೆ ರವಿಯೊಂದಿಗೆ ಉಳಿದ ಗ್ರಹಗಳ ಬಲಾಬಲವನ್ನು ಪರಿಶೀಲಿಸಬೇಕು.

ಸ್ಥಾನ: —ಯಾವುದೇ ಪ್ರಕಾರದ ರಾಜಕೀಯ - ಸಾಮಾಜಿಕ ಕಾರ್ಯಕರ್ತರಿರಲಿ, ರಾಜಕಾರಣಿಗಳಾಗಿರಲಿ, ಮುಖಂಡರಾಗಿರಲಿ, ಧುರೀಣರಾಗಿರಲಿ ರಾಜಕೀಯ ಗೌರವ ಸ್ಥಾನ-ಮಾನ-ಅಧಿಕಾರ ಪಡೆಯಲು ಶಿಕ್ಷಣ, ಪ್ರಭಾವ, ವರ್ಚಸ್ಸು, ಜಾತಿ, ಪಂಥ, ಧನಬಲ ಅರ್ಹತೆಯ ಪರಿಣಾಮವಾಗದೆ ಕೇವಲ ಭಾಗ್ಯದ ಮೇಲೆಯೇ ಹೆಚ್ಚು ಅವಲಂಬಿಸಿರುವದರಿಂದ ಭಾಗ್ಯಸ್ಥಾನವೇ ಕಾರಕ ಸ್ಥಾನವು. ಭಾಗ್ಯಸ್ಥಾನ ಹಾಗೂ ಭಾಗ್ಯೇಶರು ಬಲಾಢ್ಯರಿರದೆ ಯಾರೂ ರಾಜಕೀಯ- ಸಾಮಾಜಿಕ ಕಾರ್ಯಕರ್ತರಾಗಲಾರರು. ಭಾಗ್ಯದ ನಂತರ ದ್ವಿತೀಯ ಸ್ಥಾನವನ್ನು ಪರಿಶೀಲಿಸಬೇಕು. ಏಕೆಂದರೆ ರಾಜಕೀಯ-ಸಾಮಾಜಿಕ ಕಾರ್ಯಕರ್ತರ, ರಾಜಕಾರಣಿಗಳ ಮುಖ್ಯ ಬಂಡವಾಳವೆಂದರೆ ಮಾತುಗಾರಿಕೆ. ಆದುದರಿಂದ ಮಾತುಗಾರಿಕೆಯ ಸ್ಥಾನವಾದ ದ್ವಿತೀಯ ಸ್ಥಾನ ಹಾಗೂ ದ್ವಿತೀಯೇಶರ ಬಲಾಬಲವನ್ನು ಪರಿಶೀಲಿಸಬೇಕು. ಇದಲ್ಲದೆ ವಿವಿಧ ಪ್ರಕಾರದ ರಾಜಕಾರಣಿಗಳಿಗೆ ಭಾಗ್ಯ, ದ್ವಿತೀಯದ ನಂತರ ಉಳಿದ ಸ್ಥಾನಗಳನ್ನು ಪರಿಶೀಲಿಸಬೇಕು. ಉದಾಹರಣೆಗೆ — ಸಿಂಡಿಕೇಟ -ಸಿನೇಟಗಳ ಸದಸ್ಯರಿಗೆ ಭಾಗ್ಯ-ದ್ವಿತೀಯರೊಂದಿಗೆ ಪಂಚಮ ಸ್ಥಾನ, ಪಂಚಮೇಶರ ಬಲಾಬಲವನ್ನು ಪರಿಶೀಲಿಸಬೇಕು.

ಇದರಂತೆ ವಿಧಾನ ಮಂಡಳ ಸಂಸತ್ ಸದಸ್ಯ, ಧುರೀಣ, ಹಾಗೂ ರಾಜಕೀಯ ಪಕ್ಷಗಳ ಧುರೀಣರಾಗಲು ಭಾಗ್ಯ- ದ್ವಿತೀಯದೊಂದಿಗೆ ಲಗ್ನ-ಚತುರ್ಥ-ಪಂಚಮ ಸ್ಥಾನಗಳು ಹಾಗೂ ಈ ಸ್ಥಾನಾಧೀಶರು ಬಲಾಢ್ಯರಿರಬೇಕು.

ಇದರಂತೆ ಮಂಡಳ ಪಂಚಾಯತಿ, ಮುನಸಿಪಾಲ್ಟಿ, ಕಾರ್ಪೋರೇಶನ್, ಜಿಲ್ಲಾ ಪರಿಷತ್ತು, ಸಹಕಾರ--ಮಾರ್ಕೆಟಿಂಗ್ ಸಂಸ್ಥೆ ಮೊದಲಾದವುಗಳ ಸದಸ್ಯರಿಗೂ ಹಾಗೂ ಗೌರವಾನ್ವಿತ ಸ್ಥಾನಮಾನ ಅಧಿಕಾರ ಹೊಂದಲು ಭಾಗ್ಯ - ದ್ವಿತೀಯದೊಂದಿಗೆ ಲಗ್ನ-ಪಂಚಮ-ಚತುರ್ಥ ಸ್ಥಾನಗಳು ಹಾಗೂ ಆ ಸ್ಥಾನಾಧೀಶರು ಬಲಾಢ್ಯರಿರಬೇಕು.

ಲಗ್ನ:—ಲಗ್ನ ದೃಷ್ಟಿಯಿಂದ ಪರಿಶೀಲಿಸಿದರೆ ವಿಧಾನ ಮಂಡಳ, ಸಂಸತ್ತಿನ ಸದಸ್ಯರು, ಸಚಿವರು, ರಾಜ್ಯಪಾಲರು, ರಾಯಭಾರಿಗಳು, ಉಪಕುಲಪತಿಗಳು, ವಿವಿಧ ಮಂಡಲ-ನಿಗಮಗಳ ಅಧ್ಯಕ್ಷರು, ಚೇರಮನ್‌ರು, ಸ್ಥಾನಿಕ ಸಂಸ್ಥೆಗಳ ಅಧ್ಯಕ್ಷ ಚೇರಮನ್, ರಾಜಕೀಯ ಪಕ್ಷಗಳ ಗೌರವಾನ್ವಿತ ಸ್ಥಾನಗಳ, ಕಾರ್ಮಿಕರ ಮುಖಂಡರು ಇವೇ ಮೊದಲಾದ ರಾಜಕಾರಣಿಗಳಿಗೆ ಮೇಷ, ವೃಷಭ, ಕರ್ಕ, ಸಿಂಹ, ವೃಶ್ಚಿಕ, ಧನು ಈ ಲಗ್ನಗಳೇ ಕಾರಕವಿರುತ್ತವೆ. ಇವುಗಳ ನಂತರ ಮಿಥುನ, ಮೀನ ಲಗ್ನಗಳು ಕಾರಕವಿರುತ್ತವೆ.

ರಾಶಿ:— ರಾಶಿ ದೃಷ್ಟಿಯಿಂದ ನೋಡಿದರೆ ನಿರ್ದಿಷ್ಟ ರಾಶಿಯವರೇ ರಾಜಕಾರಣಿಗಳು, ರಾಜಕೀಯ-ಸಾಮಾಜಿಕ ಕಾರ್ಯಕರ್ತರಾಗುವರೆಂದು ಹೇಳಲುಬಾರದು.

ಯೋಗಗಳು : ರಾಜಕೀಯ-ಸಾಮಾಜಿಕ ಕಾರ್ಯಕರ್ತರಿಗೆ ರಾಜಕಾರಣಿಗಳಿಗೆ ಈ ಕೆಳಗೆ ಕಾಣಿಸಿದ ಯೋಗಗಳಿರುವುದು ಕಂಡುಬರುತ್ತದೆ.

೧) ಇವರ ಜಾತಕದಲ್ಲಿ ಅನೇಕ ರಾಜಯೋಗಗಳಿರುತ್ತವೆ.

೨) ಅನೇಕ ಗ್ರಹಗಳು ಸ್ವಗೃಹಿ ಇಲ್ಲದೆ ಉಚ್ಚ ಇಲ್ಲವೆ ಮಿತ್ರ ಕ್ಷೇತ್ರಿ ಇರುತ್ತವೆ.

೩) ಭಾಗ್ಯ-ಭಾಗ್ಯೇಶ, ಚತುರ್ಥ-ಚತುರ್ಥೇಶ, ಲಗ್ನ-ಲಗ್ನೇಶ, ಪಂಚಮ-ಪಂಚಮೇಶ, ದ್ವಿತೀಯ-ದ್ವಿತೀಯೇಶ ಈ ಹತ್ತು ಸಂಗತಿಗಳಲ್ಲಿ ಯಾವುದೇ ಆರು ಸಂಗತಿಗಳು ಹಾಗೂ ರವಿಯು ಪೋಷಕವಿರಬೇಕು.

೪) ಇವರ ಜಾತಕದಲ್ಲಿ ಅನೇಕ ಗ್ರಹಗಳು ಉದಿತ ಗೋಲಾರ್ಧದಲ್ಲಿರುತ್ತವೆ.

೫) ಇವರ ಜಾತಕದಲ್ಲಿ ಪಂಚಮಕ್ಕಿಂತ ದ್ವಿತೀಯವೂ, ದಶಮಕ್ಕಿಂತ ಭಾಗ್ಯವೂ, ಲಗ್ನಕ್ಕಿಂತ ಚತುರ್ಥವೂ ಹೆಚ್ಚು ಬಲಾಢ್ಯವಿರುತ್ತವೆ.

೬) ರವಿ-ಗುರು, ರವಿ-ಮಂಗಳ, ರವಿ-ಚಂದ್ರ, ರವಿ-ಶನಿ ಈ ನಾಲ್ಕು ಜೋಡಿಗಳಲ್ಲಿ ಯಾವುದೇ ಒಂದು ಜೋಡಿ ಬಲಾಢ್ಯವಿದ್ದರೂ ಸಾಕು, ರಾಜಕಾರಣಿಯಾಗಬಹುದು.

೭) ಗ್ರಹಗಳು ಅಸ್ತ-ವಕ್ರೀ - ವೃದ್ಧಾವ್ಯ, ಬಾಲ್ಯಾವಸ್ಥೆಯಲ್ಲಿ ಇರುವುದಿಲ್ಲ.

೮) ಮೇಷ, ಸಿಂಹ, ಧನು ಲಗ್ನ ಲಗ್ನಗಳಿದ್ದು ರವಿ-ಗುರುಗಳು ಲಗ್ನ ಪಂಚಮದಲ್ಲಿದ್ದರೆ,

೯) ಧನು ಲಗ್ನವಿದ್ದು ಭಾಗ್ಯದಲ್ಲಿ ರವಿಯೂ ಲಾಭದಲ್ಲಿ ಶುಕ್ರನೂ ಲಗ್ನದಲ್ಲಿ ಗುರುವೂ ವಿರಾಜಮಾನರಾಗಿದ್ದರೆ,

೧೦) ವೃಶ್ಚಿಕ ಲಗ್ನವಿದ್ದು ದಶಮದಲ್ಲಿ ರವಿಯೂ ಭಾಗ್ಯ-ಸಪ್ತಮ-ಚತುರ್ಥದಲ್ಲಿ ಚಂದ್ರನೂ ಇದ್ದರೆ,

೧೧) ವೃಶ್ಚಿಕ ಲಗ್ನವಿದ್ದು ಭಾಗ್ಯದಲ್ಲಿ ಗುರು-ಚಂದ್ರರು ಹಾಗೂ ದಶಮದಲ್ಲಿ ರವಿ ಇದ್ದರೆ,

೧೨) ಬಲಿಷ್ಠನಾದ ರವಿಯು ಲಗ್ನ-ಚತುರ್ಥ -ಪಂಚಮ - ಭಾಗ್ಯ-ದಶಮಗಳ ಪೈಕಿ ಯಾವುದೊಂದು ಸ್ಥಾನದಲ್ಲಿದ್ದರೆ,

೧೩) ಮಿಥುನ ಲಗ್ನವಿದ್ದು ಭಾಗ್ಯ ಇಲ್ಲವೆ ದಶಮದಲ್ಲಿ ಗುರು - ಶುಕ್ರರ ಯೋಗವಿದ್ದರೆ,

೧೪) ವೃಷಭ ಲಗ್ನವಿದ್ದು ರವಿ-ಶನಿ ಬಲಾಢ್ಯರಿದ್ದರೆ,

೧೫) ಕರ್ಕ ಲಗ್ನವಿದ್ದು ಚಂದ್ರ- ಮಂಗಳ-ಶುಕ್ರರು ಬಲಾಢ್ಯರಿದ್ದರೆ,

೧೬) ಸಿಂಹ ಲಗ್ನವಿದ್ದು ರವಿ–ಮಂಗಳ–ಗುರುಗಳು ಬಲಾಢ್ಯರಿದ್ದರೆ,

೧೭) ತುಲಾ ಲಗ್ನವಿದ್ದು ಶನಿ–ಶುಕ್ರ–ಚಂದ್ರರು ಬಲಾಢ್ಯರಿದ್ದರೆ,

೧೮) ಯಾವುದೇ ಲಗ್ನದ ಯೋಗ ಕಾರಕ ಗ್ರಹಗಳು ಬಲಾಢ್ಯವಿದ್ದರೆ,

೧೯) ಯೋಗ ಕಾರಕ ಗ್ರಹಗಳು ಬಲಾಢ್ಯವಿದ್ದು ಅವರ ದಶೆ–ಅಂತರ ದಶೆ ನಡೆಯುತ್ತಿದ್ದರೆ,

೨೦) ಚುನಾವಣೆ ಸಮಯದಲ್ಲಿ ಸಾಡೇಸಾತಿ ಪಂಚಮಾಷ್ಟಮ ಶನಿ ಇಲ್ಲದಿದ್ದರೆ,

ಹೀಗೆ ಮೇಲೆ ಬರೆದ ೨೦ ಸಂಗತಿಗಳಲ್ಲಿ ಯಾವುದೇ ಒಂದು ಸಂಗತಿ ಪೂರಕವಿದ್ದ ಜಾತಕನು ರಾಜಕೀಯ–ಸಾಮಾಜಿಕ ಕಾರ್ಯಕರ್ತನೆಂದು ರಾಜಕಾರಣಿಯೆಂದು ಗೌರವ ಸ್ಥಾನ ಮಾನ ಅಧಿಕಾರ ಪಡೆಯಬಲ್ಲನು.

ವಿ. ಸೂ. : ರಾಜಕೀಯ – ಸಾಮಾಜಿಕ ಕಾರ್ಯಕರ್ತರ ವಿಷಯವಾಗಿ, ರಾಜಕಾರಣಿಗಳ ಬಗೆಗೆ ನಮ್ಮ "ಚುನಾವಣೆ ಜ್ಯೋತಿಷ್ಯ" ದಲ್ಲಿ ವಿವರ ವಿವರವಾಗಿ ಚರ್ಚಿಸಲಾಗಿದೆ.

೦೦–೦೦

# ೧೨

## ವೃತ್ತಿಗೆ ಸಂಬಂಧಿಸಿದ ಇತರ ವಿಷಯಗಳು

ಯಾವುದೊಂದು ವೃತ್ತಿಯನ್ನು ಪ್ರಾರಂಭಿಸಬೇಕೆನ್ನುವವರಿಗೆ, ಇಲ್ಲವೆ ಪ್ರಾರಂಭಿಸಿದವರಿಗೆ ಕೆಲವೊಂದು ತೊಡಕು-ತೊಂದರೆ-ಸಮಸ್ಯೆಗಳು ಎದುರಾಗುವುದು ಸಹಜ. ಇಲ್ಲವೆ ಕೆಲವೊಮ್ಮೆ ಪರಿಸ್ಥಿತಿಗನುಸಾರ ಹೊಸ ಹೊಸ ಸಮಸ್ಯೆಗಳು ಉದ್ಭವಿಸಬಹುದು. ಆದರೆ ಎಲ್ಲ ವೃತ್ತಿಯವರಿಗೆ ಒಂದೇ ಪ್ರಕಾರದ ತ್ರಾಸ-ತೊಡಕುಗಳಿರುವುದಿಲ್ಲ. ಆದುದರಿಂದ ಯಾವ ಯಾವ ಜಾತಕರು ಯಾವ ಯಾವ ಬಗೆಯ ತ್ರಾಸು-ತೊಡಕುಗಳನ್ನು ಎದುರಿಸಬೇಕಾಗುತ್ತದೆ ಎಂಬುದನ್ನು ತಿಳಿಯುವ ಮೊದಲು ಸಮಸ್ಯೆಗಳಲ್ಲಿಯ ಪ್ರಕಾರಗಳನ್ನು ತಿಳಿದುಕೊಳ್ಳುವುದು ಅವಶ್ಯವು.

**ಸಮಸ್ಯೆಗಳಲ್ಲಿಯ ಪ್ರಕಾರಗಳು :**

ವಿಭಿನ್ನ ಪ್ರಕಾರದ ವೃತ್ತಿಯವರಿಗೆ ವಿಭಿನ್ನ ಪ್ರಕಾರದ ಸಮಸ್ಯೆಗಳಿರುತ್ತವೆ. ಉದಾಹರಣೆ— ಬುದ್ಧಿ ಜೀವಿಗಳ ಸಮಸ್ಯೆ ಒಂದು ತೆರವಾಗಿದ್ದರೆ ಕೃಷಿಕರ ಸಮಸ್ಯೆಗಳೇ ಬೇರೆ ಇರುತ್ತವೆ. ಇದರಂತೆ ಉದ್ಯಮದಾರರ ತೊಡಕು–ತೊಂದರೆ ಒಂದು ಬಗೆಯವಿದ್ದರೆ ವ್ಯಾಪಾರಸ್ಥರವು ಮಗದೊಂದು ವಿಧದವು; ಕಲಾವಿದರ, ರಾಜಕಾರಣಿಗಳವು ಬೇರೆ ಬೇರೆ ಬಗೆಯವು. ಹೀಗೆ ಸಮಸ್ಯೆಗಳು ಸಾವಿರಾರು. ಆದರೆ ಮಹತ್ವದ ೧೧ ಪ್ರಕಾರದ ಸಮಸ್ಯೆಗಳ ಬಗೆಗೆ ಮಾತ್ರ ಇಲ್ಲಿ ಚರ್ಚಿಸಲಾಗಿದೆ.

೧) ಕಾರ್ಮಿಕ ( ನೌಕರ–ಚಾಕರ ) ಸಂಬಂಧದ ಸಮಸ್ಯೆ

೨) ಜಾಗೆಯ ಸಮಸ್ಯೆ

೩) ಯಂತ್ರ - ಮಶಿನರಿಗಳ ಸಮಸ್ಯೆ

೪) ಬಂಡವಾಳದ ಸಮಸ್ಯೆ

೫) ಸರಕಾರ ರಂಗದಿಂದೊದಗುವ ಸಮಸ್ಯೆ

೬) ಹಣಕಾಸು ಒದಗಿಸುವ ಸಂಸ್ಥೆಗಳ ಸಮಸ್ಯೆ

೭) ಕಚ್ಚಾ-ಸಾಮಗ್ರಿ ವಸ್ತುಗಳ ಸಮಸ್ಯೆ

೮, ಉತ್ಪಾದನಾ ಸಮಸ್ಯೆ

೯) ಮಾರಾಟ ಸಮಸ್ಯೆ

೧೦) ಪಾಲುಗಾರರ ಸಮಸ್ಯೆ

೧೧) ಕಳವು –ತುಡುಗ–ಅಪಘಾತಗಳಿಂದಾಗುವ ಹಾನಿ

ಹೀಗೆ ಸ್ವತಂತ್ರ ವೃತ್ತಿಯಲ್ಲಿ ಉದ್ಭವಿಸುವ ೧೧ ಸಮಸ್ಯೆಗಳ ಬಗೆಗೆ ಮಾತ್ರ ಇಲ್ಲಿ ವಿವೇಚಿಸಲಾಗಿದೆ.

ಹೀಗೆ ಸ್ವತಂತ್ರ ವೃತ್ತಿಕೈಕೊಳ್ಳುವವರಿಗೆ ಬೇರೆ ಬೇರೆ ಸಮಸ್ಯೆಗಳಿದ್ದು ಯಾವ - ಯಾವ ಜಾತಕನು ಯಾವ - ಯಾವ ಪ್ರಕಾರದ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ ಎಂಬುದನ್ನು ಪರಿಶೀಲಿಸುವಾ.

೫: **ಕಾರ್ಮಿಕರ ಸಮಸ್ಯೆ** : ನಾವು ಈ ಹಿಂದೆಯೇ ಹೇಳಿದಂತೆ ಯಾವ ವ್ಯಕ್ತಿಯೂ ತನ್ನೆಲ್ಲ ಕೆಲಸ-ಕಾರ್ಯಗಳನ್ನು ತಾನೇ ಮಾಡಿಕೊಳ್ಳಲಾಗದಂಥ ಪರಿಸ್ಥಿತಿ ಇಂದು ನಿರ್ಮಾಣವಾಗಿದೆ. ಕೆಲವು ಸ್ವತಂತ್ರ ವೃತ್ತಿಗಳು ನೌಕರ –ಚಾಕರರ - ಕಾರ್ಮಿಕರ ಸಹಾಯ - ಸಹಕಾರವಿಲ್ಲದೆ ನಡೆಯುವುದಿಲ್ಲ. ಆದರೆ ಇದುವರೆಗೆ ಪರದೇಶದಲ್ಲಿದ್ದ ಕಾರ್ಮಿಕರ ಸಂಘದ ಸಮಸ್ಯೆಗಳು ಭಾರತದಲ್ಲಿಯೂ ಹಬ್ಬಿವೆ. ೧೯೨೬ ರ ನೇ ಇಸವಿಯ ಟ್ರೇಡ ಯುನಿಯನ್ ಕಾಯದೆಗನುಗುಣವಾಗಿ ಕಾರ್ಮಿಕರು ತಮ್ಮ ಸಂಘ ಸಂಸ್ಥೆಗಳನ್ನು ರಚಿಸಿಕೊಂಡು ಅವನ್ನು ರಜಿಸ್ಟರ ಮಾಡಿಸಿ ತಮ್ಮ ತಮ್ಮ ಹಕ್ಕು ಬೇಡ್ಕೆ ಗಳಿಗಾಗಿ ತಮ್ಮ ಆಂತರಿಕ ಒಕ್ಕಟ್ಟಿನ ರಕ್ಷಣೆಗಾಗಿ ಹೋರಾಡುತ್ತಿದ್ದಾರೆ. ಇವರ ಹೋರಾಟ ಇದುವರೆಗೆ ಸರಕಾರಿ ಇಲಾಖೆಗಳ ಹಾಗೂ ದೊಡ್ಡ

ದೊಡ್ಡ ಗಿರಣಿ-ಕಾರಖಾನೆಗಳ ನೌಕರ ರಂಗಕ್ಕೆ ಮಾತ್ರ ಸೀಮಿತವಾಗಿತ್ತು. ಆದರೆ ಇದೀಗ ಸಣ್ಣ ಪುಟ್ಟ ಸ್ವತಂತ್ರ ವೃತ್ತಿಯವರಿಗೂ ತೊಂದರೆಯಾಗ ಹತ್ತಿದೆ. ಆದಾಗ್ಗೂ ಸ್ವತಂತ್ರ ವೃತ್ತಿಯ ಎಲ್ಲರಿಗೂ ಕಾರ್ಮಿಕ ರಂಗದಿಂದ ತೊಂದರೆಯಾಗುವುದಿಲ್ಲ. ಆದುದರಿಂದ ಯಾರಿಗೆ ಕಾರ್ಮಿಕ ರಂಗದಿಂದ ತೊಂದರೆಯಾಗುತ್ತದೆ, ಯಾರಿಗೆ ಆಗುವು ದಿಲ್ಲ ಎಂಬುದರ ವಿವರಣೆ ಕೆಳಗಿನಂತಿದೆ.

೧) ಯಾರ ಜಾತಕದಲ್ಲಿ ಚತುರ್ಥ ಸ್ಥಾನ - ಚತುರ್ಥೇಶ ಬಲಾಢ್ಯ ರಿರುತ್ತಾರೆಯೋ ಅವರಿಗೆ ಎಂದೂ ಕಾರ್ಮಿಕ ರಂಗದಿಂದ ತೊಂದರೆಯಾಗುವುದಿಲ್ಲ.

೨) ಶುಕ್ರ – ಚಂದ್ರರು ಬಲಾಢ್ಯರಿರುವ ಯಾವ ಜಾತಕನಿಗೂ ಎಂದೂ ಕಾರ್ಮಿಕ ರಂಗದ ಮೂಲಕ ತ್ರಾಸ - ತೊಂದರೆ ಯಾಗುವುದಿಲ್ಲ.

೩) ಯಾರ ಜಾತಕದಲ್ಲಿ ಪಾಪ ಗ್ರಹಗಳು ಚತುರ್ಥ–ದಶಮದಲ್ಲಿ ರುವವೋ ಅವರಿಗೆ ಕಾರ್ಮಿಕ ರಂಗದಿಂದ ನಿತ್ಯ ತಲೆಬೇನೆ ಇದ್ದದ್ದೇ.

೪) ಶನಿ–ಮಂಗಳ, ಶನಿ- ಚಂದ್ರ, ಶನಿ - ರವಿ, ಚಂದ್ರ-ರಾಹು, ಈ ಜೋಡಿಗಳ ಯುತಿಯೋಗ – ಪ್ರತಿಯೋಗ - ದೃಷ್ಟಿ ಯೋಗ ಲಗ್ನ, ಚತುರ್ಥ, ದಶಮ, ಷಷ್ಠ ಈ ಸ್ಥಾನಗಳಲ್ಲಿದ್ದ ಜಾತಕನಿಗೆ ಕಾರ್ಮಿಕ ರಂಗದ ಪೀಡೆಯನ್ನೆಲ್ಲ ಪದೇ ಪದೇ ಎದುರಿಸಬೇಕಾಗುತ್ತದೆ.

೫) ರವಿಯು ಬಲಾಢ್ಯನಿರುವ ಜಾತಕನು ಕಾರ್ಮಿಕ ರಂಗದ ತ್ರಾಸ- ತೊಂದರೆಗಳನ್ನು ಎದುರಿಸುವಲ್ಲಿ ಯಶಸ್ವಿಯಾಗುತ್ತಾನೆ.

೬) ಸಾಡೇಸಾತಿ, ಪಂಚಮಾಷ್ಟಮ,ಗೋಚರಿ ಶನಿಯ ಪರಿಭ್ರಮಣ ಕಾಲಕ್ಕೆ ಕಾರ್ಮಿಕರ ಪೀಡೆ - ಕಾಟ ಉಂಟಾಗುತ್ತವೆ.

೭) ಯಾವುದೇ ಲಗ್ನದ ಯೋಗಕಾರಕ ಗ್ರಹಗಳು ಬಲಾಢ್ಯವಿದ್ದು ಯೋಗಕಾರಕ ಗ್ರಹಗಳ ಮಹರ್ದಶೆ ಅಂತರ್ದಶೆಯಲ್ಲಿ

ಕಾರ್ಮಿಕ ತ್ರಾಸ - ತೊಂದರೆ ಉದ್ಭವಿಸುವುದಿಲ್ಲ, ಉದ್ಭವಿಸಿದರೂ ಅವನ್ನು ಯಶಸ್ವಿಯಾಗಿ ಎದುರಿಸಲಾಗುತ್ತದೆ.

**೨. ಜಾಗೆಯ ಸಮಸ್ಯೆ :** ಕೆಲವು ವೃತ್ತಿಗಳನ್ನು ತಾವು ವಾಸಿಸುವ ಮನೆಯಲ್ಲಿಯೇ ನಡಿಸಬಹುದು. ಆದರೆ ಕೆಲವು ವೃತ್ತಿಗಳಿಗೆ ಉದ್ಯಮಗಳಿಗೆ ಪ್ರತ್ಯೇಕವಾದ (ಶೆಡ್) ಸ್ಥಳಗಳಿರುತ್ತವೆ. ಆ ಶೆಡ್‌ಗಳು ಎಲ್ಲರಿಗೂ ಸುಲಭವಾಗಿ ಸಿಗುವುದಿಲ್ಲ. ಅಲ್ಲದೆ ಎಲ್ಲ ಸ್ವತಂತ್ರ ವೃತ್ತಿಯವರೂ ಆಯಾ ಸ್ಥಳಗಳ ಮಾಲಕರಾಗುವುದು ಕೂಡ ಶಕ್ಯವಿಲ್ಲ. ಅಲ್ಲದೆ ಕೆಲವು ಸ್ವತಂತ್ರ ವೃತ್ತಿಯವರಿಗೆ ಜಾಗೆಯ ಮಾಲಕರಿಂದ, ನೆರೆಹೊರೆಯವರಿಂದ ತ್ರಾಸ-ತೊಂದರೆಗಳನ್ನು ಎದುರಿಸಬೇಕಾಗುತ್ತಿದ್ದರೆ, ಕೆಲವು ಸ್ವತಂತ್ರ ವೃತ್ತಿಯವರಿಗೆ ಜಾಗೆಯ ಮಾಲಕರ, ನೆರೆಹೊರೆಯವರ ಸಹಾಯ-ಸಹಕಾರ ಸಿಗುತ್ತದೆ. ಆದ್ದರಿಂದ ಯಾರಿಗೆ ಜಾಗೆಯ ಸಮಸ್ಯೆಯಾಗುತ್ತದೆ, ಯಾರಿಗೆ ಆಗುವುದಿಲ್ಲ ಎಂಬುದನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

೧) ನೌಕರರ ಸಮಸ್ಯೆಗಳಿರುವ ಯೋಗಗಳೇ ಜಾಗೆಯ ಸಮಸ್ಯೆಗಳಿಗೂ ಅನ್ವಯಿಸುತ್ತವೆ. ಅಂದರೆ ಶುಕ್ರ-ಚಂದ್ರರು ಬಲಾಢ್ಯರಿರುವ ಜಾತಕನಿಗೆ ಜಾಗೆಯ ತೊಂದರೆಯಾಗುವುದಿಲ್ಲ.

೨) ಚತುರ್ಥ-ಚತುರ್ಥೇಶ ಬಲಾಢ್ಯವಿರುವ ಜಾತಕನಿಗೆ ಜಾಗೆಯ ಸಮಸ್ಯೆ ಎಂದೂ ಉಂಟಾಗುವುದಿಲ್ಲ.

೩) ರವಿಯು ಬಲಾಢ್ಯನಿರುವ ಜಾತಕನು ಜಾಗೆಯ ಕುರಿತು ತೊಡಕು-ತೊಂದರೆಯನ್ನು ಎದುರಿಸುವಲ್ಲಿ ಯಶಸ್ವಿಯಾಗುತ್ತಾನೆ.

೪) ಆಯಾ ಜಾತಕದ ಯೋಗ ಕಾರಕಗ್ರಹಗಳು ಬಲಾಢ್ಯವಿದ್ದು ಅವುಗಳ ಮಹಾದಶೆ, ಅಂತರ್ದಶೆಯಲ್ಲಿ ಜಾಗೆಯ ಸಮಸ್ಯೆ ಉಂಟಾಗುವುದಿಲ್ಲ.

೫) ಸಾಡೇಸಾತಿ ಪಂಚಮಾಷ್ಟಮ ಶನಿಯ ಗೋಚರಿ ಪರಿಭ್ರಮಣ ಕಾಲಕ್ಕೆ ಜಾಗೆಯ ಕಿರಿಕಿರಿ ಉಂಟಾಗುತ್ತದೆ.

೬) ಶನಿ-ಮಂಗಳ, ಶನಿ-ಚಂದ್ರ, ಶನಿ-ರವಿ, ಚಂದ್ರ-ರಾಹು ಈ

ಜೋಡಿಗಳ ಯುತಿಯೋಗ-ಪ್ರತಿಯೋಗ-ದೃಷ್ಟಿಯೋಗವು ಲಗ್ನ, ಚತುರ್ಥ, ದಶಮ, ಸಪ್ತಮ ಈ ಯಾವದೊಂದು ಸ್ಥಾನದಲ್ಲಿದ್ದ ಜಾತಕನಿಗೆ ಜಾಗೆಯ ಕಿರುಕುಳ ಸದಾ ಇದ್ದೇ ಇರುತ್ತದೆ.

೭) ಜಾತಕದಲ್ಲಿ ಪಾಪಗ್ರಹಗಳು ಚತುರ್ಥದಲ್ಲಿದ್ದರೆ, ಚತುರ್ಥದ ಮೇಲೆ ಪಾಪಗ್ರಹಗಳ ದೃಷ್ಟಿಯಿದ್ದರೆ ಜಾಗೆಯ ಸಮಸ್ಯೆ ಹುಟ್ಟಿಕೊಳ್ಳುತ್ತದೆ.

೩) ಯಂತ್ರ-ಮಶೀನರಿಗಳ ಸಮಸ್ಯೆ : ಕೆಲವು ವೃತ್ತಿಗಳಿಗೆ ಯಂತ್ರ-ಮಶಿನರಿಗಳಿಲ್ಲದೆ ನಡೆಯುವುದಿಲ್ಲ. ಕೆಲವರಿಗೆ ಮಶಿನರಿಗಳ ತೊಂದರೆ ಮೇಲಿಂದ ಮೇಲೆ ಆಗುತ್ತಿದ್ದರೆ ಕೆಲವರಿಗೆ ಮಶಿನರಿಗಳ ತೊಂದರೆ ಎಂದೂ ಆಗುವುದಿಲ್ಲ, ಅದಕ್ಕೇನೇ ಮಶಿನರಿ ಓಮ್ಮ್ ಇದೆ, ಮಶಿನರಿ ಓಮ್ಮ್ ಇಲ್ಲಯೆನ್ನುತ್ತಾರೆ. ಆದುದರಿಂದ ಯಾರಿಗೆ ಯಂತ್ರ-ಮಶಿನರಿಗಳ ಕಿರಿಕಿರಿ ಯಾಗುತ್ತವೆ, ಯಾರಿಗೆ ಇಲ್ಲ ಎಂಬುದರ ವಿವರಣೆ ಈ ಕೆಳಗೆ ನೀಡಲಾಗಿದೆ.

೧) ಯಾರ ಜಾತಕದಲ್ಲಿ ಶನಿ-ಮಂಗಳರು ಬಲಾಢ್ಯರಿರುವರೋ, ಅದರಲ್ಲಿಯೂ ಮಂಗಳನು ಬಲಾಢ್ಯನಿರುವನೋ ಅಂಥವರಿಗೆ ಮಶಿನರೀ ಬಾಬಿನ ತೊಂದರೆಯಾಗುವದಿಲ್ಲ.

೨) ಶನಿ-ಮಂಗಳರ ಯುತಿಯೋಗ-ಪ್ರತಿಯೋಗ-ದೃಷ್ಟಿಯೋಗ ಯಾವುದೇ ಸ್ಥಾನದಲ್ಲಿದ್ದರೂ ಮಶಿನರಿ ಕಿರುಕುಳ ಬಹಳ. ಅದರಲ್ಲಿಯೂ ಶನಿ ದೃಷ್ಟಿತ ಮಂಗಳ ಲಗ್ನ, ಚತುರ್ಥ ದಶಮ, ಸಪ್ತದಲ್ಲಿದ್ದರಂತೂ ಮಶಿನರಿ ಬಾಬಿನ ತ್ರಾಸ ಹೇಳ ತೀರದು.

೩) ಶನಿ - ಮಂಗಳರ ಯುತಿಯೋಗ-ಪ್ರತಿಯೋಗ ಲಗ್ನ-ಸಪ್ತಮ -ಚತುರ್ಥ-ದಶಮದಲ್ಲಿದ್ದವರು ಮಶಿನರಿ ಕೆಲಸಕ್ಕೆ ಇಲ್ಲವೆ ಮಶಿನರಿಯೇ ಮುಖ್ಯವಿರುವ ವೃತ್ತಿಗೆ ಕೈಹಾಕಬಾರದು.

೪) ಯೋಗಕಾರಕ ಗ್ರಹಗಳು ಬಲಾಢ್ಯವಿದ್ದು ಅವುಗಳ ಮಾರ್ಗದರ್ಶಿ,

ಅಂತರ್ದಶೆ ನಡೆಯುತ್ತಿರುವ ಸಮಯದಲ್ಲಿ ಮಶಿನರಿ ಸಮಸ್ಯೆ ಉಂಟಾಗದು.

೫) ಸಾಡೇಸಾತಿ ಪಂಚಮಾಷ್ಟಮ ಶನಿಯ ಗೋಚರಿ ಭ್ರಮಣದ ಕಾಲಕ್ಕೆ ಮಶಿನರಿ ಬಾಜಿನಿಂದ ತಲೆಶೂಲೆ ಹೆಚ್ಚು.

೬) ಮಂಗಳನು ದುರ್ಬಲನಿರುವ ಜಾತಕನಿಗೆ ಮಶಿನರಿ ತೊಂದರೆ ಇದ್ದೇ ಇರುತ್ತದೆ.

೪. ಬಂಡವಾಳ ಸಮಸ್ಯೆ : ಯಾವುದೇ ಸ್ವತಂತ್ರ ವೃತ್ತಿ ಕೈಕೊಳ್ಳುವವರು ಪ್ರಾರಂಭಿಕವಾಗಿ ತುಸು ಬಂಡವಾಳನ್ನಾದರೂ ತೊಡಗಿಸಲೇಬೇಕಾಗುತ್ತದೆ. ಬರಿಗೈಯಿಂದ ಮೊಳ ಹಾಕಬರುವುದಿಲ್ಲ. ಬಂಡವಾಳದ ಪ್ರಮಾಣದಂತೆ ಉದ್ಯೋಗದ ಕ್ಷೇತ್ರವನ್ನು ಆಯ್ದುಕೊಳ್ಳಬೇಕಾಗುತ್ತದೆ. ಹೆಚ್ಚು ಬಂಡವಾಳ ತೊಡಗಿಸುವುದು ಸುದೈವಿಗಳಿಗೆ ಮಾತ್ರ ಸಾಧ್ಯವಾಗುತ್ತದೆ. ಆದುದರಿಂದ ಯಾರು ನಿರಾಯಾಸವಾಗಿ ಬಂಡವಾಳ ತೊಡಗಿಸಬಲ್ಲರು, ಯಾರಿಗೆ ಬಂಡವಾಳ ತೊಡಗಿಸಲು ತೊಂದರೆಯಾಗುತ್ತದೆ ಎಂಬುದರ ವಿವರಣೆ ಈ ಕೆಳಗಿನಂತಿದೆ.

೧) ಲಗ್ನ-ಲಗ್ನೇಶ, ಚತುರ್ಥ--ಚತುರ್ಥೇಶ, ಪಂಚಮ-ಪಂಚಮೇಶ,ಭಾಗ್ಯ-ಭಾಗ್ಯೇಶ ಈ ಎಂಟು ಸಂಗತಿಗಳಲ್ಲಿ ಐದು ಸಂಗತಿಗಳಾದರೂ ಪೂರಕವಿದ್ದ ಜಾತಕನಿಗೆ ಬಂಡವಾಳ ತೊಡಗಿಸುವುದು ತೊಂದರೆಯಾಗುವದಿಲ್ಲ. ಆದರೆ ಕೇವಲ ಮೂರು ಸಂಗತಿಗಳು, ಅದಕ್ಕಿಂತಲೂ ಕಡಿಮೆ ಅಂಶವಿರುವ ಜಾತಕನಿಗೆ ಬಂಡವಾಳ ತೊಡಗಿಸುವುದೇ ಕಠಿಣವಾಗುತ್ತದೆ.

೨) ಶುಕ್ರ-ಚಂದ್ರ -ಗುರುಗಳಲ್ಲಿ ಯಾವುದೇ ಎರಡು ಗ್ರಹಗಳು ಬಲಾಢ್ಯವಿರುವ ಜಾತಕನಿಗೆ ಬಂಡವಾಳ ತೊಡಗಿಸುವುದೇನೂ ಕಠಿಣವಾಗುವದಿಲ್ಲ.

೩) ಸಾಡೇಸಾತಿ ಹಾಗೂ ಪಂಚಮಾಷ್ಟಮ ಗೋಚರಿ ಶನಿಯ ಪರಿಭ್ರಮಣದಲ್ಲಿ ಬಂಡವಾಳ ತೊಡಗಿಸುವುದು ಕಷ್ಟಕರವಾಗುತ್ತದೆ.

೪) ಯೋಗಕಾರಕ ಗ್ರಹಗಳು ಬಲಾಢ್ಯವಿದ್ದು ಅವುಗಳ ದಶಾ-ಅಂತರ್ದಶಾದಲ್ಲಿ ಬಂಡವಾಳ ತೊಡಗಿಸುವುದಕ್ಕೆ ತೊಂದರೆ ಯಾಗುವದಿಲ್ಲ.

**೫. ಸರಕಾರದಿಂದಾಗುವ ಸಮಸ್ಯೆಗಳು :** ಯಾವುದೊಂದು ವೃತ್ತಿಯನ್ನು ಕೈಕೊಳ್ಳುವವರಿಗೆ ಸರಕಾರದಿಂದ ಅನೇಕ ಬಗೆಯ ಸಹಾಯ- ಸಹಕಾರ ಬೇಕಾಗುತ್ತದೆ. ವೃತ್ತಿ ಕೈಕೊಳ್ಳಲು ಅನುಮತಿ, ಸ್ಥಳ, ಲಾಯಿಸೆನ್ಸ್, ಪರ್ಮಿಟ, ಕೋಟಾ, ಸಾಮುಗ್ರಿ, ರಿಯಾಯತಿ ದರದಲ್ಲಿ ವಿದ್ಯುತ್ ಪೂರೈಕೆ, ವರಮಾನ ತೆರಿಗೆ, ವ್ಯಾಪಾರ ತೆರಿಗೆ, ಅಬಕಾರಿ ತೆರಿಗೆ, ಲೇಬರ ಆ್ಯಕ್ಟ-ಕಂಪನಿ ಆಕ್ಟ ಆಚರಣೆ ಮೊದಲಾದ ಅನೇಕ ಕೆಲಸಗಳು ಸರಕಾರದಿಂದಲೇ ಆಗಬೇಕಾಗುತ್ತಿವೆ. ಕೆಲವರಿಗೆ ಸರಕಾರದಿಂದ ಸಹಕಾರ - ಸಹಾಯ-ಸೌಕರ್ಯ-ಅನುಮತಿ ಮೊದಲಾದ ಕೆಲಸಗಳು ಸುಲಭವಾಗಿ ಕೈಗೂಡುತ್ತಿದ್ದರೆ ಕೆಲವರಿಗೆ ಆ ಬಾಬಿನಿಂದ ತ್ರಾಸಾಗುತ್ತದೆ. ಯಾರು, ಹೇಗೆ ಎಂಬುದನ್ನು ಪರಿಶೀಲಿಸುವಾ.

೧) ರವಿಯು ಬಲಾಢ್ಯನಾಗಿದ್ದ ವ್ಯಕ್ತಿಗಳಿಗೆ ಸರಕಾರದಿಂದ ಸಾಕಷ್ಟು ಸಹಾಯ-ಸಹಕಾರ-ಸೌಲಭ್ಯ ಸಿಗುತ್ತವೆ. ಇವರಿಗೆ ಸರಕಾರದಿಂದ ತೊಂದರೆ ಎಂದೂ ಆಗುವುದಿಲ್ಲ.

೨) ರವಿಯು ಬಲಾಢ್ಯನಿದ್ದ ಜಾತಕನು ಸುಮ್ಮನಿಯೇ ಇದ್ದು ಆತನಿಗೆ ಸಹಾಯ ಮಾಡಲು ಸರಕಾರದವರೇ ಬೆನ್ನು ಹತ್ತುತ್ತಾರೆ. ಮಂಗಳನು ಬಲಾಢ್ಯನಿದ್ದ ಜಾತಕನು ಸ್ವ-ಸಾಮರ್ಥ್ಯದಿಂದಲೂ, ಸತತ ಪರಿಶ್ರಮದಿಂದಲೂ ಸರಕಾರದ ಸಹಾಯ ಪಡೆಯುತ್ತಾನೆ.

೩) ಗುರುವು ಬಲಾಢ್ಯನಿದ್ದ ವ್ಯಕ್ತಿಗಳಿಗೆ ಸರಕಾರದಲ್ಲಿರುವ ಅಧಿಕಾರಿಗಳಿಂದ ಖಾತೆಯ ವರಿಷ್ಠರಿಂದ ಸಹಾಯ ಲಭಿಸುತ್ತದೆ.

೪) ಬುಧನು ಬಲಾಢ್ಯನಿದ್ದ ವ್ಯಕ್ತಿಯು ತನ್ನ ಹಣದ ಬೆಂಬಲದಿಂದ ಕಾರ್ಯ ಮಾಡಿಕೊಳ್ಳುತ್ತಾನೆ.

೫) ಶನಿ-ಚಂದ್ರ-ಶುಕ್ರರು ಬಲಾಢ್ಯರಿದ್ದ ವ್ಯಕ್ತಿಗಳ, ಸೇವಾ ಮನೋ ವೃತ್ತಿಯಿಂದ ಕೆಲಸ ಮಾಡಿಸಿಕೊಳ್ಳುತ್ತಾರೆ.

೬) ಜಾತಕದಲ್ಲಿ ಯೋಗಕಾರಕ ಗ್ರಹಗಳು ಬಲಾಢ್ಯವಿದ್ದು ಅವು ಗಳ ದಶೆ-ಅಂತರ್ದಶೆಯಲ್ಲಿ ಸರಕಾರದಿಂದ ಸಹಾಯ ಸಿಗುತ್ತದೆ.

೭) ಸಾಡೇಸಾತಿ ಹಾಗೂ ಪಂಚಮಾಷ್ಟಮ ಶನಿಯ ಪರಿಭ್ರಮಣ ದಲ್ಲಿ ಸರಕಾರದಿಂದ ತೊಂದರೆಗಳನ್ನು ಎದುರಿಸಬೇಕಾಗುತ್ತದೆ.

೮) ಲಗ್ನ-ಲಗ್ನೇಶ, ಚತುರ್ಥ-ಚುತುರ್ಥೇಶ, ಭಾಗ್ಯ - ಭಾಗ್ಯೇಶ ಈ ಆರು ಸಂಗತಿಗಳಲ್ಲಿ ಯಾವುದೇ ನಾಲ್ಕು ಸಂಗತಿಗಳು ಪೂರಕವಿದ್ದರೆ ಸರಕಾರದಿಂದ ಸಹಾಯ ಸಿಗುತ್ತದೆ.

೬. ಹಣ ಒದಗಿಸುವ ಸಂಸ್ಥೆಗಳಿಂದ ಸಮಸ್ಯೆಗಳು : ಯಾವು ದೊಂದು ಸ್ವತಂತ್ರ ವೃತ್ತಿ ಕೈಕೊಳ್ಳುವವರಿಗೆ ತಮ್ಮ ಸ್ವಂತ ಬಂಡವಾಳ ವಲ್ಲದೆ ಸರಕಾರದಿಂದಲೂ ಸುಲಭ ಬಡ್ಡಿಯ ಸಾಲ ಹಾಗೂ ಸಹಾಯಧನ ಸಬ್‌ಸಿಡಿ ವನ್ನು ಪಡೆಯಬೇಕಾಗುತ್ತದೆ. ಕೆಲವೊಮ್ಮೆ ಖಾಸಗಿ ವ್ಯಕ್ತಿ ಗಳಿಂದ ಹೆಚ್ಚಿನ ಬಡ್ಡಿದರದಿಂದ ಸಾಲ ತರಬೇಕಾಗುತ್ತದೆ. ಅಲ್ಲದೆ ಹೆಚ್ಚಿನ ಬಡ್ಡಿ ದರದಿಂದ ಸಾಲ ತೀರಿಸಬೇಕಾಗುತ್ತದೆ. ಅಲ್ಲದೆ ಕೆ.ಎಫ್ ಸಿ., ಸಹಕಾರಿ ಬ್ಯಾಂಕ, ರಾಷ್ಟ್ರೀಕರಣ ಆದ/ಆಗದ ಬ್ಯಾಂಕ, ಫೈನಾನ್ಸ ಕಾರ್ಪೊರೇಶನ ಅಲ್ಲದೆ ವಿಶಿಷ್ಟ ಉದ್ಯೋಗಕ್ಕಾಗಿಯೇ ನಿರ್ಮಿತವಾದ ಹಣಕಾಸಿನ ಸಂಸ್ಥೆಗಳು ಇವೇ ಮೊದ ಲಾದವುಗಳಿಂದ ಸಾಲವನ್ನು ತರಬೇಕಾಗುತ್ತದೆ. ಕೆಲ ವ್ಯಕ್ತಿಗಳಿಗೆ ಸಾಲ ಸುಲಭವಾಗಿ ಸಿಗುತ್ತದೆಯಲ್ಲದೆ ಕಡಿಮೆ ಬಡ್ಡಿ, ಸಬ್‌ಸಿಡಿ, ಸುಲಭ ಕಂತು ಮೊದಲಾದ ರಿಯಾಯತಿ ಪಡೆಯುತ್ತಾರೆ. ಕೆಲ ವ್ಯಕ್ತಿಗಳಿಗೆ ಸಾಲ ಸಿಗು ವುದೇ ಕಠಿಣ; ಸಿಕ್ಕರೂ ತಜಬಿಜಿ ಬಹಳ; ಅಲ್ಲದೆ ಹೆಚ್ಚಿನ ಬಡ್ಡಿ ತೆತ್ತ ಬೇಕಾಗುತ್ತದೆ. ಇದೂ ಅಲ್ಲದೆ ಮರು ಪಾವತಿಗಾಗಿ ತಗಾದೆ, ಆಸ್ತಿಗಳ ಲಿಲಾವು, ಕೋರ್ಟಿನ ಕಟ್ಟೆ ಹತ್ತುವ, ಅವಮಾನಕಾರಿ ಪ್ರಸಂಗ ಮೊದ ಲಾದ ತೊಂದರೆಗಳನ್ನು ಎದುರಿಸಬೇಕಾಗುತ್ತದೆ. ಆದುದರಿಂದ ಯಾರು, ಹೇಗೆ ಎಂಬುದನ್ನು ಪರಿಶೀಲಿಸುವಾ.

೧) ರವಿ-ಬುಧ, ರವಿ-ಗುರು, ರವಿ-ಮಂಗಳ, ರವಿ - ಶುಕ್ರ ಈ

ಯಾವುದೇ ಜೋಡಿಗಳು ಬಲಾಢ್ಯರಿದ್ದ ವ್ಯಕ್ತಿಗಳಿಗೆ ಹಣ ಒದಗಿಸುವ ಯಾವುದೇ ಸಂಸ್ಥೆಯಿಂದ ಸುಲಭವಾಗಿ ಹಣ ಸಹಾಯ ಸಿಗುತ್ತದೆ, ಹಾಗೂ ಮರುಪಾವತಿಗೆ ತೊಂದರೆಯಾಗುವದಿಲ್ಲ.

೨) ರವಿ - ಶನಿ, ಶನಿ–ಮಂಗಳ, ಶನಿ–ಚಂದ್ರ, ಚಂದ್ರ–ರಾಹು ಇವುಗಳ ಯುತಿಯೋಗ–ಪ್ರತಿಯೋಗ– ದೃಷ್ಟಿಯೋಗ ಲಗ್ನ, ಚತುರ್ಥ, ಪಂಚಮ, ಭಾಗ್ಯ ಈ ಯಾವುದೇ ಸ್ಥಾನದಲ್ಲಿದ್ದ ಜಾತಕನಿಗೆ ಹಣ ಒದಗಿಸುವ ಸಂಸ್ಥೆಗಳಿಂದ ಹಣ ದೊರಕಿಸಲು ಹಾಗೂಮರುಪಾವತಿ ಮಾಡಲು ಹೆಣಗಾಡಬೇಕಾಗುತ್ತದೆ.

೩) ಯೋಗಕಾರಕ ಗ್ರಹಗಳು ಬಲಾಢ್ಯವಿದ್ದು ಅವುಗಳ ಮಹರ್ದಶೆ –ಅಂತರ್ದಶೆಯಲ್ಲಿ ಹಣ ಒದಗಿಸುವ ಸಂಸ್ಥೆಗಳಿಂದ ಸುಲಭವಾಗಿ ಹಣ ಸಿಗುತ್ತದೆ; ಹಾಗೂ ಸುಲಭವಾಗಿ ಹಣ ಮರುಪಾವತಿಯಾಗಬಹುದಾಗಿದೆ.

೪) ಸಾಡೇಸಾತಿ ಹಾಗೂ ಪಂಚಮಾಷ್ಟಮ ಶನಿಯ ಪರಿಭ್ರಮಣವಾಗುವಾಗ ಹಣ ಒದಗಿಸುವ ಸಂಸ್ಥೆಗಳಿಂದ ಸಹಾಯ ಸಿಗುವದೂ ಕಠಿಣ, ಹಾಗೂ ಮರುಪಾವತಿ ಮಾಡುವುದೂ ದುಸ್ತರ.

೬. **ಕಚ್ಚಾ ಸಾಮಗ್ರಿಗಳ ಸಮಸ್ಯೆ:** ಕೆಲವು ಉದ್ಯಮದಾರರಿಗೆ ಕಚ್ಚಾ ಸಾಮಗ್ರಿಗಳ ಸಮಸ್ಯೆಯಾದರೆ ಕೆಲ ಉದ್ಯಮದಾರರಿಗೆ ಅವು ಸುಲಭವಾಗಿ ದೊರೆಯುತ್ತವೆ. ಇದರಂತೆ ಕೆಲವು ವ್ಯಾಪಾರಸ್ಥರಿಗೆ ಸರಕು -ಸಾಮಗ್ರಿಗಳು-ವಸ್ತುಗಳು-ಪದಾರ್ಥಗಳು ಸುಲಭವಾಗಿ ಲಭ್ಯವಾದರೆ ಕೆಲ ವ್ಯಾಪಾರಸ್ಥರಿಗೆ ಮಾಲು ಸಿಗುವುದೇ ದುಸ್ತರವಾಗುತ್ತದೆ. ಇದರಂತೆ ಕೆಲವು ವಕೀಲರಿಗೆ ಕೇಸು ದೊರೆಯುವುದು, ಪಕ್ಷಗಾರರು ಸಿಗುವುದು ಕಠಿಣವಾದರೆ ಕೆಲವು ವಕೀಲರಿಗೆ ಸಾಕುಬೇಕಷ್ಟು ಫೈಲುಗಳಿರುತ್ತವೆ. ಇದರಂತೆ ಕೆಲವು ಡಾಕ್ಟರರಿಗೆ ಪೇಶೆಂಟರ ಅಭಾವವಿದ್ದರೆ ಕೆಲವು ಡಾಕ್ಟರರಿಗೆ ಸ್ಥಳಾವಕಾಶವಿಲ್ಲದಷ್ಟು ಪೇಶೆಂಟರು ತುಂಬಿರುತ್ತಾರೆ. ಕೆಲವು ಲೇಖಕರಿಗೆ ತಾವು ಬರೆದ ಲೇಖನ – ಗ್ರಂಥ ಪ್ರಕಟಿಸಲು ಅವಕಾಶ ದೊರೆಯುವುದಿಲ್ಲವಾದರೆ ಕೆಲವು ಲೇಖಕರಿಗೆ ಸಮಯಾಭಾವದಿಂದಾಗಿ ಲೇಖನ ಬರೆಯಲು ಆಗುವುದಿಲ್ಲ,

ಇದರಂತೆ ಕೆಲವು ಕಲಾಕಾರರಿಗೆ ತಮ್ಮ ಕಲೆ ಪ್ರದರ್ಶಿಸಲು ಅವಕಾಶ ದೊರೆಯುವದಿಲ್ಲವಾದರೆ ಕೆಲವು ಕಲಾಕಾರರಿಗೆ ಇವಾವ ತೊಂದರೆಯೂ ಆಗುವದಿಲ್ಲ. ಈ ಎಲ್ಲ ವರ್ಗದವರ ಸಮಸ್ಯೆ ಒಂದೇ ತರದವು. ಇವುಗಳ ವಿವರಣೆ ಹೀಗಿದೆ.

೧) ಯಾರ ಜಾತಕದಲ್ಲಿ ಚತುರ್ಥ, ಭಾಗ್ಯ ಸ್ಥಾನಗಳು ಹಾಗೂ ಈ ಸ್ಥಾನಾಧೀಶರು ಬಲಾಢ್ಯರಿರುವರೋ ಅವರಿಗೆ ಮೇಲೆ ಬರೆದ ಸಮಸ್ಯೆಗಳು ಉಂಟಾಗುವುದಿಲ್ಲ.

೨) ಆಯಾ ವೃತ್ತಿಯ ಕಾರಕ ಗ್ರಹ ಸ್ಥಾನ ಲಗ್ನಗಳು ಪೂರಕವಿರುವವೋ ಅವರಿಗೆ ಈ ಸಮಸ್ಯೆ ಉದ್ಭವಿಸುವುದಿಲ್ಲ.

೩) ಯೋಗಕಾರಕ ಗ್ರಹಗಳು ಬಲಾಢ್ಯವಿದ್ದು ಅವುಗಳ ಮಹಾದಶೆ, ಅಂತರ್ದಶೆಗಳು ನಡೆಯುತ್ತಿದ್ದರೆ ಈ ದಿಶೆಯಲ್ಲಿ ತೊಂದರೆಯುಂಟಾಗದು.

೪) ಸಾಡೇಸಾತಿ ಪಂಚಮಾಷ್ಟಮ ಶನಿಯ ಗೋಚರಿ ಪರಿಭ್ರಮಣವಾಗುವಾಗ ಯಾವ ವೃತ್ತಿಯವರಿಗಾದರೂ ತುಸು ತೊಂದರೆ ಆಗುವುದು ಸ್ವಾಭಾವಿಕ.

**೮) ಉತ್ಪಾದನಾ ಸಮಸ್ಯೆ:** ಕೆಲವು ವೃತ್ತಿಯವರಿಗೆ ಅದರಲ್ಲಿಯೂ ಗಿರಣಿ ಕಾರಖಾನೆಗಳ ಕೆಲವು ಉದ್ಯಮದಾರರಿಗೆ ಉತ್ಪಾದನಾ ( ಟರ್ನ-ಓವ್ಹರ ) ಸಮಸ್ಯೆಯಾಗುತ್ತಿದ್ದರೆ ಕೆಲವರಿಗೆ ಇದು ಸಮಸ್ಯೆಯಾಗುವದಿಲ್ಲ. ಉತ್ಪಾದನಾ ಸಾಮರ್ಥ್ಯ ಹೆಚ್ಚಾಗಬೇಕಾದರೆ ನಾಲ್ಕು ಮುಖ್ಯ ವಿಷಯಗಳು ಅತ್ಯವಶ್ಯವು. ಒಂದು, ಕಚ್ಚಾ ಸಾಮಗ್ರಿಗಳ ಪೂರೈಕೆ; ಎರಡು, ಉತ್ಪಾದಿಸುವ ಮಶಿನರಿಗಳ ಸಾಮರ್ಥ್ಯ; ಮೂರು, ನೀರು-ಎಣ್ಣೆ-ವಿದ್ಯುತ್ ಮೊದಲಾದ ಉತ್ಪಾದನಾ ಸಹಾಯಕಗಳು; ನಾಲ್ಕು, ಕಾಮಗಾರರ ಸಹಕಾರ ಈ ಸಂಗತಿಗಳು ಪೂರಕವಿದ್ದವರಿಗೆ ಉತ್ಪಾದನಾ ಸಮಸ್ಯೆಯಾಗುವದಿಲ್ಲ. ಈ ನಾಲ್ಕು ಸಂಗತಿಗಳಲ್ಲಿ ಯಾವುದೇ ಒಂದು ಸಂಗತಿ ಲೋಪವಾದರೆ ಅಷ್ಟು ಹಾನಿಯಾಗುತ್ತದೆ. ಆದಕಾರಣ ಯಾರಿಗೆ ಉತ್ಪಾದನಾ ಸಮಸ್ಯೆಯಾಗುತ್ತದೆ, ಯಾರಿಗೆ ಆಗುವದಿಲ್ಲ ಎಂಬುದನ್ನು ನೋಡುವಾ.

೧) ಶನಿ–ಮಂಗಳ--ರವಿಯರು ಬಲಾಢ್ಯರಿರುವವರಿಗೆ ಉತ್ಪಾದನಾ ಸಮಸ್ಯೆಯಾಗುವದಿಲ್ಲ.

೨) ಚತುರ್ಥ ಸ್ಥಾನ–ಚತುರ್ಥೇಶ ಬಲಾಢ್ಯರಿದ್ದವರಿಗೂ ಉತ್ಪಾದನಾ ಸಮಸ್ಯೆಯಾಗುವುದಿಲ್ಲ.

೩) ಯೋಗಕಾರಕಗ್ರಹಗಳು ಬಲಾಢ್ಯವಿದ್ದು ಆ ಗ್ರಹಗಳ ಮಹಾದಶೆ - ಅಂತರ್ದಶೆಯಲ್ಲಿ ಉತ್ಪಾದನೆಯು ವರ್ಧಿಸುವದು.

೪) ಸಾಡೇಸಾತಿ, ಪಂಚಮಾಷ್ಟಮ ಶನಿಯ ಗೋಚರಿ ಪರಿಭ್ರಮಣವಾಗುವಾಗ ಉತ್ಪಾದನೆಯು ಕುಂಠಿತವಾಗುವುದು ಸಹಜ.

೫) ಲಗ್ನ-ಲಗ್ನೇಶ, ಚತುರ್ಥ-ಚತುರ್ಥೇಶ, ಭಾಗ್ಯ–ಭಾಗ್ಯೇಶ, ಪಂಚಮ–ಪಂಚಮೇಶ ಈ ಎಂಟರಲ್ಲಿ ಯಾವುದೇ ಐದು ಸಂಗತಿಗಳು ಪೂರಕವಿದ್ದ ಉದ್ದಿಮೆಗೆ ಉತ್ಪಾದನಾ ಬಾಬಿನಲ್ಲಿ ತೊಡಕುಂಟಾಗದು.

೯) **ಮಾರಾಟ ಸಮಸ್ಯೆ :** ಕೆಲವು ವ್ಯಾಪಾರಸ್ಥರಿಗೆ ಮಾಲಿನ ಪೂರೈಕೆ ಸಮಸ್ಯೆಯಾಗುವುದಿಲ್ಲ. ಆದರೆ ಇದ್ದ ಮಾಲುಗಳ ವ್ಯಾಪಾರವು ನಿರೀಕ್ಷಿಸಿದ ಮಟ್ಟದಂತೆ ಆಗುವುದಿಲ್ಲ. ಇದರಂತೆ ಕೆಲವು ವ್ಯಾಪಾರಸ್ಥರಿಗೆ ಮಾಲು ಬರುವುದೇ ಕಠಿಣ; ಬಂದ ಮಾಲು ಶಿಘ್ರದಲ್ಲಿಯೇ ಮಾರಾಟವಾಗುತ್ತವೆ. ಆದುದರಿಂದ ಯಾರಿಗೆ ಮಾರಾಟದ ಸಮಸ್ಯೆಯಾಗುತ್ತದೆ, ಯಾರಿಗೆ ಆಗುವುದಿಲ್ಲ ಎಂಬುದನ್ನು ನೋಡುವಾ.

೧) ಯಾರ ಜಾತಕದಲ್ಲಿ ಬುಧನು ಬಲಾಢ್ಯನಿರುವನೋ ಅವರಿಗೆ ಮಾರಾಟದ ಸಮಸ್ಯೆಯಾಗುವುದಿಲ್ಲ.

೨) ದ್ವಿತೀಯ ಸ್ಥಾನ-.ದ್ವಿತೀಯೇಶ ಬಲಾಢ್ಯರಿದ್ದವರಿಗೆ ಮಾರಾಟದ ಸಮಸ್ಯೆಯಾಗುವುದಿಲ್ಲ.

೩) ಬುಧ, ಚಂದ್ರ, ದ್ವಿತೀಯ ಸ್ಥಾನ, ದ್ವಿತೀಯೇಶ ಈ ನಾಲ್ಕು

ಸಂಗತಿಗಳಲ್ಲಿ ಯಾವುದೇ ಮೂರು ಸಂಗತಿಗತಿಗಳು ಪೋಷಕ ವಿದ್ದವರಿಗೆ ಮಾರಾಟದ ಸಮಸ್ಯೆಯಾಗುವುದಿಲ್ಲ.

೪) ಯೋಗ ಕಾರಕಗ್ರಹಗಳು ಬಲಾಢ್ಯವಿದ್ದು ಆ ಗ್ರಹಗಳ ದಶೆ-ಅಂತರ್ದಶೆಯಲ್ಲಿ ಮಾರಾಟದ ಸಮಸ್ಯೆಯಾಗುವುದಿಲ್ಲ.

೫) ಸಾಡೇಸಾತಿ ಪಂಚಮಾಷ್ಟಮ ಶನಿಯ ಪರಿಭ್ರಮಣ ಕಾಲದಲ್ಲಿ ಮಾರಾಟಕ್ಕೆ ವ್ಯತ್ಯಯ ಬರುತ್ತದೆ.

೧೦) ಪಾಲುಗಾರರ ಸಮಸ್ಯೆ : ಒಬ್ಬರಿಗಿಂತ ಹೆಚ್ಚು ಮಂದಿ ಕೂಡಿ ಪಾಲುಗಾರಿಕೆಯಿಂದ ವ್ಯಾಪಾರ ಮಾಡುವವರಿಗೆ, ಇಲ್ಲವೆ ಕಂಪನಿ ಫರ್ಮ್ ಪರವಾಗಿ ವ್ಯಾಪಾರ, ವ್ಯವಹಾರದವರಿಗೆ ಕೆಲವರಿಗೆ ಲಾಭವಾಗುತ್ತಿದ್ದರೆ, ಕೆಲವರಿಗೆ ಪಾಲುಗಾರಿಕೆ ವ್ಯಾಪಾರ ವ್ಯವಹಾರವು ಸಮಸ್ಯೆಯಾಗಿರುತ್ತದೆ. ಆದುದರಿಂದ ಯಾರಿಗೆ ಈ ಪಾಲುಗಾರಿಕೆ--ವ್ಯಾಪಾರ ವ್ಯವಹಾರವು ಲಾಭದಾಯಕ, ಯಾರಿಗೆ ಹಾನಿದಾಯಕ ಎಂಬುದನ್ನು ಪರಿಶೀಲಿಸುವಾ.

೧) ಬುಧ-ಶುಕ್ರ-ಚಂದ್ರ ಈ ಮೂರು ಗ್ರಹಗಳು ಬಲಾಢ್ಯವಿರುವ ವ್ಯಕ್ತಿಗಳಿಗೆ ಪಾಲುಗಾರಿಕೆ ವ್ಯವಹಾರವು ಲಾಭದಾಯಕವಾದದ್ದು.

೨) ಚತುರ್ಥ--ಚತುರ್ಥೇಶ, ಸಪ್ತಮ ಸ್ಥಾನ-ಸಪ್ತಮೇಶ, ಲಾಭ ಸ್ಥಾನ--ಲಾಭೇಶ ಈ ಆರು ಸಂಗತಿಗಳಲ್ಲಿ ಕನಿಷ್ಠ ನಾಲ್ಕು ಸಂಗತಿಗಳು ಪೂರಕವಿದ್ದವರಿಗೆ ಪಾಲುಗಾರಿಕೆ ವ್ಯವಹಾರ-ವ್ಯಾಪಾರದಿಂದ ಲಾಭವಾಗುತ್ತದೆ.

೩) ಯೋಗಕಾರಕ ಗ್ರಹಗಳು ಬಲಾಢ್ಯವಿದ್ದು ಆ ಗ್ರಹಗಳ ದಶೆ-ಅಂತರ್ದಶೆಯಲ್ಲಿ ಪಾಲುಗಾರಿಕೆ ವ್ಯವಹಾರ ಲಾಭವಾಗುತ್ತದೆ.

೪) ಸಾಡೇಸಾತಿ ಹಾಗೂ ಪಂಚಮಾಷ್ಟಮ ಶನಿಯ ಗೋಚರಿ ಪರಿಭ್ರಮಣದ ಕಾಲಕ್ಕೆ ಪಾಲುಗಾರಿಕೆ ವ್ಯವಹಾರದಲ್ಲಿ ಹಾನಿಯಾಗುವುದು ಸಹಜವು.

### ೧೧. ಕಳವು-ತುಡುಗು-ಅಪಘಾತ ಸಮಸ್ಯೆ :

ಕೆಲವು ವೃತ್ತಿಯವರಿಗೆ ಕಳವು--ತುಡುಗು-ಅಪಘಾತ-ಸ್ಫೋಟ ಮೊದಲಾದವುಗಳಿಂದ ಮೇಲಿಂದಮೇಲೆ ಹಾನಿಯಾಗುತ್ತಿದ್ದರೆ ಕೆಲವು ವೃತ್ತಿಯವರಿಗೆ ಇಂಥ ಘಟನೆ ಎಂದೂ ಆಗುವದಿಲ್ಲ, ಆದುದರಿಂದ ಯಾರಿಗೆ, ಹೇಗೆ ಎಂಬುದನ್ನು ನೋಡುವಾ.

೧) ಶನಿ-ಮಂಗಳ, ಶನಿ-ಚಂದ್ರ, ಶನಿ-ರವಿ, ಚಂದ್ರ- ರಾಹುಗಳ ಯುತಿಯೋಗ ಯಾವುದೇ ಸ್ಥಾನದಲ್ಲಿದ್ದರೂ ಇಂಥ ಭೀತಿ ಬಹಳ.

೨) ಲಗ್ನ, ಚತುರ್ಥ, ಅಷ್ಟಮ ಈ ಸ್ಥಾನಗಳು ಹಾಗೂ ಈ ಸ್ಥಾನಾಧೀಶರೂ ಬಲಾಢ್ಯರಿರುವವರಿಗೆ ಈ ಬಗೆಯ ಹಾನಿಯಾಗುವುದಿಲ್ಲ.

೩) ಲಗ್ನ-ಲಗ್ನೇಶ, ಚತುರ್ಥ-ಚತುರ್ಥೇಶ, ಅಷ್ಟಮ-ಅಷ್ಟಮೇಶ, ವ್ಯಯ-ವ್ಯಯೇಶ ಈ ಎಂಟು ಸಂಗತಿಗಳಲ್ಲಿ ಯಾವುದೇ ೫ ಸಂಗತಿಗಳು ಪೂರಕವಿದ್ದರೆ ಈ ತರದ ಹಾನಿಯಾಗುವುದಿಲ್ಲ.

೪) ಸಾಡೇಸಾತಿ ಹಾಗೂ ಪಂಚಮಾಷ್ಟಮ ಶನಿಯ ಗೋಚರ ಪರಿಭ್ರಮಣದ ಕಾಲಕ್ಕೆ ಕಳವು - ತುಡುಗು - ಸ್ಫೋಟ, ಮಶಿನರಿ ಮೊದಲಾದವುಗಳಿಂದ ಹಾನಿಯಾಗಬಹುದಾಗಿದೆ.



# ಎನ್.ಕೆ. ಜೋಗಳೇಕರ ಕೃತ ಜ್ಯೋತಿಷ್ಯ ಗ್ರಂಥಗಳು

## ೧. ವಧೂವರರ ಜೋತಿಷ್ಯ

ಬೆಲೆ : ರೂ. ೧೦-೦೦ ( ಪಂಚಮಾವೃತ್ತಿ)

ಈ ಗ್ರಂಥದಲ್ಲಿ ವಧೂ-ವರರ ಜನ್ಮಟಿಪ್ಪಣಿ ( ಕುಂಡಲಿ ) ಗಳನ್ನು ಏಕೆ ಹಾಗೂ ಹೇಗೆ ನೋಡಬೇಕು? ನಾಡಿ, ಯೋನಿ, ಗಣ, ಕೂಟಗಳೆಂದರೇನು? ಇವನ್ನು ಏಕೆ, ಹೇಗೆ ನೋಡಬೇಕು? ಮಂಗಳ ( ಕುಜ ) ದೋಷವೆಂದರೇನು? ಕುಜ ( ಮಂಗಳ ) ದೋಷವನ್ನು ಏಕೆ ಹಾಗೂ ಹೇಗೆ ನೋಡಬೇಕು ? ಅಪವಾದ ಕುಜ ದೋಷವೆಂದರೇನು ? ಇದಲ್ಲದೆ ವಧೂ-ವರರ ವಿವಾಹ ಕಾಲ ಯಾವುದು ? ಅದು ಯಾವ ವಯಸ್ಸಿನಲ್ಲಿ, ಯಾವ ವರುಷ, ಯಾವ ತಿಂಗಳು ಎಂಬುದನ್ನು ಹೇಗೆ ಕಂಡುಹಿಡಿಯಬೇಕು? ಇವೇ ಮೊದಲಾದ ವಿಷಯಗಳನ್ನು ವಿವೇಚಿಸಲಾಗಿದೆ.

## ೨. ಆಕಸ್ಮಿಕ ಧನಯೋಗ

ಬೆಲೆ : ರೂ. ೬-೦೦ ( ಚತುರ್ಥ ಮುದ್ರಣ )

ಈ ಗ್ರಂಥದಲ್ಲಿ ಆಕಸ್ಮಿಕ ಧನಯೋಗ ಅಂದರೇನು ? ಅದನ್ನು ಹೇಗೆ ಪರಿಶೀಲಿಸಬೇಕು ? ಇದಲ್ಲದೆ ಸಟ್ಟಾ, ಲಾಟರಿ, ರೇಸು, ಭೂಗತ, ಪ್ರಾಯಿಡ ಬಾಂಡ, ಸ್ತ್ರೀಧನ ( ಸ್ವಸ್ತ್ರೀ ಹಾಗೂ ಪರಸ್ತ್ರೀ ), ವಾರಸಾ, ದತ್ತಕ, ಕಾಣಿಕೆ, ಲಂಚ, ಕಾಲಾ ಬಜಾರ ಇವುಗಳಿಂದ ಆಕಸ್ಮಿಕ ಧನಲಾಭವನ್ನು ಹೇಗೆ ಗುರುತಿಸಬೇಕೆಂದನ್ನು ಮಾದರಿ ಕುಂಡಲಿಗಳಿಂದ ವಿವರಿಸಲಾಗಿದೆ.

## ೩. ಸ್ತ್ರೀ ಜ್ಯೋತಿಷ್ಯ

ಬೆಲೆ : ರೂ. ೧೦-೦೦ ( ತೃತೀಯಾವೃತ್ತಿ )

ಸ್ತ್ರೀಯರ ಜೀವನದ ಅನೇಕ ಮುಖಗಳನ್ನು ಆಧರಿಸಿ ಬರೆದ ವಿಸ್ತಾರವಾದ ಗ್ರಂಥ. ಇದರಲ್ಲಿ ಸ್ತ್ರೀಯರ ಸ್ವಭಾವ, ಸೌಂದರ್ಯ, ವಿವಾಹ ಕಾಲ, ಪ್ರೇಮವಿವಾಹ, ಪುನರ್ವಿವಾಹ, ಅಂತರ್ಜಾತೀಯ ವಿವಾಹ, ಆಜನ್ಮ ಕುಮಾರಿಯೋಗ, ಘಟಸ್ಫೋಟ, ವೈಧವ್ಯಯೋಗ, ಗರ್ಭಧಾರಣ, ಸಂತತಿ, ಸಂತತಿ ಸುಖ, ಹಾಗೂ ಗರ್ಭಪತನಯೋಗಗಳು, ಗರ್ಭ ಪ್ರತಿಬಂಧ

ವನ್ನು ಯಾರು ಮಾಡಿಸಿಕೊಳ್ಳಬೇಕು, ವಂಧ್ಯಾಯೋಗ, ವಿದ್ಯೆ, ಭಾಗ್ಯ, ಮನೋವಾಸನೆ, ಆರ್ಥಿಕ ಸ್ವಾತಂತ್ರ್ಯ, ಸ್ವಾವಲಂಬನ, ರಾಜಕಾರಣಪಟುತ್ವ, ಸಮಾಜ ಧುರೀಣತ್ವ ಮುಂತಾದ ವಿಷಯಗಳನ್ನು ಆಧುನಿಕ ಸಮಾಜಕ್ಕನುಸರಿಸಿ, ಫಲ ಜ್ಯೋತಿಷ್ಯ ಶಾಸ್ತ್ರದ ಆಧಾರದ ಮೇಲಿಂದ ಹೇಗೆ ನೋಡಬೇಕೆಂಬುದನ್ನು ವಿವೇಚಿಸಿದೆ.

## ೪. ಅಜ್ಞಾತ ಜಾತಕ ದರ್ಶನ

ಬೆಲೆ : ರೂ. ೫-೦೦ ( ದ್ವಿತೀಯಾವೃತ್ತಿ )

ಈ ಗ್ರಂಥದಲ್ಲಿ ಜನ್ಮ ವೇಳೆ-ಜನ್ಮತಿಥಿ ಸರಿಯಾಗಿ ಗೊತ್ತಿಲ್ಲದ ವ್ಯಕ್ತಿಯ ಜಾತಕವನ್ನು ಅವನ ನೇತ್ರ-ಕರ್ಣಾವಲೋಕನ, ಗದ್ದ-ಗಲ್ಲಗಳ ಪರೀಕ್ಷೆ ಮೊದಲಾದ ಮುಖ ಲಕ್ಷಣಗಳ ಮೇಲಿಂದಲೂ ನಡೆ-ನುಡಿ, ನಿದ್ರಾ, ಭಂಗಿ, ಅಭಿರುಚಿ, ವಾಕ್‌ಚಾತುರ್ಯ ಮುಂತಾದ ಲಕ್ಷಣಗಳಿಂದಲೂ ಕಂಡು ಹಿಡಿಯಬಹುದು. ಅದರಂತೆ ವ್ಯಕ್ತಿಯ ಜೀವನದಲ್ಲಿಯ ನಡೆದುಹೋದ ಘಟನೆಗಳ ಮೇಲಿಂದ ಜಾತಕವನ್ನು ಒರೆಗೆಹಚ್ಚಿ ನೋಡಬಹುದು. ಈ ಮೊದಲಾದ ಸಂಗತಿಗಳಿಂದ ಯೋಗ್ಯ ಜನ್ಮ ಪತ್ರಿಕೆ ಇಲ್ಲದವನ ಭವಿಷ್ಯ ಹೇಗೆ ಹೇಳಬೇಕೆಂಬುದನ್ನು ಕುರಿತು ಈ ಗ್ರಂಥದಲ್ಲಿ ವಿವರಿಸಲಾಗಿದೆ.

## ೫. ಸಾಡೇಸಾತಿ

ಬೆಲೆ : ರೂ. ೧೦-೦೦ ( ಚತುರ್ಥಾವೃತ್ತಿ )

ಈ ಗ್ರಂಥದಲ್ಲಿ ಸಾಡೇಸಾತಿ ಅಂದರೇನು ? ಸಾಡೇಸಾತಿಯನ್ನು ಹೇಗೆ ಪರಿಶೀಲಿಸಬೇಕು ? ಅನುಕೂಲ - ಪ್ರತಿಕೂಲ ಸಾಡೇಸಾತಿ ಅಂದರೇನು ? ರಾಶಿ, ಸ್ಥಾನ, ಗ್ರಹಗಳು, ಭಾವ, ಭಾವೇಶ ಇವುಗಳ ಮೇಲಿಂದ ಶನಿಯು ಭ್ರಮಿಸುವಾಗ ಆಗುವ ಪರಿಣಾಮ, ದಶಾ-ಅಂತರ್ದಶೆಯ ಸಾಡೇಸಾತಿಯ ಪರಿಣಾಮ, ಅಷ್ಟಕವರ್ಗ ಪದ್ಧತಿಯಿಂದ ಸಾಡೇಸಾತಿಯ ವಿಚಾರ, ಇವೇ ಮೊದಲಾದ ಸಾಡೇಸಾತಿಯ ವಿಷಯವಾಗಿ— ಮಾದರಿ ಕುಂಡಲಿಯೊಂದಿಗೆ— ವಿವೇಚಿಸಲಾಗಿದೆ.

## ೬. ಉದ್ಯೋಗ ಜ್ಯೋತಿಷ್ಯ - ಭಾಗ ೧
## (ನೌಕರಿ ಮಾರ್ಗದರ್ಶಿ)

ಬೆಲೆ : ೨೦-೦೦ ( ದ್ವಿತೀಯಾವೃತ್ತಿ )

ಈ ಗ್ರಂಥದಲ್ಲಿ ನೌಕರಿಗಳಲ್ಲಿಯ ಪ್ರಕಾರಗಳು, ಕಾರಕಗ್ರಹ, ಲಗ್ನ, ಸ್ಥಾನ, ರಾಶ್ಯಾದಿಗಳನ್ನು ಕುರಿತು ಸುದೀರ್ಘವಾಗಿ ವಿವೇಚಿಸಲಾಗಿದ್ದು, ಜ್ಯೋತಿಷ್ಯ ಶಾಸ್ತ್ರದಲ್ಲಿಯೇ ಇದೊಂದು ನೂತನ ಸಂಶೋಧನಾ ಗ್ರಂಥವು.

ಜೀವನ ರಂಗ ಪ್ರವೇಶಿಸುವ ನೌಕರಿ ಉದ್ಯೋಗಾರ್ಥಿಗಳಿಗೆ ಸಹಾಯವಾಗುವ, ಜ್ಯೋತಿಷ್ಯ ಶಾಸ್ತ್ರದ ಆಧಾರದ ಮೇಲೆ ರಚಿತವಾದಂತಹ ಸರಿಯಾದ ಗ್ರಂಥವು ಯಾವುದೊಂದೂ ಈ ವರೆಗೆ ಇರಲಿಲ್ಲ. ಈಗ ಈ 'ಉದ್ಯೋಗ ಜ್ಯೋತಿಷ್ಯ'ವು ಅಂತಹ ನೌಕರಿ ಉದ್ಯೋಗಾರ್ಥಿಗಳಿಗೊಂದು ಕೈದೀವಿಗೆಯಾಗಿದೆ.

ಕಾರಕೂನರು, ಟೈಪಿಸ್ಟರು, ಶೀಘ್ರಲಿಪಿಗಾರರು, ಜವಾನರು, ಇನ್ಸಪೆಕ್ಟರರು, ಸ್ಟೋರ್‌ಕೀಪರರು, ವೈಜ್ಞಾನಿಕ ವಿಭಾಗದ ನೌಕರರು, ಅಗ್ನಿಶಾಮಕ ದಳದ ಸಿಬ್ಬಂದಿ, ಅರ್ಥಶಾಸ್ತ್ರಜ್ಞರು, ಅಂಕಿಸಂಖ್ಯಾ ತಜ್ಞರು, ಎಂಜಿನಿಯರುಗಳಲ್ಲಿಯ ಪ್ರಕಾರ ಹಾಗೂ ತಾಂತ್ರಿಕ ಸಿಬ್ಬಂದಿ ಎಂದು ಮುಂತಾದಿ ವಿವಿಧ ಖಾತೆಗಳಲ್ಲಿ ಇರುವ ಸಾಮಾನ್ಯ ಹುದ್ದೆಗಳೂ ಹಾಗೂ ಸಿವ್ಹಿಲ್ ಸರ್ವಿಸ್, ಮಿಲಿಟರಿ ಸರ್ವಿಸ್, ಆಕಾಶವಾಣಿ, ರೇಲ್ವೆ, ಅಂಚೆ, ಮತ್ತು ತಂತಿ, ಸುಂಕ, ಕೇಂದ್ರ ಅಬಕಾರಿ, ವರಮಾನ ತೆರಿಗೆ, ವಾಯುಯಾನೋದ್ಯಾನ, ವಿಮಾನದಳ, ಸೈನ್ಯ, ಟಂಕಶಾಲೆ, ಆಡಿಟ ಹಾಗೂ ಅಕೌಂಟ, ಗಣಿ ಹಾಗೂ ಭೂಗರ್ಭ, ಸಚಿವಾಲಯ, ರೆವಿನ್ಯೂ, ಒಕ್ಕಲುತನ, ಸಾರ್ವಜನಿಕ ಶಿಕ್ಷಣ, ವೈದ್ಯಕ ಹಾಗೂ ಆರೋಗ್ಯ, ನ್ಯಾಯ, ಪೋಲೀಸ, ಸ್ಟೇಟ ಅಕೌಂಟ್ಸ, ಅರಣ್ಯ, ಪಶುಸಂಗೋಪನ ಹಾಗೂ ಪಶುಸಂಪತ್ತು, ತೋಟಗಾರಿಕೆ, ಕಮರ್ಶಿಯಲ್ ಟ್ಯಾಕ್ಸ್, ಸಹಕಾರ ಹಾಗೂ ಮಾರ್ಕೆಟಿಂಗ, ಕೂಲಿಕಾರ, ಸಮಾಜ ವಿಕಾಸ ಹಾಗೂ ಕಲ್ಯಾಣ, ಮೀನುಗಾರಿಕೆ, ಚಾರಿಟಿ ಕಮೀಶನರ, ಪಾನನಿರೋಧ, ಹಾಗೂ ಲಂಚ ನಿರ್ಮೂಲನ, ಜೇಲು, ರೀಜನಲ್ ಟ್ರಾನ್ಸಪೋರ್ಟ, ರಾಷ್ಟ್ರೀಯ ಔದ್ಯೋಗಿಕ, ಬಂದರಗಾಹ,

ಆಹಾರ ಪೂರೈಕೆ ಹಾಗೂ ಉತ್ಪಾದನೆ, ಪ್ರಾಚ್ಯವಸ್ತು ಸಂಶೋಧನೆ, ಬ್ಯಾಂಕ್ಸ್, ಜೀವ ವಿಮಾ, ಸ್ಟೇಟ್ ಟ್ರಾನ್ಸಪೋರ್ಟ, ವಿಶ್ವವಿದ್ಯಾಲಯ, ಖಾದಿ-ಗ್ರಾಮೋದ್ಯೋಗ, ಪತ್ರಿಕೋದ್ಯಮ ಹಾಗೂ ಕಾರಖಾನೆ, ಗಿರಣಿಗಳು ಮೊದಲಾದ ಭಿನ್ನ ಭಿನ್ನ ಖಾತೆಗಳು ಹುದ್ದೆಗಳನ್ನು ಪಡೆಯುವವನ ಜಾತಕ ಎಂತಿರಬೇಕು ?

ಇದಲ್ಲದೆ ಈ ಗ್ರಂಥದಲ್ಲಿ ನೌಕರಿಗೆ ಸಂಬಂಧಿಸಿದಂತೆ, ನೌಕರಿ ಹತ್ತುವ ಕಾಲ, ಬದಲಿ, ಬಡತಿ, ರಜೆ, ಖಾಯಂ ಆಗುವದು, ಎಕ್ಸಟೆನ್ಶನ್ ಮೇಲಿನ ಅಧಿಕಾರಿಗಳ ಕೃಪಾವಕೃಪೆ ಇವುಗಳನ್ನು ಕುರಿತು ಸಹ ವಿವೇಚಿಸಲಾಗಿದೆ.

## ೭. ಉದ್ಯೋಗ ಜ್ಯೋತಿಷ್ಯ ಭಾಗ-೨

( ವೃತ್ತಿ ಮಾರ್ಗದರ್ಶಿ )

ಬೆಲೆ. ರೂ. ೨೫-೦೦

ಈ ಗ್ರಂಥದಲ್ಲಿ ಸ್ವತಂತ್ರ ಉದ್ಯೋಗಸ್ಥರ ವೃತ್ತಿಗಳನ್ನು ೧೨ ಅಧ್ಯಾಯಗಳಲ್ಲಿ ವಿವೇಚಿಸಲಾಗಿದೆ. ಮೊಟ್ಟಮೊದಲು ಯಾವುದೇ ಸ್ವತಂತ್ರ ಉದ್ಯೋಗಸ್ಥರ ಜಾತಕ ಹೇಗೆ ಇರುತ್ತದೆ ಎಂಬುದನ್ನು ವಿವರಿಸಲಾಗಿದೆ. ಆ ಬಳಿಕ ಕೃಷಿ ವೃತ್ತಿ, ಕೃಷಿ ಆಧಾರಿತ ವೃತ್ತಿಗಳಾದ ಕೋಳಿ ಸಾಕಾಣಿಕೆ, ಹೈನುಗಾರಿಕೆ, ರೇಶ್ಮಿಯಾ ವ್ಯವಸಾಯ, ಜೇನು ಸಾಕಾಣಿಕೆ, ಮತ್ಸ್ಯೋದ್ಯಮ ಮೊದಲಾದವುಗಳ ವಿವರಣೆಯಿದೆ. ಆ ಬಳಿಕ ಹಲವು ವಿಧದ ಸಾಂಗ ವೃತ್ತಿ, ಉದ್ಯಮ ವೃತ್ತಿ, ನಾನಾ ಬಗೆಯ ವ್ಯಾಪಾರಸ್ಥರ ವೃತ್ತಿ, ಎಲ್ಲ ಪ್ರಕಾರದ ಯಂತ್ರಗಳ ( ರಿಪೇರರ್ಸ ) ದುರಸ್ತಿಗಾರರ ವೃತ್ತಿ, ಫಾರ್ವಸ್ಟ ಅಬಕಾರಿ, ಕಟ್ಟಡ ಮೊದಲಾದ, ವಿಮೆ ನ್ಯೂಜಪೇಪರ ಮೊದಲಾದ ಎಲ್ಲ ಪ್ರಕಾರದ ಕಾಂಟ್ರ್ಯಾಕ್ಟರರ ಎಜನ್ಸಿಯವರ ವಿಭಿನ್ನ ವೃತ್ತಿ ಹೇಗೆ ಇರುತ್ತವೆ ಎಂಬುದರ ಸವಿಸ್ತಾರ ವಿವರಣೆಯಿದೆ. ಬುದ್ಧಿಜೀವಿಗಳಾದ ಎಲ್ಲ ಪ್ರಕಾರದ ಡಾಕ್ಟರರು, ಅಲೊಪತಿ, ಹೋಮಿಯೊಪತಿ, ಆಯುರ್ವೇದ, ಯುನಾನಿ, ನಿಸರ್ಗಚಿಕಿತ್ಸಾ ತಜ್ಞರು, ಏಕ ಮೂಲಿಕಾ ಪ್ರಯೋಗದ ವೈದ್ಯರು, ಚುಂಬಕ ಚಿಕಿತ್ಸಾತಜ್ಞರು, ಸೂಜಿ ಚಿಕಿತ್ಸರು, ದಂತವೈದ್ಯರು, ನೇತ್ರ ತಜ್ಞರು, ಮಾನಸಿಕ ರೋಗ ತಜ್ಞರು, ಶಸ್ತ್ರ ಚಿಕಿತ್ಸಾ ತಜ್ಞರು, ಸಲಹೆ



ಗಾರಿಕೆಯ ವೈದ್ಯರು, ಪೆಥಾಲಾಜಿಸ್ಟರು, ಕಿವಿ-ಮೂಗು-ಗಂಟಲು ತಜ್ಞರು, ಪ್ರಸೂತಿ ತಜ್ಞರು, ಚರ್ಮ ರೋಗ ತಜ್ಞರು, ಚಿಕ್ಕ ಮಕ್ಕಳ ರೋಗ ತಜ್ಞರು, ಫಿಜಿಯೊ-ಥೆರೆಪಿಸ್ಟರು, ದಾದಿಯರು, ಸೂಲಗಿತ್ತಿಯರು, ವಿವಿಧ ತಂತ್ರಜ್ಞರು, ಔಷಧಿ ವ್ಯಾಪಾರಸ್ಥರು, ವಾಸ್ತುಶಿಲ್ಪಿಗಳು ( ಆರ್ಕಿಟೆಕ್ಟರು),ಚಾರ್ಟರ್ಡ ಅಕೌಂಟಂಟರು,ಕಾಸ್ಟ ಅಕೌಂಟಂಟರು, ತೆರಿಗೆ ಸಲಹೆಗಾರರು, ಟ್ಯುಟೋರಿಯಲ್ ಕ್ಲಾಸುಗಳು, ಹಾಗೂ ವಿಶಿಷ್ಟ ಪರೀಕ್ಷಾ ವಿಷಯಗಳ ತರಬೇತಿ ತಜ್ಞರು,ದಸ್ತುಬರಹಗಾರರು (ಬಾಂಡರಾಯಟರ್ಸ್), ಲೇಖಕರು,ಗ್ರಂಥಕರ್ತರು, ಸಂಪಾದಕರು, ಕವಿಗಳು, ಕಾದಂಬರಿಕಾರರು, ನಾಟಕಕಾರರು, ಸಂವಹನಮಾಧ್ಯಮ ಸಾಹಿತ್ಯ ಲೇಖಕರು, ವೈಚಾರಿಕ ಸಾಹಿತ್ಯದ ಲೇಖಕರು,ಶಾಸ್ತ್ರೀಯ ಸಾಹಿತ್ಯದ ಲೇಖಕರು ಪತ್ರಕರ್ತರು, ಸೈದ್ಧಾಂತಿಕ ಸಾಹಿತ್ಯದ ಲೇಖಕರು, ಫಲಜ್ಯೋತಿಷ್ಯರುಗಳು, ಪುರೋಹಿತರು, ಮಾಂತ್ರಿಕರು, ಪಂಚಾಂಗಕರ್ತರು— ಇವರೇ ಮೊದಲಾದ ಬುದ್ಧಿಜೀವಿ ವೃತ್ತಿಯವರು, ಅಲ್ಲದೆ ಎಲ್ಲ ಪ್ರಕಾರದ ಕಲಾಕಾರರು, ಹಾಗೂ ಕುಶಲಕರ್ಮಿಗಳಾದ ಚಿತ್ರ ಕಲಾಕಾರರು, ಹಾಗೂ ಬಣ್ಣದ(ವರ್ಣ) ಕಲಾಕಾರರು, ಫೋಟೋಗ್ರಾಫರರು, ನೃತ್ಯಕಾರರು, ಸಂಗೀತಕಾರರು ವಾದ್ಯಕಾರರು, ಸೌಂದರ್ಯ ವರ್ಧನಾ ತಜ್ಞರು (ಬ್ಯುಟಿಪಾರ್ಲರ). ಜೆರಾಕ್ಸ ಪ್ರಿಂಟರರು, ಬ್ಲಾಕ್ ಮೇಕರ್ಸ, ಶಿಲ್ಪಕಲಾ ತಜ್ಞರು, ಕಸೂತಿ ತಜ್ಞರು, ನೇಕಾರರು, ಪತ್ತಾರರು, ಬಡಿಗರು, ಶಿಂಪಿಗರು, ಬಣ್ಣಗಾರರು, ಜಿನಗಾರರು, ನೀಲಗಾರರು, ಗೌಂಡಿಗಳು ಅಲ್ಲದೆ ಎಲ್ಲ ಪ್ರಕಾರದ ಮಾಲಕರು ಮನೆ, ಚಾಳ, ಟಾಕೀಜ, ಗಿರಣಿ, ಕಾರಖಾನೆ, ವಾಹನಗಳ, ಮಶಿನಂಗಳ ಮಾಲಕ ವೃತ್ತಿಯವರ ವಿಷಯವಾಗಿ, ನಗರಸಭೆ,ಜಿಲ್ಲಾ ಪರಿಷತ್ತು,ಮಂಡಲಗಳು, ವಿಶ್ವವಿದ್ಯಾಲಯ, ವಿಧಾನಮಂಡಳ, ಸಂಸತ್ತುಗಳ ರಾಜಕೀಯ ಹಾಗೂ ಸಾಮಾಜಿಕ ಕಾರ್ಯಕರ್ತರ ರಾಜಕಾರಣಿಗಳ ಜಾತಕ ಹೇಗೆ ಇರುತ್ತವೆ ಎಂಬುದರ ವಿವರಣೆಯೊಂದಿಗೆ ವೃತ್ತಿಗೆ ಸಂಬಂಧಿಸಿದ ಸಮಸ್ಯೆಗಳ ವಿವೇಚನೆಯೂ ಇದೆ. ಒಟ್ಟಿನಲ್ಲಿ ಎಲ್ಲ ಪ್ರಕಾರದ ಸ್ವತಂತ್ರ ವೃತ್ತಿಯವರ ವಿಷಯವಾಗಿ ಸುದೀರ್ಘವಾಗಿ ಸಂಶೋಧನಾತ್ಮಕವಾಗಿ ವಿವರಿಸಿದ ಗ್ರಂಥವು

## ೮. ಅಧಿಕಾರೀ ಜೋತಿಷ್ಯ

ಬೆಲೆ : ರೂ. ೪-೦೦ ( ದ್ವಿತೀಯಾವೃತ್ತಿ )

ಈ ಗ್ರಂಥದಲ್ಲಿ ವೃಚ್ಛಕದಲ್ಲಿಯ ಪ್ರಕಾರಗಳು ಹಾಗೂ ಅವರ ಸ್ವಭಾವ-ನಡೆ-ನುಡಿಗಳು ಹೇಳಿರುವವು. ಫಲ ಜೋತಿಷ್ಯ ಶಾಸ್ತ್ರದ ಮೇಲಿರುವ ಆಕ್ಷೇಪಣೆಗಳಿಗೆ ಉತ್ತರ ...... ಆಧುನಿಕ ಸಮಾಜದಲ್ಲಿ ಬರುವ ಕ್ಲಿಷ್ಟ ಹಾಗೂ ಸೂಕ್ಷ್ಮ ಪ್ರಶ್ನೆಗಳನ್ನು ಜ್ಯೋತಿಷಿಗಳು ಪ್ರತಿನಿತ್ಯವೂ ಹೇಗೆ ಎದುರಿಸಬೇಕಾಗುತ್ತದೆ ಎಂಬುದರ ನೋಟ ... ...

ಜ್ಯೋತಿಷಿಯು ತನ್ನ ವೃತ್ತಿಯಲ್ಲಿ ಯಶಸ್ವಿಯಾಗಲು ಯಾವ ಆದರ್ಶಗಳನ್ನು ಪಾಲಿಸಬೇಕು, ಎಂತಹ ವ್ಯಕ್ತಿತ್ವವನ್ನು ಹೊಂದಿರಬೇಕು, ಇರಬೇಕಾದ ಗುಣಗಳು, ಪಾಲಿಸಬೇಕಾದ ನಿಯಮಗಳು ಯಾವವು ಈ ಮೊದಲಾದ ವಿಷಯಗಳನ್ನು ಕುರಿತು ಸುದೀರ್ಘವಾಗಿ ವಿವರಿಸಲಾಗಿದೆ.

## ೯. ಆರೋಗ್ಯ ಜೋತಿಷ್ಯ

ಬೆಲೆ : ರೂ. ೧೨-೦೦ ( ದ್ವಿತೀಯಾವೃತ್ತಿ )

ಈ ಗ್ರಂಥದಲ್ಲಿ ಜಾತಕ ನೋಡಿ, ಜಾತಕನಿಗೆ ಯಾವ ಯಾವ ರೋಗಗಳು ಯಾವ ಯಾವಾಗ ಬರುವವು ? ಹಾಗು ಬಂದ ರೋಗಗಳು ಗುಣಮುಖವಾಗುವುದು ಯಾವಾಗ ? ರೋಗ ನಿದಾನದ ವಿಧಿ-ವಿಧಾನಗಳೇನು? ಔಷಧ ಸೇವಿಸುವ ಕಾಲ,ಶಸ್ತ್ರಚಿಕಿತ್ಸೆಗಳಿಗಾಗಿ ಉತ್ತಮ ಮುಹೂರ್ತಗಳು ಇವೇ ಮುಂತಾದಿ ರೋಗಿ-ರೋಗ-ಆಯುಷ್ಯ, ದುರ್ಮರಣಾದಿಗಳನ್ನು ಕುರಿತು ಸುದೀರ್ಘವಾಗಿ, ಸವಿವರವಾಗಿ ಬರೆಯಲ್ಪಟ್ಟ, ಕನ್ನಡದಲ್ಲಿಯೇ ಪ್ರಪ್ರಥಮವಾದ ಸಂಶೋಧನಾ ಗ್ರಂಥವಿದು, ಅರವತ್ತು ರೋಗಗಳ ವಿಷಯವಾಗಿ ಸವಿಸ್ತಾರ ಜ್ಯೋತಿಷ್ಯ ಶಾಸ್ತ್ರ ಪ್ರಕಾರದ ವಿವೇಚನೆ ನಡೆಸಿದುದು ಈ ಗ್ರಂಥದ ವೈಶಿಷ್ಟ್ಯ.

## ೧೦. ಶಿಕ್ಷಣ ಜೋತಿಷ್ಯ

ಬೆಲೆ : ರೂ. ೧೫-೦೦ ( ದ್ವಿತೀಯಾವೃತ್ತಿ )

ಜಾತಕಗಳ ಮೇಲಿಂದ ಶಿಕ್ಷಣದ ವಿಚಾರ, ಶಿಕ್ಷಣದಲ್ಲಿಯ ಅಡ-ತಡೆಗಳ ಸುದೀರ್ಘ ವಿಶ್ಲೇಷಣೆ, ಭಾರತದಲ್ಲಿರುವ ಸುಮಾರು ಎಂಬತ್ತು ವಿಧದ

ಶಿಕ್ಷಣ ಕೋರ್ಸುಗಳ ಸವಿಸ್ತಾರ ವಿವರಣೆ, ಪದವಿ, ಸ್ನಾತಕೋತ್ತರ ಪದವಿ, ಡಿಪ್ಲೋಮಾ, ಸರ್ಟಿಫಿಕೇಟ್ ಕೋರ್ಸು ಮುಂತಾದವನ್ನು ಎಂಥ ಜಾತಕನು ಅಳವಡಿಸಿಕೊಳ್ಳಬಹುದು? ಥೇರಿ, ಪ್ರಾತ್ಯಕ್ಷಿಕ,ಪೌಢಿಕ ಬೋರ್ಡ ಹಾಗೂ ವಿಶ್ವವಿದ್ಯಾಲಯ, ಸ್ಪರ್ಧಾತ್ಮಕ ಮುಂತಾದ ವಿವಿಧ ಪರೀಕ್ಷೆಗಳಲ್ಲಿ ತೇರ್ಗಡೆ ಯಾಗಲು ಜಾತಕ ಹೇಗಿರಬೇಕು? ಇತ್ಯಾದಿಯಾಗಿ ವಿದ್ಯಾರ್ಥಿಗಳ ಆಗು ಹೋಗಿನ ಮೇಲೆ ಬೆಳಕು ಬೀರುವ ಪ್ರಪ್ರಥಮ ಸಂಶೋಧನಾತ್ಮಕ ಗ್ರಂಥ.

## ೧೧. ಶಕುನ ಜ್ಯೋತಿಷ್ಯ

ಬೆಲೆ : ರೂ. ೧೫-೦೦

ಈ ಗ್ರಂಥದಲ್ಲಿ ಶಕುನ ಶಾಸ್ತ್ರದ ಉತ್ಪತ್ತಿ, ಪ್ರಾಣಿಗಳಿಂದ ಶಕುನಗಳ ವಿಚಾರ, ಸಾಕುಪ್ರಾಣಿಗಳ ಕಾಲ್‌ಗುಣ ಹಾಗೂ ಲಕ್ಷಣಗಳ ವಿಚಾರ, ಪಕ್ಷಿ ಗಳಿಂದ ಶಕುನಗಳ ವಿಚಾರ, ಕೀಟಗಳಿಂದ ಶಕುನಗಳ ವಿಚಾರ, ಶೀನಿನ ಶಕುನಗಳು, ಜನನ - ಮರಣಗಳ ಶಕುನಗಳು, ಮಳೆ ಹಾಗೂ ಜಲಶಿಲ್ಪಿಯ ಶಕುನಗಳು, ಉಪ್ಪಿನ ಶಕುನಗಳು, ಅಂಗಾಂಗಗಳ ಶಕುನಗಳ ವಿಚಾರ, ಪಾಶ್ಚಿ ಮಾತ್ಯರಲ್ಲಿಯ ಶಕುನಗಳ ವಿಚಾರ, ಪ್ರವಾಸ ಕೈಕೊಳ್ಳುವ ಸಮಯದಲ್ಲಿಯ ಶಕುನಗಳು, ರೂಢಿ, ನಂಬಿಕೆ, ಪ್ರವಾಸ ಸಂಪ್ರದಾಯಗಳ ವಿಚಾರ,ಸ್ವಪ್ನಗಳ ಶಕುನಗಳು ಹೀಗೆ ಶಕುನ ವಿಷಯವಾಗಿ ಸುದೀರ್ಘವಾಗಿ ಸವಿವರವಾಗಿ ಬರೆ ಯಲ್ಪಟ್ಟ ಕನ್ನಡದಲ್ಲಿಯೇ ಪ್ರಪ್ರಥಮವಾದ ಸಂಶೋಧನಾತ್ಮಕ ಗ್ರಂಥವಿದು.

## ೧೨. ಚುನಾವಣೆಯ ಜ್ಯೋತಿಷ್ಯ

ಬೆಲೆ : ರೂ. ೧೫-೦೦

ಈ ಗ್ರಂಥದಲ್ಲಿ ಚುನಾವಣೆಯಲ್ಲಿಯ ಸೋಲು-ಗೆಲವುಗಳನ್ನು ವಿಶ್ಲೇಷಿಸುವಾಗ ಅಭ್ಯರ್ಥಿಗಳ ಪ್ರಭಾವ, ಆರ್ಥಿಕ ಬಲ, ಹಿಂದಿನ ಸಾಧನೆ, ಸ್ಥಳೀಯ-ರಾಷ್ಟ್ರೀಯ ಸಮಸ್ಯೆಗಳ ಪ್ರಭಾವ ಮೊದಲಾದ ಚುನಾವಣೆಯ ಸಮಯದಲ್ಲಿ ಇರುವ ಸಮಸ್ಯೆಗಳನ್ನು ಜ್ಯೋತಿಷ್ಯ ದೃಷ್ಟಿಯಿಂದ ವಿವೇಚಿಸ ಲಾಗಿದೆಯಲ್ಲದೆ, ರಾಜಕೀಯ, ಸ್ಥಾನಿಕ, ಶೈಕ್ಷಣಿಕ, ಸಹಕಾರ, ಸಾಂಸ್ಕೃತಿಕ, ಧಾರ್ಮಿಕ, ಕಾರ್ಮಿಕ, ವೃತ್ತಿ ಸೇವಾ ಸಂಘ-ಸಂಸ್ಥೆ ಮೊದಲಾದ ಎಲ್ಲ ಬಗೆಯ ಚುನಾವಣೆಯ ಪ್ರಕಾರಗಳನ್ನು ವಿವರಿಸಿ, ಚುನಾವಣೆಯ ಪೂರ್ವ ಹಾಗೂ ನಂತರದ ಸಮಸ್ಯೆಗಳಾದ— ಯಾವ ಪಕ್ಷದಿಂದ ಸ್ಪರ್ಧಿಸಬೇಕು ?

ಇಚ್ಛಾನುಸಾರದ ಪಕ್ಷದ ತಿಕೀಟು ಲಭಿಸಬಹುದೇ ? ಸ್ಪರ್ಧೆಯಲ್ಲಿಯ ಬಗೆ, ಆಯ್ಕೆಯಲ್ಲಿಯ ಪ್ರಕಾರ, ಚುನಾವಣಾ ತಂಟೆ, ಪಕ್ಷಾಂತರದ ಅವಾಂತರ, ಅಧಿಕಾರ, ಸ್ಥಾನ ಯಾರಿಗೆ ಲಭಿಸುವದು— ಇವೇ ಮೊದಲಾದ ವಿಷಯುಗಳನ್ನು ವಿವೇಚಿಸಿರುವದಲ್ಲದೆ ೧೮೯೫ ರಿಂದ ೧೯೫೫ ರೊಳಗೆ ಜನಿಸಿದ ವ್ಯಕ್ತಿಗಳ ಚುನಾವಣೆ ಹೇಗಾಗುತ್ತದೆ, ಹಾಗೂ ಮುಂಬರುವ ಇಪ್ಪತ್ತು ವರುಷಗಳ ಕಾಲ ಯಾವ ರಾಶಿಯವರಿಗೆ ಹೇಗಿದೆ ? ಇತ್ಯಾದಿ ಚುನಾ–ವಣೆಗೆ ಸಂಬಂಧಿಸಿದ ವಿಷಯಗಳ— ಮಾದರಿ ಜಾತಕದೊಂದಿಗೆ— ಸುದೀರ್ಘ ವಿಶ್ಲೇಷಣೆಯ ಪ್ರಪ್ರಥಮ ಸಂಶೋಧನಾತ್ಮಕ ಗ್ರಂಥವಿದು.

## ೧೩. ಪಂಚಾಂಗ ಪ್ರದೀಪ

ಬೆಲೆ : ೧೦–೮೦ ( ಚತುರ್ಥ ಆವೃತ್ತಿ )

ಹಿಂದೂ ಜೀವನದ ಅವಿಭಾಜ್ಯ ಅಂಗವಾದ ಪಂಚಾಂಗದ ಕೈಪಿಡಿ ಇದು. ಈ ಪುಸ್ತಕದಲ್ಲಿ ಪಂಚಾಂಗವನ್ನು ಹೇಗೆ ನೋಡಬೇಕು ? ತಿಥಿಗಳನ್ನು ನಿರ್ಣಯಿಸುವುದು ಹೇಗೆ ? ನಿತ್ಯ ನಕ್ಷತ್ರ ಹೇಗೆ ಕಂಡುಹಿಡಿಯಬೇಕು? ಮೊದಲಾದ ವಿಷಯಗಳನ್ನು ವಿವೇಚಿಸಲಾಗಿದೆ.

## ೧೪. ಗ್ರಹಗತಿ

ಬೆಲೆ : ರೂ. ೫–೦೦ ( ದ್ವಿತೀಯಾವೃತ್ತಿ )

ಈ ಗ್ರಂಥದಲ್ಲಿ ಗ್ರಹಗಳ ಗೋಚರೀ ಫಲಗಳಾವವು?ಗ್ರಹಗತಿಯನ್ನು ಹೇಗೆ ನೋಡಬೇಕು ? ವೃತ್ತಪತ್ರಿಕೆಯಲ್ಲಿಯ ನಿಯತಕಾಲಿಕ ರಾಶಿ ಭವಿಷ್ಯವನ್ನು ಹೇಗೆ ಬರೆಯುವರು? ಹೇಗ ಬರೆಯಬೇಕು ? ವೃತ್ತಪತ್ರಿಕೆಗಳಲ್ಲಿಯ ಭವಿಷ್ಯಗಳ ವಿಭಿನ್ನತೆಗೆ ಕಾರಣಗಳೇನು? ಆಯಾ ರಾಶಿಯವರಿಗೆ ಶುಭಾಶುಭ ಅವಧಿಗಳು ಪ್ರತಿ ವರ್ಷ ಯಾವವು? ಈ ಮೊದಲಾದ ಗ್ರಹಗಳ ಗೋಚರೀ ಫಲಗಳ ವಿಷಯವಾಗಿ ವಿವೇಚಿಸಿದ ಪುಸ್ತಕ.

## ತೀವ್ರ ಪ್ರಕಟವಾಗಲಿರುವ ನಕ್ಷತ್ರಗಳು

ಪರಿಹಾರ ಜ್ಯೋತಿಷ್ಯ ( ಅಚ್ಚಿನಲ್ಲಿ ) ಗ್ರಹದರ್ಶನ
ಗ್ರಹಯೋಗ ದಶಾದರ್ಪಣ ಕುಂಡಲೀ ಸಂಗ್ರಹ
ಶರೀರ ಲಕ್ಷಣ ಜ್ಯೋತಿಷ್ಯ ಪ್ರಸೂತಿ ಜ್ಯೋತಿಷ್ಯ
ಕುಂಡಲಿ ಗುಣನಿರ್ಣಯ ( ಅಚ್ಚಿನಲ್ಲಿ )